


## ಉಚಿತ ವಿದ್ಯಾರ್ಥಿ ನಿಲಯ & ವೇದ-ಸಂಸ್ಕೃತ ಮಹಾ ಪಾಠಶಾಲಾ

### ಸುವರ್ಣ ಮಹೋತ್ಸವ ನಿಧಿ ಸಮಿತಿ

| | | |
|---|---|---|
| ಕೆ. ಜಿ. ರಂಗಯ್ಯ, ಬಿ.ಎ., ಬಿ.ಇಡಿ.<br>ಕಾರ್ಯದರ್ಶಿ | ಶ್ರೀ ನಿ॥ ಪ್ರ॥ ಶ್ರೀ ಶಿವಕುಮಾರಸ್ವಾಮಿಗಳು<br>ಅಧ್ಯಕ್ಷರು | ವಿದ್ವಾನ್ ಬಿ. ಗಂಗಪ್ಪ<br>ಖಜಾಂಚಿ |

ಭಕ್ತ ಮಹಾಶಯರಲ್ಲಿ,

ಈ ಕ್ಷೇತ್ರವು ಪುರಾತನ ಕಾಲದಿಂದ ಶಿವಯೋಗಿಗಳ ಸಿದ್ಧಪುರುಷರ ಆವಾಸಸ್ಥಾನವಾಗಿದೆ. ಈ ಮಹಾಮಹಿಮರ ಶ್ರೇಣಿಯಲ್ಲಿ ಪ್ರಾತಃ ಸ್ಮರಣೀಯರಾದ ಶ್ರೀ ಶ್ರೀ ಉದ್ದಾನ ಸ್ವಾಮಿಗಳು ಸರ್ವಸಮಾಜದ ಕಲ್ಯಾಣವನ್ನು ಬಯಸಿ ಈಗ್ಗೆ ಸುಮಾರು ೫೦ ವರ್ಷಗಳ ಹಿಂದೆಯೇ ಈ ಕ್ಷೇತ್ರದಲ್ಲಿ ಉಚಿತ ವಿದ್ಯಾರ್ಥಿ ನಿಲಯವನ್ನೂ, ವೇದ ಪಾಠಶಾಲೆಯನ್ನೂ ಸ್ಥಾಪಿಸಿದರು. ಇಂದು ಶ್ರೀ ಕ್ಷೇತ್ರದಲ್ಲಿ ನಡೆಯುತ್ತಿರುವ ದಾಸೋಹ ಮತ್ತು ಇತರ ಇನ್ನೂ ಅನೇಕ ವಿದ್ಯಾ ಸಂಸ್ಥೆಗಳ ಜೊತೆಗೆ ಈ ಉಚಿತ ವಿದ್ಯಾರ್ಥಿನಿಲಯವು ಈಗಿನ ಕ್ಷೇತ್ರಾಧ್ಯಕ್ಷರಾದ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಅವಿಶ್ರಾಂತ ಶ್ರಮದ ಫಲವಾಗಿ ಈಗ ೩,೮೦೦ ಕ್ಕೂ ಮೇಲ್ಪಟ್ಟು ಎಲ್ಲಾ ಮತದ ವಿದ್ಯಾರ್ಥಿಗಳಿಗೂ ಉಚಿತ ಅಶನ ವಸತಿಗಳನ್ನು ಒದಗಿಸುತ್ತಾ, ದೇಶದಲ್ಲಿ ಏಕೈಕ ಸಂಸ್ಥೆಯಾಗಿದೆ. ವೇದ ಪಾಠಶಾಲೆಯು ಈಗ ವೇದ ಮತ್ತು ಸಂಸ್ಕೃತ ಮಹಾ ಪಾಠಶಾಲೆಯಾಗಿ ಎಲ್ಲಾ ಕೋಮಿನ ವಿದ್ಯಾರ್ಥಿಗಳಿಗೂ ವಿದ್ಯಾದಾನ ಮಾಡುತ್ತಿದೆ.

ಈ ಸಂಸ್ಥೆಗಳು ಕಳೆದ ೫೦ ವರ್ಷಗಳು ಸಮಾಜಕ್ಕೆ ಸಲ್ಲಿಸಿದ ಸೇವೆಯ ಸವಿ ನೆನಪಿಗಾಗಿ ಅವುಗಳ ಸುವರ್ಣ ಮಹೋತ್ಸವವನ್ನು ಇದೇ ಸಂವತ್ಸರದಲ್ಲಿ ಆಚರಿಸಿ, ಇನ್ನು ಮುಂದೆಯೂ ಇದೇ ರೀತಿ ಈ ಸಂಸ್ಥೆಗಳು ನಡೆಯುವ ಸಲುವಾಗಿ ಇದಕ್ಕೆ ತಕ್ಕ ಪ್ರಮಾಣದ ನಿಧಿಯೊಂದನ್ನು ನಿರ್ಮಿಸುವುದು ಅತ್ಯಾವಶ್ಯಕವೆನಿಸಿ, ದೇಶದಾದ್ಯಂತ ಈ ನಿಧಿ ಸಂಗ್ರಹಣೆಯನ್ನು ಕೈಗೊಳ್ಳಲಾಗಿದೆ. ಭಕ್ತ ಮಹಾಶಯರು ಉದಾರವಾಗಿ ಈ ನಿಧಿಗೆ ಸಹಾಯ ಮಾಡುವುದರ ಮೂಲಕ ಈ ಸಂಸ್ಥೆಗಳ ಕಾರ್ಯಗಳನ್ನು ಯಶಸ್ವಿಗೊಳಿಸಲು ವಿನಂತಿ ಮಾಡುತ್ತೇವೆ.

ಇತಿ ತಮ್ಮ ವಿಶ್ವಾಸಿಗಳು,
ಸಮಿತಿಯ ಅಪ್ಪಣೆಯಂತೆ
ಕೆ. ಜಿ. ರಂಗಯ್ಯ
ಕಾರ್ಯದರ್ಶಿ

# ‘ಸಿದ್ಧಗಂಗಾ’

(ತ್ರೈಮಾಸಿಕ)

ಸಂಚಿಕೆ ೪

೧೯೬೮



ಸಿದ್ಧಗಂಗಾ ಹಳೆಯ ವಿದ್ಯಾರ್ಥಿ ಸಂಘ

ಸಿದ್ಧಗಂಗಾ.

## ವಿನಮ್ರ ಪ್ರಾರ್ಥನೆ.



ನಮ್ಮ ಸಂಘದವತಿಯಿಂದ ಹೊರಡತಕ್ಕ 'ಸಿದ್ಧಗಂಗಾ' ತ್ರೈಮಾಸಿಕದ ಆರ್ಥಿಪರಿಸ್ಥಿತಿಯನ್ನು ಉತ್ತಮಪಡಿಸಿ ಲೇಖಕರಿಗೆ ಸಂಭಾವನೆಯನ್ನು ಕೊಟ್ಟು ಉತ್ತಮ ಮಟ್ಟಕ್ಕೆ ತರಬೇಕೆಂದು ವಿಶೇಷ ಪ್ರಯತ್ನಿಸುತ್ತಿದ್ದೇವೆ. ಕಾರಣ ವಾಚಕವೃಂದ, ಅಭಿಮಾನಿಗಳ ಸಮೂಹ ಉದಾರತೆಯಿಂದ ಧನ ಸಹಾಯ ಸಲ್ಲಿಸುವರೆಂದು ಆಶಿಸಿದ್ದೇವೆ. ಸದ್ಯದ ಪರಿಸ್ಥಿತಿಯಲ್ಲಿ ಲೇಖಕರಿಗೆ ಸಂಭಾವನೆ ಕೊಡಲು ಅಸಾಧ್ಯವಾಗಿದೆ.

200 ರೂ.ಗೆ ಮೇಲ್ಪಟ್ಟು ನೀಡುವವರು ಪೋಷಕರು

150 ರೂ. ಕೊಡುವವರು ಪ್ರೋತ್ಸಾಹಕರು.

100 ರೂ. ಕೊಡುವವರು ಸಹಾಯಕರು.

50 ರೂ. ಕೊಡುವವರು ಹಿತೈಷಿಗಳು.

ಹೀಗೆ ಧನಸಹಾಯ ಮಾಡಿದ ಮಹನೀಯರ ಹೆಸರುಗಳನ್ನು ಕೃತಜ್ಞತಾ ಭಾವದಿಂದ ಸ್ಮರಿಸಿ ಪ್ರಕಟಿಸಲಾಗುವುದು.

## ಚಂದಾದಾರರಲ್ಲಿ ವಿನಂತಿ

ಸನ್ಮಾನ್ಯ ಚಂದಾದಾರರು ತಮ್ಮ ಚಂದಾಹಣವನ್ನು ದಯವಿಟ್ಟು ತೀವ್ರಕಳುಹಿಸಿ ಸಹಕರಿಸಬೇಕಲ್ಲದೆ ಈ ಸಂಚಿಕೆಗಳು ತಮಗೆ ಸಂದಾಯವಾದ ಮೇಲೆ ಪುನಃ ಹೊಸ ವರುಷದ ಚಂದಾಹಣವನ್ನು ಅಭಿಮಾನದಿಂದ ಕಳುಹಿಸಿ ಪತ್ರಿಕೆ ಯಶಸ್ವಿಯಾಗಿ ಹೊರಬರುವಂತೆ ಸಹಕರಿಸಬೇಕಾಗಿ ಪ್ರಾರ್ಥಿಸಿಕೊಳ್ಳುತ್ತೇವೆ.


## "ಸಿದ್ಧಗಂಗಾ"

ಸಂಪಾದಕ ಮಂಡಳಿ:—

ಚನ್ನಪ್ಪ ಎರೇಸೀಮೆ. (ಪ್ರಧಾನ ಸಂಪಾದಕ)
ರಾಜೀವಲೋಚನ ಎಂ.ಎ.
ಹೇ.ಚಿ. ಶಾಂತವೀರಯ್ಯ ಎಂ.ಎ.ಬಿ.ಇಡಿ
ಟಿ.ಆರ್. ಮಹದೇವಯ್ಯ ಎಂ.ಎ.
ಆರ್. ರಾಚಯ್ಯ ಎಂ.ಎ
ಕೆ.ಪಿ ಶಿವಲಿಂಗಯ್ಯ ಬಿ.ಎ.

ಮುದ್ರಕರು:—
ಸಿ. ಚಂದ್ರಶೇಖರರಾವ್ ಬಿ.ಎಸ್‌ಸಿ.,
ಲಿಯೋ ಪ್ರಿಂಟರ್ಸ್, ಸೌರಾಷ್ಟ್ರಪೇಟೆ, ಬೆಂಗಳೂರು-2

ಪತ್ರಿಕೆ ಪ್ರಕಟವಾಗುವ ಸ್ಥಳ:—
ಸಿದ್ಧಗಂಗಾ ಕ್ಷೇತ್ರ.

ಪತ್ರಿಕೆ ಹೊರಡುವ ಮಾಸಗಳು:—
ಜನವರಿ, ಏಪ್ರಿಲ್, ಜುಲೈ, ಅಕ್ಟೋಬರ್.


## ಲೇಖಕರಲ್ಲಿ ವಿಜ್ಞಾಪನೆಗಳು

ಧರ್ಮ, ಕಲೆ, ಇತಿಹಾಸ, ನಾಟಕ, ಕವನ, ಲಘುಹರಟೆ, ಕಥೆ, ಜೀವನಚರಿತ್ರೆ, ವಿಮರ್ಶೆ, ಸಾಹಿತ್ಯ, ವಿಜ್ಞಾನ, ಶಿಕ್ಷಣಕ್ಕೆ ಸಂಬಂಧಿಸಿದ ಹಾಳೆಯ ಒಂದೇ ಮಗ್ಗುಲಿಗೆ ಬರೆದ ಲೇಖನಗಳನ್ನು ಕೃತಜ್ಞತೆಯಿಂದ ಸ್ವೀಕರಿಸುತ್ತೇವೆ. ಲೇಖನಗಳನ್ನು ಪ್ರಕಟಿಸುವುದು ಸಂಪಾದಕ ಮಂಡಲಿಯ ತೀರ್ಮಾನಕ್ಕೊಳಪಟ್ಟಿದೆ. ಆಕ್ಷೇಪಾರ್ಹ ಲೇಖನಗಳನ್ನು ಪ್ರಕಟಿಸುವುದಿಲ್ಲ. ಲೇಖನಗಳು ಭಾಷಾಂತರಗಳಾಗಿದ್ದರೆ ಮೂಲ ಲೇಖಕರ ಅನುಮತಿ ಪಡೆದಿರಬೇಕು. ಆಕ್ಷೇಪಾರ್ಹ ವಿಷಯಗಳಿಗೆ ಲೇಖಕರೇ ಹೊಣೆ. ವಿಮರ್ಶೆಗೆ ೩ ಪುಸ್ತಕಗಳನ್ನು, ವಿನಿಮಯಕ್ಕೆ ಪತ್ರಿಕೆಗಳನ್ನೂ ಪ್ರಧಾನ ಸಂಪಾದಕರು, ಸಿದ್ಧಗಂಗಾ597, ಹೊಸಳ್ಳಿ ಎಕ್ಸ್‌ಟೆನ್ಷನ್ ಬೆಂಗಳೂರು 23. ಈ ವಿಳಾಸಕ್ಕೆ ದಯವಿಟ್ಟು ಕಳಿಸಿಕೊಡಬೇಕು.

ಪ್ರಕಟವಾಗದ ಲೇಖನಗಳನ್ನು ತಿರುಗಿ ಕಳಿಸುವ ಏರ್ಪಾಡಿಲ್ಲ. ಲೇಖನಗಳನ್ನು ಪ್ರಧಾನ ಸಂಪಾದಕರ ವಿಳಾಸಕ್ಕಾಗಲಿ, ವ್ಯವಸ್ಥಾಪಕರು ಸಿದ್ಧಗಂಗಾ ತ್ರೈಮಾಸಿಕ ಶ್ರೀ ಸಿದ್ಧಗಂಗಾ ಕ್ಷೇತ್ರ ತುಮಕೂರು ಜಿಲ್ಲಾ ಈ ವಿಳಾಸಕ್ಕಾಗಲಿ ಕಳಿಸಿ ಕೊಡಬಹುದು.

# ವಿಷಯಾನುಕ್ರಮಣಿಕೆ



*Ref. No*.....................

ಗುರುಕುಲಾಶ್ರಮವೂ, ಬೃಹತ್ ವಿದ್ಯಾಸಂಸ್ಥೆಗಳನ್ನೊಳಗೊಂಡ ಜ್ಞಾನಪೀಠವೂ, ಪುಣ್ಯಕ್ಷೇತ್ರವೂ ಆದ ಶ್ರೀ ಸಿದ್ಧಗಂಗಾ ಕ್ಷೇತ್ರದಿಂದ

**ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರ**

ಕೃಪಾಶ್ರಯದಲ್ಲಿ

# ★ 'ಸಿದ್ಧಗಂಗಾ' ★

ಎಂಬ ತ್ರೈಮಾಸಿಕ ಪತ್ರಿಕೆ ಪ್ರಕಟವಾಗುತ್ತಿದ್ದು ನಾಲ್ಕನೆಯ ವರ್ಷಕ್ಕೆ ಅಡಿ ಇಟ್ಟಿರುವ ಸಂತೋಷದ ಸಂಗತಿಯನ್ನು ತಿಳಿಸಲು ನಮಗೆ ಅತೀವ ಹೆಮ್ಮೆಯಾಗುತ್ತಿದೆ.

ಆದ್ದರಿಂದ ತಾವು ಈ ಪತ್ರಿಕೆಯ ಸರ್ವತೋಮುಖವಾದ ಅಭಿವೃದ್ಧಿಗೆ ಚಂದಾದಾರರಾಗುವ ಮೂಲಕ ಆರ್ಥಿಕ ಸಹಾಯನೀಡಿ ಪ್ರೋತ್ಸಾಹಿಸಲು ಪ್ರಾರ್ಥಿಸುತ್ತೇವೆ.

ನಮ್ಮ ಸರ್ಕಾರದ ವಿದ್ಯಾ ಇಲಾಖೆಯ ಮಾನ್ಯ ಡೈರೆಕ್ಟರ್ ಅವರು CL417–4/65-66 [29-4-66] ಮೂಲಕ ಪ್ರಾಥಮಿಕಶಾಲೆ, ಪ್ರೌಢಶಾಲೆ, ಶಿಕ್ಷಣಶಾಲೆ ಹಾಗೂ ಸಾರ್ವಜನಿಕ ಗ್ರಂಥ-ಭಂಡಾರಗಳು ಈ ಪತ್ರಿಕೆಯನ್ನು ಕೊಂಡುಕೊಳ್ಳಬಹುದೆಂದು ಆಜ್ಞೆ ಹೊರಡಿಸಿರುವರು.

ವಾರ್ಷಿಕಚಂದಾ : ರೂ. 5-00 (ಅಂಚೆ ವೆಚ್ಚ ಸೇರಿ)

ಪ್ರಕಾಶಕರು,
**ಹಳೆಯ ವಿದ್ಯಾರ್ಥಿ ಸಂಘ,**
ಶ್ರೀ ಸಿದ್ಧಗಂಗಾ ಕ್ಷೇತ್ರ, ತುಮಕೂರು ಜಿಲ್ಲೆ



## ಮಾನ್ಯ ಓದುಗರಲ್ಲಿ ವಿನಂತಿ.

"ಸಿದ್ಧಗಂಗಾ" ತ್ರೈಮಾಸಿಕ ಪತ್ರಿಕೆಗೆ ಚಂದಾದಾರರಾಗಲು ಚಂದಾಹಣವನ್ನು ಈ ಕೆಳಗಿನ ವಿಳಾಸಕ್ಕೆ ಕಳುಹಿಸಬೇಕಾಗಿ ಪ್ರಾರ್ಥನೆ.

ಪ್ರಕಾಶಕರು :
**"ಸಿದ್ಧಗಂಗಾ"**
ಸಿದ್ಧಗಂಗಾ ಕ್ಷೇತ್ರ
ತುಮಕೂರು ಜಿಲ್ಲೆ.

# ಸಂಪಾದಕೀಯ

೧೫ನೆಯ ಶತಮಾನದಿಂದ ಸ್ಪಷ್ಟವಾದ ಐತಿಹಾಸಿಕ ಹಿನ್ನಲೆಯನ್ನು ಪಡೆದ ಸುಕ್ಷೇತ್ರವಾದ ಶ್ರೀ ಸಿದ್ಧಗಂಗಾ ಕ್ಷೇತ್ರವು ಹರದನ ಹಳ್ಳಿಯ ಗೋಸಲ ಸಿದ್ಧೇಶ್ವರರು, ತೋಂಟದ ಸಿದ್ಧಲಿಂಗೇಶ್ವರರೇ ಮೊದಲಾದ ಇತಿಹಾಸ ಪ್ರಸಿದ್ಧ ಮಹಾ ಜಂಗಮ ಮೂರ್ತಿಗಳ ಕಾರ್ಯ ಕ್ಷೇತ್ರವಾಗಿ ಜನ ಜೀವನದ ಆಧ್ಯಾತ್ಮಿಕ ಮತ್ತು ಸಾಮಾಜಿಕ ಲೋಪದೋಷಗಳ ತಿದ್ದುವಿಕೆಯ ಬಹುಮುಖ ಸೇವಾಕಾರ್ಯವನ್ನು ಸಾಧಿಸಿದೆ. ಪ್ರಕೃತಿಯ ಸಹಜ ಸುಂದರ ಸನ್ನಿವೇಶದಲ್ಲಿರುವ ಈ ಕ್ಷೇತ್ರವು ಬೃಹತ್ತು ಮಹತ್ತುಗಳಿಂದ ಕೂಡಿ ಮಧ್ಯವರ್ತಿ ಕೇಂದ್ರ ಸ್ಥಾನವಂತಿದ್ದು ಅನೇಕ ರಚನಾತ್ಮಕ ಚಟುವಟಿಕೆಗಳನ್ನು ಮಾಡಿ ಕೀರ್ತಿಭಾಜನವಾಗಿದೆ.

ಕಳೆದ ಸುಮಾರು ಮುಕ್ಕಾಲು ಶತಮಾನದಿಂದ ಈ ಕ್ಷೇತ್ರವು ಸಕಲ ಜೀವಾತ್ಮರ ಲೇಸಿಗಾಗಿ ಶಕ್ತಿಮೀರಿ ಶ್ರಮಿಸುತ್ತ ಬಂದಿದೆ. ಪೂಜ್ಯ ಉದ್ದಾನ ಶಿವಯೋಗೀಶ್ವರರಿಂದ ಅಂಕುರ ಪ್ರಾಯವಾಗಿ ಮೊವಲ್ಗೊಂಡ ಲೌಕಿಕ ಪಾರಮಾರ್ಥಿಕ ವಿದ್ಯಾ ವೈದುಷ್ಯ ಪ್ರಧಾನ ಶಿಕ್ಷಣ ಸಂಸ್ಥೆಗಳು ಉಚಿತ ವಿದ್ಯಾರ್ಥಿ ನಿಲಯವೂ ಅವರ ಕರಕಂಜ ಸಂಜಾತರೂ, ವೀರವೈರಾಗ್ಯ ಚಿತ್ತರೂ, ಅಸೀಮ ಸಂಘಟನಾಚಾತುರೀ ಚತುರಮತಿಗಳೂ, ತ್ರಿವಿಧ ದಾಸೋಹ ಸದ್ಭಾವ ಸಂಪನ್ನರೂ, ಲಿಂಗಲೀಲಾ ವಿನೋದ ಪರಿಪಕ್ವ ಪ್ರಸನ್ನ ಮನಸ್ಕರೂ ಆದ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ನಿಷ್ಕಾಪಟ್ಯ ಮತ್ತು ಪ್ರಾಮಾಣಿಕ ನಡೆನುಡಿಗಳಿಂದ ಬಿತ್ತರಂ ಬಡೆದು ಎತ್ತೆತ್ತಲೂ ಹಬ್ಬಿನಿಂತು ಸಾರ್ವಜನಿಕ ಸೇವಾಕ್ಷೇತ್ರವನ್ನು ವಿಶಾಲಗೊಳಿಸಿವೆ ಲಕ್ಷೋಪ ಲಕ್ಷ ಜನ ಶ್ರೀಕ್ಷೇತ್ರದ ಲಾಭವನ್ನು ಪಡೆದು ಇಂದು ಸಮಾಜದಲ್ಲಿ ಬಹುಮುಖ ಸೇವಾಕಾರ್ಯನಿರತರಾಗಿದ್ದಾರೆ. ನೆಮ್ಮದಿಯಿಂದ ಬಾಳಿಬದುಕುತ್ತಿದ್ದಾರೆ. ಇವರೆಲ್ಲ ಈ ಸಂಸ್ಥೆಯೆಂಬ ಸೂರ್ಯನ ಒಂದೊಂದು ರಶ್ಮಿ. ಇಂಥ ಕೀರ್ತಿವೆತ್ತ ಮಹಾ ವಿದ್ಯಾ ಸಂಸ್ಥೆಯಾದ ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಮಹಾ ಪಾಠಶಾಲೆ ಮತ್ತು ವೇದ ಮಹಾ ಪಾಠಶಾಲೆಗಳು ಉಚಿತ ವಿದ್ಯಾರ್ಥಿ ನಿಲಯವೂ ಇನ್ನು ಕೆಲವಾರು ತಿಂಗಳಲ್ಲಿ ತಮ್ಮ ಸುವರ್ಣ ಮಹೋತ್ಸವಗಳನ್ನು ಇದಕ್ಕಾಗಿ ರಚಿಸಲ್ಪಟ್ಟಿರುವ ಉಚಿತ ವಿದ್ಯಾರ್ಥಿ ನಿಲಯ, ವೇದ-ಸಂಸ್ಕೃತ ಮಹಾಪಾಠಶಾಲಾ ಸುವರ್ಣ ಮಹೋತ್ಸವ ನಿಧಿಸಮಿತಿಯವತಿಯಿಂದ ಆಚರಿಸಿಕೊಳ್ಳಲಿವೆ. ಸಂಸ್ಥೆಯ ಮಹತ್ತು ಬೃಹತ್ತುಗಳನ್ನು ಲಕ್ಷ್ಯಿಸಿ ಈ ಕಾರ್ಯವನ್ನು ಯಶಸ್ವಿಯಾಗಿ ನೆರವೇರಿಸಲು ಭಕ್ತಗಣ, ಅಭಿಮಾನಿಗಳ ಸಮೂಹ, ಕಾರ್ಯತತ್ಪರವಾಗಿದೆ.

ಈ ಸಂದರ್ಭದಲ್ಲಿಯೇ ಇಂಥ ಮಹಾ ಸಂಸ್ಥೆಯನ್ನು ಪರಿಪೋಷಿಸಿ ಬೆಳೆಸಿ ಸತ್ಫಲಗಳನ್ನು ಸಕಲ ಸಮಾಜ ಬಾಂಧವರಿಗೂ ಉಣಬಡಿಸುವ ಪುಣ್ಯಶ್ಲೋಕರಾದ ಮಹಾ ಜಂಗಮ ಮೂರ್ತಿ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ರಜತಮಹೋತ್ಸವವನ್ನು ಆಚರಿಸಬೇಕೆಂದು ಹಳೆಯ ವಿದ್ಯಾರ್ಥಿ ಸಂಘದವರೂ ಮತ್ತು ಸಾರ್ವಜನಿಕ ಭಕ್ತಮಂಡಳಿಯವರೂ ಅಭಿಮಾನಿಗಳೂ ಕಾರ್ಯಪ್ರವೃತ್ತರಾಗಿ ಈ ದಿಸೆಯಲ್ಲಿ ಬಹುಮುಖ ಕಾರ್ಯವನ್ನು ಸಾಧಿಸಿದ್ದಾರೆ. ವಿಸ್ತಾರವಾಗಿರುವ ಶ್ರೀಗಳವರ ಸೇವಾಕ್ಷೇತ್ರದ ಘನತೆ ಗೌರವಗಳಿಗನುಗುಣವಾಗಿ ಹಳೆಯ ವಿದ್ಯಾರ್ಥಿ ಸಂಘವೂ ಸಾರ್ವಜನಿಕರೂ ಒಂದು ನಿಧಿಯನ್ನು ಸಮರ್ಪಿಸುವ ಸತ್ಸಂಕಲ್ಪ ಸಮನ್ವಿತರಾಗಿದ್ದಾರೆ. ಸಾರ್ವಜನಿಕ ನಿಧಿಸಂಗ್ರಹಣಾಕಾರ್ಯ ಗೌರವವನ್ನು ಸುವರ್ಣ ಮಹೋತ್ಸವ ನಿಧಿಸಮಿತಿಯವರೂ ಶರಣತತ್ತ್ವ ನಿಷ್ಠರಾದ ಶ್ರೀಮಾನ್ ಕೆ. ತಿಪ್ಪೆರುದ್ರಯ್ಯನವರು ಐ. ಎ. ಸ್. (ನಿವೃತ್ತ) ಅವರೂ ವಹಿಸಿಕೊಂಡು ಗಣನೀಯ ಪ್ರಮಾಣದಲ್ಲಿ ಶೇಖರಿಸುತ್ತಿರುವಂತೆ

ಸಂತೋಷಪ್ರದ. ಹಳೆಯ ವಿದ್ಯಾರ್ಥಿಗಳು ತಮ್ಮ ತಮ್ಮ ಒಂದು ತಿಂಗಳ ಉತ್ಪತ್ತಿಯನ್ನು ಈ ಅಳಿಲು ಸೇವೆಗೆ ಮೀಸಲಿಡಲು ಸಂಕಲ್ಪಿಸಿ ಈಗಾಗಲೇ ಕೆಲವರು ತಮ್ಮ ತಮ್ಮ ವಂತಿಗೆ ಸಲ್ಲಿಸಿದ್ದಾರೆ, ಸಲ್ಲಿಸುತ್ತಿದ್ದಾರೆ. ನಾಡಿನ ಪರನಾಡಿನ ವಿವಿಧ ಇಲಾಖೆಗಳಲ್ಲಿ ಸೇವೆಸಲ್ಲಿಸುತ್ತಿರುವ ಎಲ್ಲ ಹಳೆಯವಿದ್ಯಾರ್ಥಿಗಳ ನಿಖರವಾದ ವಿಳಾಸ ಸಿಕ್ಕದೆ ಹೋಗಿದೆ. ಆದುದರಿಂದ ಅಭಿಮಾನಿಗಳೂ ಸಂಸ್ಥೆಯ ಒಂದೊಂದು ಬೆಳಕಿನ ಕಿರಣದಂತೆ ಮಿನುಗುತ್ತಿರುವವರೂ ಆದ ಸಮಸ್ತ ಸದಸ್ಯರೂ ಬೇಗನೆ ಈ ವಂತಿಗೆಯನ್ನು ಸಲ್ಲಿಸುವುದರ ಮೂಲಕ ಹಳೆಯ ವಿದ್ಯಾರ್ಥಿ ಸಂಘದ ಆಶೋತ್ತರಗಳನ್ನು ಈಡೇರಿಸುವುದರಲ್ಲಿ ಸಫಲರಾಗುತ್ತಾರೆಂದು ನಂಬಿದ್ದೇವೆ.

ಈ ಮಹಾಕ್ಷೇತ್ರದಿಂದ ಪ್ರಕಟವಾಗುತ್ತಿರುವ ಈ ತ್ರೈಮಾಸಿಕ ' ಸಿದ್ಧಗಂಗಾ ' ಪತ್ರಿಕೆಯ ಸಂಪಾದಕ ಮಂಡಲವು ಪ್ರಕೃತ ಸಾಲಿಗೆ ನೂತನವಾಗಿ ನೇಮಕಗೊಂಡಿದೆ ಪತ್ರಿಕೆಯು ಸಾರ್ವಜನಿಕರ ಜ್ಞಾನಾಭಿವೃದ್ಧಿಗೆ ಬಹುಮುಖ ಸೇವೆ ಸಲ್ಲಿಸುವ ಸತ್ಸಂಕಲ್ಪಭರಿತವಾಗಿದೆ. ವಿಚಾರವಾದಿಗಳ, ಸಂಶೋಧಕರ, ಸಾಹಿತಿಗಳ, ದಾರ್ಶನಿಕರ, ಇತಿಹಾಸಜ್ಞರ ಸಹಾಯ ಸಹಕಾರಗಳನ್ನು ಅಪೇಕ್ಷಿಸುತ್ತದೆ. ತನ್ಮೂಲಕ ಮಹಾಸಂಸ್ಥೆಯ ಅಳಿಲು ಸೇವೆಯನ್ನು ನಿರ್ವಹಿಸುವ ಭರವಸೆ ಹೊಂದಿದೆ ಪತ್ರಿಕೆಯ ಬಹುಮುಖ ಸೇವಾಮನೋಭಾವಕ್ಕೆ ನೆರವಾಗಿ ಸೇವೆಸಲ್ಲಿಸಲು ಶ್ರೀಮಾನ್ ಹಿ. ಚಿ. ಶಾಂತವೀರಯ್ಯ ಎಂ. ಎ., ಬಿ.ಇಡಿ. ಉಪಸಂಪಾದಕರು ಕನ್ನಡ ಶಬ್ದಕೋಶ ಸಾಹಿತ್ಯ ಪರಿಷತ್ ಬೆಂಗಳೂರು ಅವರೂ ಮತ್ತು ಅಲ್ಲಿಯೇ ಸಹಸಂಪಾದಕರಾಗಿ ಕೆಲಸ ಮಾಡುತ್ತಿರುವ ಶ್ರೀ ಮಹದೇವಯ್ಯ ಎಂ. ಎ. ಅವರೂ, ರೇಣುಕಾಚಾರ್ಯ ಕಾಲೇಜಿನ ಅಧ್ಯಾಪಕರಾದ ಶ್ರೀಮಾನ್ ರಾಚಯ್ಯನವರು ಎಂ. ಎ ಅವರೂ ಸಂಪಾದಕ ಮಂಡಲಿಯಲ್ಲಿ ನೂತನವಾಗಿ ಸೇರಿದ್ದಾರೆ. ಈ ಉತ್ಸಾಹೀ ವಿದ್ವಾಂಸರು ಪತ್ರಿಕೆಯನ್ನೂ ಇನ್ನೂ ಹೆಚ್ಚಿನ ಮಟ್ಟಕ್ಕೆ ತಮ್ಮ ಪರಿಶ್ರಮದ ಫಲವಾಗಿ ತರುವರೆಂಬ ಭರವಸೆ ಎಂದಿಗಿಂತಲೂ ಹೆಚ್ಚಾಗಿದೆ. ಇವರು ಮೂವರೂ ಹಳೆಯ ವಿದ್ಯಾರ್ಥಿ ಸಂಘದ ಪ್ರತಿನಿಧಿಗಳಲ್ಲದಿದ್ದರೂ ಹಳೆಯ ವಿದ್ಯಾರ್ಥಿ ಸಂಘದ ಮತ್ತು ಶ್ರೀಕ್ಷೇತ್ರದ ಶ್ರದ್ಧಾಭಕ್ತಿ ವಿಶ್ವಾಸಪೂರ್ಣ ಸಹಕಾರಿಗಳಾಗಿದ್ದಾರೆ.

ಈ ಕ್ಷೇತ್ರದ ಹಳೆಯ ವಿದ್ಯಾರ್ಥಿ ಸಂಘ ಚಿಕ್ಕದಲ್ಲ ; ದೊಡ್ಡದು. ಸಂಖ್ಯೆಯಲ್ಲಲ್ಲ ; ಗುಣದಲ್ಲೂ ಕೂಡ. ವಿದ್ವಾಂಸರಿಂದ ಕೂಡಿದೆ. ವಿಜ್ಞಾನಿಗಳಿಂದ, ಸಾಹಿತಿಗಳಿಂದ, ದಾರ್ಶನಿಕರಿಂದ, ಕೃಷಿಕಾಯಕ ಸದ್ಭಾವಿಗಳಿಂದ, ಎಲ್ಲ ಬುದ್ಧಿಜೀವಿಗಳ ಸಂಪತ್ತೂ ಈ ಸಂಘಕ್ಕಿರುವುದಾಗಿ ಇದು ಮನಸ್ಸು ಮಾಡಿದರೆ ಅಸಾಧ್ಯವಾದ ಕಾರ್ಯಗೌರವಗಳೇ ಇಲ್ಲ. ಸಂಘಟಿತರಾಗಿ ಮಹಾಸಂಸ್ಥೆಯ ಸೇವೆ ಸಲ್ಲಿಸುವ ಮನೋಭಾವ ಬರಬೇಕು. ಎಂದು ಸಂಘದ ಪತ್ರಿಕೆ ಮನವಿ ಮಾಡಿಕೊಳ್ಳುವುದು.

# ಶಿವಾನುಭಾವ

ತಾ|| 12-4-1955 ನೆಯ ಮಂಗಳವಾರ ಶಿವಗಂಗಾ ಕ್ಷೇತ್ರದ ಹೊನ್ನಮ್ಮನ ಗವಿಮಠದ ಚರಿತ್ರಾರ್ಹ ಸಭಾ ಭವನದಲ್ಲಿ ನಡೆದ ಶಿವಾನುಭವ ಸಮ್ಮೇಲನದ ಅಧ್ಯಕ್ಷ ಪೀಠದಿಂದ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಅಪ್ಪಣೆ ಕೊಡಿಸಿದ ಭಾಷಣಸಾರ.

(ಸಂಗ್ರಹ ಚನ್ನಪ್ಪ ಎರೇಸೀಮೆ.)

ಜ್ಞಾನಿಗಳು ತತ್ತ್ವಬೋಧೆ ಮಾಡುವಾಗ ನಮಗೆ ಮೂರು ಮಾರ್ಗಗಳನ್ನು ಹೇಳುತ್ತಾರೆ : ಒಳ್ಳೆಯ ವಿಚಾರಗಳನ್ನು ಶ್ರವಣ ಮಾಡುವಿಕೆ, ಶ್ರವಣ ಮಾಡಿದ ಒಳ್ಳೆಯ ವಿಚಾರಗಳನ್ನು ಮನನ ಮಾಡುವಿಕೆ. ತದ ನಂತರ ಅದರ ನಿಧಿಧ್ಯಾಸ ಮಾಡುವುದು. ಇವು ಬಹು ಮುಖ್ಯವಾದುವು, ಪ್ರಾಕೃತನು ಅಪ್ರಾಕೃತನಾಗುವುದಕ್ಕೆ. ಭಾವನೆಯ ಮುಂದೆ ಆದರ್ಶಮಯ ಉದಾತ್ತತತ್ತ್ವಗಳು ಪದೇಪದೇ ಹರಿಯುತ್ತಿದ್ದರೆ ಅವೇ ಸ್ವಭಾವಗಳಾಗಿ ಮಾರ್ಪಡುತ್ತವೆ. ಸಂಸ್ಕಾರ ಹೊಂದಿದ ಇಂಥ ಮನೋಬುದ್ಧಿಗಳನ್ನು ಶಿವಭಾವಾಪನ್ನ ಮನೋಬುದ್ಧಿ ಗಳೆಂದು ಹೇಳುತ್ತಾರೆ. ಹೀಗೆ ಸಾವಧಾನವಾಗಿ ಸಂಸ್ಕಾರಗೊಳಿಸಿಕೊಂಡ ಮನೋಬುದ್ಧಿಗಳಿಂದ ಮನುಷ್ಯನು ಅದ್ಭುತ ಶಕ್ತಿಯನ್ನು ಸಂಪಾದಿಸಬಹುದು. ತನ್ಮೂಲಕ ಸುಖಸಮೃದ್ಧಿಯನ್ನು ಪಡೆಯಬಹುದು. ಸುಖವೆಂಬುದು ಬಾಹ್ಯೋಪಕರಣಗಳಿಂದ ಲಭ್ಯವಾಗುವ ಸ್ಥಿತಿಯಲ್ಲ. ಬಾಹ್ಯದ ಯಾವ ಉಪಾಧಿಯೂ ಸುಖ ವನ್ನು ಅರಸಿ ತರಲಾರದು. ಅದು ಆಂತರಿಕವಾಗಿ ಹೊರಹೊಮ್ಮುವ ಮಾನಸಿಕ ತೃಪ್ತಿ. ಯಾರ ಹೃದಯ ಉನ್ನತ ಮಟ್ಟದ್ದೊ, ಯಾರಬುದ್ಧಿ ಲೋಕೋಪಕಾರಕ ಮಾರ್ಗದ್ದೊ, ಯಾರ ಚಿತ್ತ ತೃಪ್ತ್ಯಬ್ಧಿಯ ಆಳದಲ್ಲಿ ಮುಳುಗಿದುದೋ ಅವನೇ ಸುಖಿ. ಅಂಥ ಸ್ಥಿತಿಯೇ ಸುಖ. ಇಂದು ಮನುಷ್ಯನು ವೈಷಯಿಕ ಕಾಮನೆಗಳೇ ಸುಖಕೊಡುತ್ತವೆಂದು ಅವನ್ನೇ ಬೆನ್ನುಹತ್ತಿ ವಿಶೇಷ ದುಃಖಕ್ಕೀಡಾಗುತ್ತಿದ್ದಾನೆ. ಜೀವನದಲ್ಲಿ ನೈಜ ಸ್ಥಿತಿಯಿಲ್ಲ, ಆಡಂಬರವನ್ನು ಮುಂದು ಮಾಡಿಕೊಂಡು ಸಾಗುತ್ತಿ ದ್ದಾನೆ. ಮನಬಳಲಿಸಿ, ತನುವ ದಂಡಿಸಿ ಕಾಯಕಪ್ಟವ ಮಾಡುವಲ್ಲಿ ವಿಮುಖನಾಗುತ್ತಿದ್ದಾನೆ. ಇದು ನಿಜಕ್ಕೂ ಜೀವಿತಕ್ಕೆ ಮೂಲ್ಯ ತರತಕ್ಕುದಲ್ಲ. ಕರ್ತವ್ಯದಲ್ಲಿ ಶ್ರದ್ಧಾಭಕ್ತಿಗಳುಂಟಾಗಿ ಸತ್ಯಶುದ್ಧವಾಗಿ ಅವನ್ನಾಚರಿಸಿ ಲಿಂಗಪ್ರಸಾದ ಭೋಗೋಪಭೋಗಿಯಾಗಬೇಕು. ಇಂಥ ನಡೆಯನ್ನೇ ಬಸವಾದಿ ಪ್ರಮಥವರೇಣ್ಯರು 'ಕಾಯಕ' ಎಂದು ಕರೆದಿದ್ದಾರೆ. ವ್ಯಕ್ತಿ ವ್ಯಕ್ತಿಯೂ ಈ ಮಾರ್ಗಾನುಸಂಧಾನ ಮಾಡಿದರೆ, ಕಾಯಕನಿಷ್ಠ ನಾದರೆ ವ್ಯಕ್ತಿವ್ಯಕ್ತಿಯ ಸಂಪತ್ತೂ ಶಾಂತಿ ಸೌಹಾರ್ದ ಗಳೂ ಸಹಜವಾಗಿಯೇ ಉಂಟಾಗಿ ಸಾಮಾಜಿಕ ನೆಮ್ಮದಿ, ರಾಷ್ಟ್ರೀಯ ನೆಮ್ಮದಿಗಳುಂಟಾಗುವುವು. ಆರ್ಥಿಕ ಸುಭದ್ರವಾಗುವುದು. ಸ್ವತಂತ್ರ ಭಾರತದಲ್ಲಿ, ಉದಯೋ ನ್ಮುಖ ಭಾರತದಲ್ಲಿ ಇಂದು ಇಂಥ ನಡೆನುಡಿಗಳ ಅವಶ್ಯ ಕತೆ ಹೆಚ್ಚಾಗಿದೆ ಪ್ರಾಮಾಣಿಕವೂ, ನಿಷ್ಕಾಪಟ್ಯವೂ ಎಂಥ ದುರ್ಧರ ಪ್ರಸಂಗದಲ್ಲೂ ಧೈರ್ಯ ಸ್ಥೈರ್ಯಗಳಿಂದ ವರ್ತಿಸುವುದೂ ಒಂದು ರಾಷ್ಟ್ರದ ಪ್ರಬಲಶಕ್ತಿಗಳೆನಿಸಿವೆ. ಶಿವಾನುಭಾವ ಹೇಳುವುದೂ ಇದನ್ನೇ. ಶಿವಾನುಭಾವ ವೆಂದರೆ ನಿಚ್ಚ ನಿಚ್ಚ ಜೀವನವನ್ನು ಹೊರತುಪಡಿಸಿ ಬೇರೆ ಇಲ್ಲ. ಶಿವನ ಸಂಬಂಧವಾದ ಅನುಭವವನ್ನು ಮೈಗೂಡಿಸಿಕೊಳ್ಳುವುದು. ಪ್ರಕೃತಿ ಭೂತನಾದ ಗುಣಗಳನ್ನು ಅಪ್ರಾಕೃತಗೊಳಿಸಿಕೊಳ್ಳುವುದು. ಈ ಮಾರ್ಗದಲ್ಲಿ ಹೋಗುವುದಕ್ಕೆ ಇಷ್ಟಲಿಂಗನಿಡಿದು ಸಾಧನೆ ಸಾಗಬೇಕೆಂದು ವೀರಶೈವ ದೃಷ್ಟಾರರ ಮತ. ಈ ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಿದ್ದ ಹಾಗೆ. ಅಂತರಂಗಕ್ಕೆ ಸಲ್ಲುವವರು ಬಹಿರಂಗಕ್ಕೆ ಸಲ್ಲುತ್ತಾರೆ. ಅಲ್ಲಿ ಸಲ್ಲದವರು ಹೊರಗೂ ಸಲ್ಲರು. ಒಂದು ಪಿಂಡ ಪ್ರಪಂಚ ; ಇನ್ನೊಂದು ಬ್ರಹ್ಮಾಂಡ ಪ್ರಪಂಚ. ಈ ಎರಡು ಮುಖಗಳಲ್ಲೂ ಶುದ್ಧಿಬೇಕು. ಕಳ್ಳನಾಣ್ಯ ಸಲುವಳಿಗೆಗೆ ಸಲ್ಲುವುದಿಲ್ಲ. ನಾವೆಲ್ಲ ನಾಣ್ಯಗಳು. ನಮ್ಮೆರಡು ಮುಖಗಳೂ ಶುದ್ಧವಾಗಿ ದ್ದರೆ, ಸಲುವಳಿಗೆಗೆ ಸಲ್ಲುತ್ತೇವೆ. ಇಲ್ಲವಾದರೆ ಇಲ್ಲ. ಸರ್ವೇಶ್ವರನು ಎಲ್ಲರಿಗೂ ಅಂಥ ದಿವ್ಯಶಕ್ತಿಯನ್ನೀಯ ಲೆಂದು ಹಾರೈಸುತ್ತೇವೆ.



**ತಿದ್ದುಪಡಿ**

| ಪುಟ | ಅಶುದ್ಧ | ಶುದ್ಧ |
|---|---|---|
| 55 | $2{\cdot}3 \times 10^{24}$ | $6{\cdot}3 \times 10^{24}$ |
| 55 | $2{\cdot}65 \times 10^{-24}$ | $2{\cdot}56 \times 10^{-24}$ |
| 56 | ....ತಿಳಿದಿರುವಂತೆ | ಚರಿತ್ರೆಗೆ ತಿಳಿದಿರುವಂತೆ |

# ಕನ್ನಡನಾಡಿನ ಮಹಾದಾರ್ಶನಿಕ ಗೌರೀಶಂಕರರು

ಚನ್ನಪ್ಪ ಎರೇಸೀಮೆ

ವಿದ್ವಾಂಸರೂ, ಮಹಾಜ್ಞಾನಿಗಳೂ, ಕವಿಗಳೂ, ಶಿವಯೋಗಿಗಳೂ ದೇಶಕ್ಕೆ ಭೂಷಣರು. ತಂದೆಯೋರ್ವನು ಸತ್ಪುತ್ರನನ್ನು ಪಡೆಯುವುದು ಹೇಗೆ ಭಾಗ್ಯವೋ ಮಹಾ ಜ್ಞಾನಿಗಳನ್ನು ಪಡೆಯುವುದು ರಾಷ್ಟ್ರದ ಪುಣ್ಯವೆಂದು ಹೇಳಬೇಕು. ಬಹುದಿನಗಳ ಸಂಚಿತವೆಲ್ಲ ಒಟ್ಟುಗೂಡಿ ಒಮ್ಮೊಮ್ಮೆ ರಾಷ್ಟ್ರ ಮಹಾತ್ಮರನ್ನು ಪಡೆಯುತ್ತದೆ. ಮಹಾತ್ಮರು ಬಹುಸಂಖ್ಯೆಯಲ್ಲಿ ಸಿಗುವುದಿಲ್ಲ. ಕರ್ನಾಟಕವಲ್ಲಿ ಮಹಾ ಮಹಾ ವಿಭೂತಿಗಳು ಕಾಲಕಾಲಕ್ಕೆ ಜನ್ಮವೆತ್ತಿ ತಮ್ಮ ಪ್ರಾತಿಭಚಕ್ಷುರುನ್ಮೀಲನದಿಂದ ಬಹು ಜನಗಳ ಹೃದಯವನ್ನು ಬೆಳಗುವ ದಿವ್ಯಸಂದೇಶಗಳನ್ನು ಬೀರಿದ್ದಾರೆ. ಇಂಥ ಮಹಾವ್ಯಕ್ತಿಗಳ, ಶಿವಯೋಗಿಗಳ, ದಾರ್ಶನಿಕರ, ಕವಿಗಳ ಗುಂಪಿನಲ್ಲಿ ಶ್ರೀಮನ್ನಿರಂಜನ ನಿರಾಭಾರಿ ಪ್ರಣವಸ್ವರೂಪಿಗಳಾದ ಅರಮನೆ ಪಂಚಗವಿ ಮಠಾಧ್ಯಕ್ಷರಾಗಿ ಲಿಂಗೈಕ್ಯರಾದ ಗೌರೀಶಂಕರ ಮಹಾಸ್ವಾಮಿಗಳೂ ಒಬ್ಬರು. ಕರ್ನಾಟಕವು ಇಪ್ಪತ್ತನೆಯ ಶತಮಾನದಲ್ಲಿ ಇಂಥ ದಿವ್ಯಶಕ್ತಿಯ ಪುತ್ರನನ್ನು ಹೆತ್ತು ಹೆತ್ತು ಜೋಪಾನ ಮಾಡಿ ಆತನ ಸಮಗ್ರಸೇವಾಸೌಂದರ್ಯವನ್ನು ಕಾಣುವ ಪೂರ್ವದಲ್ಲಿಯೇ ಕಳೆದುಕೊಂಡಿತು. ಇದೊಂದು ನಾಡಿನ ದೌರ್ಭಾಗ್ಯವೇ ಸರಿ. ಮನುಷ್ಯಯತ್ನವೇನಿದೆ? ಎಲ್ಲವೂ ಶಿವನ ಲೀಲೆ; ಯಾಕೆ ಇಂತಾಯಿತೋ ಮೂಲವನ್ನರಿವವರಾರು ?

## ಹುಟ್ಟು-ಬಾಲ್ಯ-ವಿದ್ಯಾಭ್ಯಾಸ

ಟಿ. ನರಸೀಪುರ ತಾಲ್ಲೂಕಿನಲ್ಲಿ ಉಕ್ಕಲಗೆರೆ ಸಣ್ಣ ಹಳ್ಳಿ. ಸುತ್ತಮುತ್ತ ಹೊಲಗದ್ದೆಗಳ ಪೈರುಪಚ್ಚೆಯಿಂದ ವಿರಾಜಿಸುವ ಪ್ರಕೃತಿಸೊಬಗಿನ ಅಟ್ಟಹಾಸದ ಮಧ್ಯೇ ನಲಿವ ನಂದನವಾಗಿದ್ದ ಕಿರಿಯೂರು. ಊರು ಕಿರಿದಾದರೂ ಹಿರಿಮೆ ಕಿರಿದಲ್ಲ. ಕಲ್ಲುಮಣ್ಣು ಕಸ ಕಡ್ಡಿ ತರುಮರಾದಿಗಳಿಂದ ಕೂಡಿದ ಭೂಮಿದೇವಿ ರತ್ನಗರ್ಭೆ. ಜಗದ ಸೊಗಸಿನ ಬಾಳ್ಮೆಗೆ ಮೂಲಮಂತ್ರಸ್ವರೂಪಿಣಿ. ಕಿರಿಯೂರಾದ ಉಕ್ಕಲಗೆರೆ ಹಳ್ಳಿಯಲ್ಲಿ ವೀರಶೈವ ಕುಟುಂಬವೊಂದು ಭಕ್ತಿ ಜ್ಞಾನವೈರಾಗ್ಯದ ತವರ್ಮನೆಯಂತೆ ಮೆರೆಯುತ್ತಿತ್ತು. ಲಿಂಗಪ್ಪ ಲಿಂಗಮ್ಮಗಳೇ ಆ ಕುಟುಂಬದ ಯಜಮಾನರು. ಆದರ್ಶ ದಂಪತಿಗಳೀರ್ವರು ತಮ್ಮ ಹೆಸರಿಗೆ ತಕ್ಕಂತೆ ಲಿಂಗನಿಷ್ಠಾನಿರತರೂ, ಕಾಯಕಸಂಪನ್ನರೂ ದಾಸೋಹಿಗಳೂ ಆಗಿ ಜೀವನ ಚಕ್ರವನ್ನು ನಡೆಸುತ್ತಾ ಬರುತ್ತಿದ್ದರು. ಅವರ ಮಠ ಊರ ಪಕ್ಕದಲ್ಲಿಯೇ ವಿರಾಜಿಸುವ ಬೆಟ್ಟವೊಂದರ ಪಕ್ಕದಲ್ಲಿನ ಅದೇ ಹೆಸರಿನ ಅಂದರೆ ಬೆಟ್ಟದಮಠವೆಂಬ ಹೆಸರಿನ ಭಕ್ತ ಮಾಹೇಶ್ವರಾದಿಗಳ ನಿಚ್ಚನಿಚ್ಚ ಸೇವೆಯನ್ನು ಮಾಡಿಕೊಂಡಿದ್ದಮಠ. ದಂಪತಿಗಳೀರ್ವರ (ಲಿಂಗಪ್ಪ ಲಿಂಗಮ್ಮಗಳೀರ್ವರ) ಬಹುದಿನದ ಭಕ್ತಿಯ ಬಯಕೆಯೇ ಮೂಡಿಬಂದಂತೆ ದಾಸೋಹವೇ ಲಿಂಗಗೊಂಡೈತಂದಂತೆ, ಲಿಂಗನಿಷ್ಠೆಯೇ ಜನ್ಮತಾಳಿದಂತೆ, ಸತ್ಕ್ರಿಯಾಚಾರವೇ ದೇಹವಿಡಿದೈತಂದಂತೆ ಪುತ್ರರತ್ನವೊಂದನ್ನು ಪಡೆದರು. ಕೂಸಿಗೆ 'ಶಂಕರಪ್ಪ' ಎಂಬ ನಾಮಕರಣ ಮಾಡಿದರು. ಸುಂದರವಾದ ತುಂಬುದೇಹ, ದುಂಡುಮುಖ, ಅಲೌಕಿಕ ಬಾಲಕ್ರೀಡೆಯಿಂದ ಮುಗ್ಧರಾದ ಮಾತಾಪಿತೃಗಳು ಬಾಲಕ ಶಂಕರಪ್ಪನ ಮುಖಕಂಡು ಹಿರಿಹಿರಿಹಿಗ್ಗಿದರು. ಶರತ್ಕಾಲದ ಮುಗಿಲ ಮರೆಯಲ್ಲಿ ಹೊಳೆಯುವ ಚಂದ್ರನಂತೆ ಮಾತಾಪಿತೃಗಳ ಪೋಷಣೆಯಲ್ಲಿ ಶಂಕರಪ್ಪ ತೊಳತೊಳಗಿ ನಳನಳಸಿ ಕಳೆಯೇರಿ ಕುಡಿವರೆದು ಬೆಳೆದ. ಜೊತೆಗೆ ನಿಂಗಮ್ಮ ಎಂಬ ಸಹೋದರಿಯನ್ನೂ ಸುಬ್ಬಣ್ಣ, ಶಿವಪ್ಪ ಎಂಬೀರ್ವರು ಸಹೋದರರನ್ನು ಪಡೆದ. . ಎಂಟು ಒಂಬತ್ತು ವರ್ಷಗಳವರೆಗೆ ಶಂಕರಪ್ಪ ಬೆಟ್ಟದಮಠದ ಸುಂದರ ಸನ್ನಿವೇಶದಲ್ಲಿ ತಂದೆತಾಯಿಗಳ ಸಹೋದರ ಸಹೋದರಿಯರ ನೆರೆಹೊರೆಯ ಜನರ ಕಣ್ಮಣಿಯಾಗಿ ಬೆಳಗಿದನು. ರೆಕ್ಕೆಬಾರದ ಪಕ್ಷಿಯೊಂದು

ಮೊದಮೊದಲು ತನ್ನ ಗೂಡಿನ ಅಕ್ಕಪಕ್ಕದಲ್ಲಿ ಕುಂಟುತ್ತ ಏಳುತ್ತ ಬೀಳುತ್ತ ಹಾರಾಡುತ್ತಿದ್ದು ರೆಕ್ಕೆಬಲಿತ ಮೇಲೆ ವಿಶಾಲವಿಯತ್ಪ್ರಪಂಚವನ್ನು ಬಯಸುವಂತೆ ಗೌರೀಶಂಕರ ಸ್ವಾಮಿಗಳವರ ಮನಸ್ಸು 8-10ನೆಯ ವಯಸ್ಸಿನಲ್ಲಿಯೆ ಲೌಕಿಕ ಪಾರಮಾರ್ಥಿಕ ವಿದ್ಯಾರ್ಜನಾಕಾತುರತೆಯನ್ನು ಪಡೆದು ತವಕಿಸುತ್ತಿತ್ತು. ಆ ತವಕವು ಮಾತಾಪಿತೃಗಳ ವಾತ್ಸಲ್ಯ ಬಂಧನದ ಕಟ್ಟನ್ನು ಸಡಿಲಗೊಳಿಸಹತ್ತಿತು. ಬಾಲ್ಯದಲ್ಲಾಗುವ ಅಲೌಕಿಕಾನುಭವಗಳ ಮೂಲಕ ಮನಸ್ಸು ಹರಿದೋಡುತ್ತಿತ್ತು; ಪ್ರಜ್ಞೆ ಬಲವಾಗುತ್ತ ಬಂತು. ಲೌಕಿಕದಮಕ್ಕಳ ಬಯಕೆಯತ್ತ ಮನಸ್ಸು ನೀರಸಗೊಳ್ಳುತ್ತ ಬಂತು.

ಎಂಟು ವರ್ಷಗಳು ತುಂಬುತ್ತಲೆ ವಿದ್ಯಾಭ್ಯಾಸಕ್ಕೆಂದು ಮೈಸೂರಿಗೆ ಬಂದರು. 3-4 ವರ್ಷಗಳು ಮೈಸೂರಿನಲ್ಲಿನ ಪಾಠಶಾಲೆಗಳಲ್ಲಿ ಬಾಲ್ಯದ ವಿದ್ಯಾಭ್ಯಾಸವನ್ನೂ ಜೊತೆಗೆ ಸಂಸ್ಕೃತ ವಿದ್ಯಾಭ್ಯಾಸವನ್ನೂ ಮಾಡಿದರು. ಅಷ್ಟರಲ್ಲಿ ಉಕ್ಕಲಗೆರೆ ಬೆಟ್ಟದಮಠದಲ್ಲಿ ಜನ್ಮವೆತ್ತಿದ ಈ ಅನರ್ಘ್ಯ ಬಾಲಕನು ಚಾಮುಂಡಿಬೆಟ್ಟದ ನಿಭೃತ ವಾತಾವರಣದ ತಪ್ಪಲು ಪ್ರದೇಶದಲ್ಲಿ ರಾರಾಜಿಸುವ ಅರಮನೆ ಪಂಚಗವಿ ಮಠದ ವಿರಕ್ತಾಶ್ರಮವನ್ನು ತನ್ನ 12 ನೆಯ ವಯಸ್ಸಿನಲ್ಲಿ ಸ್ವೀಕಾರ ಮಾಡಿದನು. ವಿರಕ್ತಾಶ್ರಮ ಸ್ವೀಕಾರ ಮಾಡಿದ ನಂತರ 'ಗೌರೀಶಂಕರಸ್ವಾಮಿ'ಗಳೆಂಬ ಹೆಸರಿನಿಂದ ವಿಖ್ಯಾತರಾದರು. ಆಶ್ರಮಸ್ವೀಕಾರ ಮಾಡಿದನಂತರ ಆಶ್ರಮಧರ್ಮಕ್ಕನುಸಾರವಾಗಿ ಮಾತಾಪಿತೃಗಳ ಬಂಧುಬಾಂಧವರ ಸಂಬಂಧದ ಕಟ್ಟನ್ನು ಹರಿದರು. ಜಗತ್ತಿನ ಜನಾಂಗವೆಲ್ಲ ಬಂಧುಬಾಂಧವರೆಂಬ ಭಾವನೆ ಬೆಳೆಯಿತು. ಆಣವ ಮಲನಿವೃತ್ತಿಯಾಯಿತು. ಉತ್ತರೋತ್ತರ ವಿದ್ಯಾಭ್ಯಾಸದೃಷ್ಟಿ ಬಲಗೊಂಡಿತು. 18 ನೆಯ ವಯಸ್ಸಿನವರೆಗೆ ಮೈಸೂರಿನಲ್ಲಿಯೇ ಸಂಸ್ಕೃತ ವಿದ್ಯಾಭ್ಯಾಸವನ್ನು ಮುಂದವರಿಸಿದರಲ್ಲದೆ ವಚನ ಸಾಹಿತ್ಯ, ವೀರಶೈವ ಪುರಾಣಗಳು, ಕಾವ್ಯಗಳು ಮೊದಲಾದವುಗಳನ್ನು ಕೂಲಂಕಷವಾಗಿ ಅಭ್ಯಾಸ ಮಾಡಹತ್ತಿದರು. ತಿಳಿಯಬೇಕೆಂಬ ಅವರ ಸೂಕ್ಷ್ಮ ಪ್ರತಿಭೆಗೆ ಮೈಸೂರಿನ ವಾತಾವರಣವೂ ಚಿಕ್ಕದಾಯಿತು. ಕಾಶಿಯ ಕಡೆ ದೃಷ್ಟಿ ಹರಿಯಿತು. ಆಗಿನ ಕಾಲದಲ್ಲಿ ಕಾಶಿಗೆ ಹೋಗುವುದೆಂದರೆ ದೊಡ್ಡ ಸಮಸ್ಯೆ ದುಡ್ಡು, ಮಠದ ಕಡೆಯ ವ್ಯವಸ್ಥೆಯೇ ಮೊದಲಾದುವುಗಳ ಬಗ್ಗೆ ಚಿಂತೆಯಾಗ ಹತ್ತಿತು. ಆದರೆ ಒನ್ಮ್ಮೆಲೆ ಕಾಶಿಗೆ ಹೋಗಬೇಕು ವಿದ್ಯಾರ್ಜನೆ ಮಾಡಬೇಕು ಎಂಬ ಬಯಕೆ ಈಡೇರಲಿಲ್ಲ ಇಷ್ಟರಲ್ಲಿ ಇನ್ನೊಂದು ಘಟನೆ ನಡೆಯಿತು. ಇವರ ಪೂರ್ವಾಶ್ರಮದ ಜನನಿಯಾದ ಲಿಂಗಮ್ಮನವರು ಲಿಂಗೈಕ್ಯರಾದರು. ಲಿಂಗಪ್ಪನವರು ಶ್ರೀಗಳವರನ್ನು ಬರಮಾಡಿಕೊಂಡರು. ಮಾತಾಪಿತೃಗಳೆಂಬ ಭಾವನೆ ಯನ್ನು ಶ್ರೀಸ್ವಾಮಿಗಳವರು ಕಳೆದುಕೊಂಡಿದ್ದರೂ ಮಾತಾಪಿತೃಗಳಿಗೆ ಮಗನೆಂಬ ಭಾವನೆ ಕಳೆದಿರಲಿಲ್ಲ ಸ್ವಾಮಿಗಳವರು ಉಕ್ಕಲಗೆರೆ ಬೆಟ್ಟದಮಠದಲ್ಲಿ ಕೆಲವಾರ ದಿನಗಳು ಕಳೆದರು. ಲಿಂಗಪ್ಪನವರು ಸ್ವಾಮಿಗಳಲ್ಲಿ ತಮ್ಮ ಕಷ್ಟಕಾರ್ಪಣ್ಯಗಳನ್ನೆಲ್ಲ ಹೇಳಿಕೊಂಡರು ಸ್ವಾಮಿಗಳು ಅದನ್ನೆಲ್ಲ ಕೇಳಿ "ಆಗಲಿ ನಮ್ಮ ಮಠದಲ್ಲಿಯೂ ಯಾರೂ ಇಲ್ಲ. ಅಲ್ಲಿ ವ್ಯವಸ್ಥೆಯನ್ನು ಸಾಧ್ಯವಾದಷ್ಟು ಮಟ್ಟಿಗೆ ನಿಮ್ಮಿಬ್ಬರು ಮಕ್ಕಳು ನೋಡಿಕೊಂಡು ವಿದ್ಯಾ ಭ್ಯಾಸ ಮಾಡಿಕೊಂಡಿರಲಿ. ಯಾವುದಕ್ಕೂ ಚಿಂತಿಸ ಬೇಡಿ. ಪರಮಾತ್ಮನ ಮೇಲೆ ಭಾರಹಾಕಿ ನಿಮ್ಮ ಕೆಲಸ ಮಾಡುತ್ತ ಈ ಮೂವರು ಮಕ್ಕಳನ್ನು ಜೋಪಾನ ಮಾಡಿಮಾರ್ಗಕ್ಕೆ ಹಚ್ಚಿದರೆ ನಿಮ್ಮ ಕೆಲಸವನ್ನು ನೀವ ಮಾಡಿದಂತಾಗುತ್ತದೆ. ಆದರೆ ನೀವು ಪುನಃ ಲಗ್ನ ಮಾಡಿಕೊಳ್ಳುವ ಆಲೋಚನೆ ಮಾತ್ರ ಮಾಡಬೇಡಿ. ಎಂದು ಹೇಳಿ ಮಠಕ್ಕೆ (ಮೈಸೂರಿಗೆ) ಬಂದರು ಲಿಂಗಪ್ಪನವರ ಇಬ್ಬರು ಮಕ್ಕಳಾದ ಸುಬ್ಬಣ್ಣ, ಶಿವಣ್ಣ ಇವರೀರ್ವರೂ ಮೈಸೂರು ಅರಮನೆ ಪಂಚಗವೀಮಠಕ್ಕೆ ಬಂದರು ಮಠದಲ್ಲಿಯೇ ಇರಹತ್ತಿದರು. ವಿದ್ಯಾ ಭ್ಯಾಸವನ್ನು ಮುಂದುವರಿಸಿದರು.

ಇತ್ತ ಲಿಂಗಪ್ಪನವರು ಪುನಃ ಲಗ್ನವನ್ನು ಮಾ ಕೊಂಡರು. ಸ್ವಾಮಿಗಳಿಗೆ ಈ ಸುದ್ದಿ ತಿಳಿಯಿತು ಆಗ ಅವರು ಸುಬ್ಬಣ್ಣ ಶಿವಣ್ಣ ಇವರೀರ್ವರನ್ನು ಕರೆದು ಇದುವರೆಗೆ ನಿಮ್ಮನ್ನು ತಾಯಿಯಿಲ್ಲದ ಮಕ್ಕಳೆಂದು ನಿಮ್ಮ ತಂದೆ ತೊಂದರೆಯೆಂದು ಹೇಳಿಕೊಂಡಿದ್ದರಿಂದಲೂ ಶ್ರೀ ಮಠದಲ್ಲಿ ಇಟ್ಟುಕೊಂಡು ಕೈಲಾದ ಸಹಾಯ ಮಾಡಲಾಯಿತು. ಈಗ ಪುನಃ ನಿಮಗೆ ತಾಯಿಯೊ ರ್ವರು ಬಂದಿದ್ದಾರೆ. ಲಿಂಗಪ್ಪನವರು ಪುನಃ ಎಂದಿನಂ

ಭಾರ್ಯಾ ಸಮೇತರು. ಆದ್ದರಿಂದ ನೀವು ನಿಮ್ಮ ಊರಿಗೆ ಹೋಗಿ ತಂದೆತಾಯಿಗಳ ಹತ್ತಿರಲ್ಲಿಯೇ ಇದ್ದು ವಿದ್ಯಾಭ್ಯಾಸ ಮಾಡಿಕೊಂಡಿರಿ. ಎಂದು ಹೇಳಿ ಕಳುಹಿಸಿ ಕೊಟ್ಟೇಬಿಟ್ಟರು. ಸುಬ್ಬಣ್ಣ, ಶಿವಪ್ಪ ಇವರೀರ್ವರೂ ಮನೆಗೆ ಬಂದುದು ಕಂಡು ಲಿಂಗಪ್ಪನವರ ಎದೆ ನಡುಗಿತು. ಶ್ರೀಗಳವರು ಅಂದು 'ಪುನಃ ಲಗ್ನ ಮಾಡಿಕೊಳ್ಳುವ ಹವ್ಯಾಸ ಬೇಡ' ಎಂದ ಮಾತು ಜ್ಞಾಪಕಕ್ಕೆ ಬಂತು. ಆದರೇನು ಎಲ ಮಿಂಚಿ ಹೋಗಿತ್ತು.

ಇತ್ತ ಸ್ವಾಮಿಗಳವರಿಗೆ ದಿನೇದಿನೇ ವಿದ್ಯಾಭ್ಯಾಸದಲ್ಲಿನ ಮಮತೆ ಬೆಳೆಯುತ್ತ ಬಂತು. ಆ ಏಕೈಕ ಸುಖದ ಮುಂದೆ ಉಳಿದುವೆಲ್ಲವೂ ಮಸಮಸಕಾದವು. ಕಾಶಿಗೆ ಹೋಗಿ ವಿದ್ಯಾಭ್ಯಾಸವನ್ನು ಮುಂದುವರಿಸಲು ಅತ್ಯಂತ ಪ್ರಯತ್ನ ಮಾಡಹತ್ತಿದರು ಮಠದ ಭಕ್ತರುಗಳಲ್ಲಿ ಈ ವಿಷಯವನ್ನು ತಿಳಿಸಿ ನಮ್ಮನ್ನು ಅಲ್ಲಿಗೆ ಕಳಿಸಿಕೊಡಿರೆಂದು ಕೇಳಹತ್ತಿದರು. ಆದರೂ ಸಾಧ್ಯವಾಗಲಿಲ್ಲ. ಕೊನೆಗೆ ಉಪವಾಸ ವ್ರತವೇ ಪ್ರಾರಂಭವಾಗಿ ಎರಡು ಮೂರು ದಿನಗಳು ಪ್ರಸಾದ ಸ್ವೀಕಾರ ಮಾಡದೆಯೇ ಕಾಲ ಕಳೆಯಹತ್ತಿದರು. ಆಗ ಮೈಸೂರಿನ ವೀರಶೈವ ತರುಣ ಮುಖಂಡರಾದ ಪರಮಶಿವಯ್ಯನವರು, ಶಾಂತವೀರಪ್ಪನವರು, ನಿಟ್ಟರೆ ಬಸಪ್ಪನವರೇ ಮೊದಲಾದವರು ಪ್ರೋತ್ಸಾಹವಿತ್ತು ಕಾಶಿಗೆ ಹೋಗುವುದಕ್ಕೆ ತಕ್ಕ ಏರ್ಪಾಡುಗಳನ್ನೆಲ್ಲ ಮಾಡಿದರು. ನಮಃಶಿವಾಯ ಮಠದ ಶ್ರೀಗಳವರು ದ್ರವ್ಯವನ್ನು ಸಹಾಯ ಮಾಡಿದರು. ಅಲ್ಲದೆ ಮೈಸೂರು ಶ್ರೀಮನ್ಮಹಾರಾಜರವರೂ ಕೂಡ ಮಾಸಿಕ ವಿದ್ಯಾರ್ಥಿವೇತನ ಧನವನ್ನೂ ಕೊಡಲೊಪ್ಪಿದರು. ಕಾಶಿಗೆ ಹೋಗುವ ಸಿದ್ಧತೆಗಳೆಲ್ಲವೂ ನಡೆದುವು. ಅಷ್ಟರಲ್ಲಿ ಉಕ್ಕಲಗೆರೆಯಿಂದ ಸ್ವಾಮಿಗಳವರಿಗೆ ಬಿನ್ನಹ ಬಂತು. ಹಲವಾರು ಜನ ಉಕ್ಕಲಗೆರೆಯ ಭಕ್ತರು ಸ್ವಾಮಿಗಳವರನ್ನು ಪ್ರೀತ್ಯಾದರಗಳಿಂದ ಬರಮಾಡಿಕೊಂಡರು. ಲಿಂಗಪ್ಪನವರೂ ಅವರ ಮಕ್ಕಳೂ ಎರಡನೆಯ ಹೆಂಡತಿಯವರೇ ಮೊದಲಾದವರೂ ಬಂದು ಸ್ವಾಮಿಗಳವರ ದರ್ಶನಾಶೀರ್ವಾದ ಪಡೆದರು. ಆದರೆ ಸ್ವಾಮಿಗಳು ಅವರನ್ನು ಎಲ್ಲರಂತೆ ಪರಿಗಣಿಸಿದರೆ ವಿನಾ ಮಮತಾಭಾವನೆಯಿಂದ ಎಳ್ಳಷ್ಟೂ ನೋಡಲಿಲ್ಲ. ಪುನಃ ಮೈಸೂರಿಗೆ ಬಂದು ಕಾಶಿಗೆ ಪ್ರಯಾಣ ಮಾಡಿದರು. ಆಗ ಸ್ವಾಮಿಗಳವರಿಗೆ 18 ವರ್ಷ ವಯಸ್ಸಾಗಿತ್ತು.

## ಕಾಶಿಯಲ್ಲಿ ಶ್ರೀಗಳು

ವಿದ್ಯಾಭ್ಯಾಸದ ದಾಹದಿಂದ ಶ್ರೀಗಳವರು ಕಾಶಿಗೆ ಹೋದೊಡನೆಯೇ ಅಲ್ಲಿ ಉತ್ತಮವಾದ ಒಂದು ಸನ್ನಿವೇಶ ಪ್ರಾಪ್ತಿಯಾಯಿತು. ಮೈಸೂರು ಅರಸುವಂಶಕ್ಕೆ ಸಂಬಂಧಪಟ್ಟ ತಾಯಿಯವರೊಬ್ಬರು ಕಾಶಿಯಲ್ಲೇ ವಾಸಮಾಡುತ್ತಿದ್ದರು. ಅವರು ತಮ್ಮ ಜೀವಿತವನ್ನೆಲ್ಲ ಕಾಶಿಯಲ್ಲಿ ಕಳೆದು ಸದ್ಗತಿಪಡೆಯಬೇಕೆಂಬ ಶುದ್ಧ ಸಂಕಲ್ಪದಿಂದ ಅಲ್ಲಿ ವಾಸಿಸುತ್ತಿದ್ದರು. ಅವರ ಜೀವನ ವಿರಾಗಜೀವನ. ವೀರಶೈವ ದೀಕ್ಷಾಬದ್ಧರಾದವರು. ಗುರುಲಿಂಗ ಜಂಗಮ ಪ್ರೇಮದಲ್ಲಿ ಮುಳುಗಿದವರು. ಆಧ್ಯಾತ್ಮಿಕ ಸಂಸ್ಕೃತಿಯಲ್ಲಿ ಉನ್ನತ ಮಟ್ಟದವರು. ಮೈಸೂರಿನಿಂದ ಅರಮನೆ ಪಂಚಗವಿ ಮಠಾಧ್ಯಕ್ಷರೂ ಜಂಗಮವರ್ಯರೂ ಬಂದಿದ್ದಾರೆಂಬ ಸುದ್ದಿಯನ್ನು ತಿಳಿದೊಡನೆಯೇ ತಮ್ಮ ನಿವಾಸಕ್ಕೆ ಬರಮಾಡಿಕೊಂಡು, ಇವರನ್ನೇ ಗುರುಗಳನ್ನಾಗಿ ಸ್ವೀಕರಿಸಿದರು ಈ ಸ್ಥಾನದಲ್ಲಿ ಶ್ರೀಗಳವರ ವಾಸವು ಪ್ರಾರಂಭವಾದೊಡನೆಯೇ ಅವರ ವಿದ್ಯಾಭ್ಯಾಸವೂ ನಿರಾತಂಕವಾಗಿ ನಿರ್ಬಾಧಿತವಾಗಿ ನಡೆಯಹತ್ತಿತು. ಶ್ರೀಗಳವರಲ್ಲಿ ಆ ತಾಯಿಗೆ ಗುರುವಿನಲ್ಲಿರುವ ಭಕ್ತಿ, ಮಕ್ಕಳಲ್ಲಿರುವ ವಾತ್ಸಲ್ಯಗಳು ಪ್ರಾರಂಭವಾದುವು. ಶ್ರೀಗಳೂ ಅವರನ್ನೆ ತಾಯಿಯಂತೆಯೂ, ಶಿಷ್ಯಳಂತೆಯೂ, ಭಾವಿಸಿ ತಮ್ಮ ದಿವ್ಯ ಪ್ರತಿಭಾ ಸಾಮರ್ಥ್ಯದಿಂದ ಹಲವಾರು ಭಾಷೆಗಳ, ಅನೇಕ ಶಾಸ್ತ್ರಗಳ, ದರ್ಶನಗಳ ಅಭ್ಯಾಸವನ್ನು ಮಾಡಹತ್ತಿದರು. ಬಹುಶಃ ಶ್ರೀಗಳಷ್ಟು ಪದವಿಗಳನ್ನು ಧರಿಸಿದವರು ಸದ್ಯಕ್ಕೆ ಕರ್ನಾಟಕದಲ್ಲೇಕೆ ಭರತಖಂಡದಲ್ಲಿಯೇ ವಿರಳ. ತರ್ಕ ವ್ಯಾಕರಣಾದಿ ಆರು ಆಚಾರ್ಯ ಪರೀಕ್ಷೆಗಳನ್ನು ಉತ್ತಮ ದರ್ಜೆಯಲ್ಲಿ ತೇರ್ಗಡೆಯಾದರು. ಇಂಗ್ಲೀಷ್ ಎಂ.ಎ.ಪರೀಕ್ಷೆಯಲ್ಲಿ ತೇರ್ಗಡೆಯಾದರು. ಹಿಂದಿಯ ಉನ್ನತಮಟ್ಟದ ಪರೀಕ್ಷೆಯಲ್ಲಿ ತೇರ್ಗಡೆಯಾದರು. ತೆಲುಗು, ಉರ್ದು, ಪಾರಸಿ, ಬಂಗಾಳಿ, ಗುಜರಾಥಿ, ಪಾಳಿ, ಪ್ರಾಕೃತ

ಮೊದಲಾದ ಭಾಷೆಗಳ ಪೂರ್ಣಜ್ಞಾನವನ್ನೂ ಮಾಡಿಕೊಂಡರು. ಇಷ್ಟೆಲ್ಲ ಭಾಷೆಗಳಲ್ಲಿ ಪರಿಪೂರ್ಣಜ್ಞಾನವನ್ನು ಪಡೆಯುವುದಕ್ಕೆ ಅನೇಕ ಜನ್ಮಗಳ ಸಂಸ್ಕಾರವೂ, ಶಿವನ ಕರುಣೆಯೂ ಕಾರಣಗಳಲ್ಲದೆ ಮಾನವ ಸಹಜ ಸಾಮಾನ್ಯ ಪ್ರತಿಭೆಯೆಂದೂ ಸಾಲದು. ಶ್ರೀಗಳವರಿಗೆ ಪರಮಾತ್ಮನು ಅಪ್ರತಿಹತ, ಅಪ್ರತಿಮ ಪ್ರತಿಭಾ ಶಕ್ತಿಯನ್ನು ದಯಪಾಲಿಸಿದ್ದನು. ಭರತಖಂಡದ ದರ್ಶನಗಳಷ್ಟೇ ಅಲ್ಲ. ಭಾರತದಲ್ಲಿ ಹುಟ್ಟಿ ಅನ್ಯದೇಶಗಳ ಧರ್ಮವಾಗಿರುವ ಬೌದ್ಧ ಧರ್ಮದ ಬಗೆಗೆ ಪೂರ್ಣ ಅರಿತಿದ್ದರು. ಜೈನ, ಇಸ್ಲಾಂ, ಕ್ರಿಶ್ಚಿಯನ್ ಧರ್ಮಗಳನ್ನೂ ಚೆನ್ನಾಗಿ ಅಭ್ಯಸಿಸಿ ಅವುಗಳ ಸಂಶೋಧನೆಯನ್ನೂ ಕಾಶಿಯಲ್ಲಿ ಶ್ರೀಗಳು ಮಾಡುತ್ತಿದ್ದರು. ಇಷ್ಟೆಲ್ಲ ವಿದ್ಯೆಗಳಲ್ಲಿ ಪಾರಂಗತರಾಗಿರುವುದರ ಜೊತೆಗೆ ಕನ್ನಡದಲ್ಲಿ ಅಪ್ರತಿಹತವಾದ ಸಾಮರ್ಥ್ಯವಿತ್ತು. ವಚನ ಶಾಸ್ತ್ರವಂತೂ ಕರತಲಾಮಲಕವಾಗಿತ್ತು. ಪ್ರಭುದೇವರ ವಚನಗಳಷ್ಟು ಗೂಢಾರ್ಥವುಳ್ಳ ವಚನಗಳು ವಚನ ಸಾಹಿತ್ಯದಲ್ಲೇ ಇಲ್ಲ. ಅವು ಕೇವಲ ವೀರಶೈವಮತಕ್ಕೆ ಅನ್ವಯವಾಗತಕ್ಕವುಗಳಲ್ಲ. ಮಾನವ ಕೋಟಿಯ ಧರ್ಮಕ್ಕೆಲ್ಲ ಸಾಮಾನ್ಯವಾದುವುಗಳೆನ್ನಬೇಕು. ಅಂಥ ಕಠಿಣತಮವಾದ ವಚನಗಳಿಗೆ ಸರ್ವದರ್ಶನ ಸಮನ್ವಯ ದೃಷ್ಟಿಯಿಂದ ಅರ್ಥವತ್ತಾಗಿ ವಿವರಿಸುವ ಸಾಮರ್ಥ್ಯವನ್ನು ಶ್ರೀ ಗೌರೀಶಂಕರ ಮಹಾಸ್ವಾಮಿಗಳು ಪಡೆದಿದ್ದರು. ಇಷ್ಟೆಲ್ಲ ಪ್ರತಿಭೆಯನ್ನು ಸಂಪಾದನೆ ಮಾಡಲು ಶ್ರೀಗಳು ಅಖಂಡವಾಗಿ ಮೂವತ್ತೈದು ವರ್ಷಗಳ ವರೆಗೆ ತಪಸ್ಯಾರೂಪವಾದ ಸಾಧನೆ ಮಾಡಬೇಕಾಯಿತು. ಮಾಡಿದರು. ಸಂಪಾದಿಸಿದರು. ತಮಗೆ ಬಂದ ಯೋಗ್ಯತಾಪತ್ರಗಳು ಒಂದು ದೊಡ್ಡ ಕಂತೆಯಷ್ಟಿದ್ದುವಂತೆ.

ಇಂಥ ಬಹುಮುಖ ವಿದ್ವತ್ತನ್ನು ಸಂಪಾದನೆ ಮಾಡಿದ ಶ್ರೀಗಳವರನ್ನು ಕಾಶಿಯಲ್ಲಿ ಎಲ್ಲೆಲ್ಲೂ ಕರೆಸಿ ವಿದ್ವತ್ಸಭೆಗಳಲ್ಲಿ, ಹಿಂದಿ, ಸಂಸ್ಕೃತ, ಇಂಗ್ಲೀಷ್ ಮೊದಲಾದ ಭಾಷೆಗಳಲ್ಲಿ ಧರ್ಮ, ಕಲೆ, ಸಾಹಿತ್ಯ, ರಾಜಕೀಯವೇ ಮೊದಲಾದ ವಿಷಯಗಳ ಮೇಲೆ ಉಪನ್ಯಾಸಗಳನ್ನು ಮಾಡಿಸಿ ಸಹಸ್ರಾರು ಜನ ಕೇಳಿ ಆನಂದಗೊಂಡು ಬಾಯ್ತುಂಬ ಹೊಗಳುತ್ತಿದ್ದರು. ಯಾವ ಉಪನ್ಯಾಸವೇ ಆಗಲಿ ಪೂರ್ವಭಾವಿಯಾಗಿ ಯೋಚಿಸದೆ ಸಮಂಜಸವೂ, ಅಕ್ಷೋಭವೂ, ಅನವದ್ಯವೂ, ಸರ್ವತೋಮುಖವೂ ಆಗುವ ಹಾಗೆ ಹೇಳುವ ಮಹಾಶಕ್ತಿ ಸ್ವಾಮಿಗಳಲ್ಲಿ ಅಡಗಿತ್ತು. ಹಲವಾರು ದರ್ಶನಗಳ, ಶಾಸ್ತ್ರಗಳ, ಭಾಷೆಗಳ, ಸಾಹಿತ್ಯಗಳ ಪೂರ್ಣ ಪರಿಚಯವಿದ್ದ ಸ್ವಾಮಿಗಳಲ್ಲಿ ಸಮನ್ವಯ ದೃಷ್ಟಿಯಂತೂ ಶ್ಲಾಘನೀಯವಾಗಿರುತ್ತಿತ್ತು. ಒಂದೇ ಒಂದು ಸುಗಂಧವೃಕ್ಷವು ಅರಣ್ಯವನ್ನೆಲ್ಲ ತನ್ನ ಸದ್ವಾಸನೆಯಿಂದ ಸೌರಭ ಪೂರ್ಣ ಗೊಳಿಸುವಂತೆ ಉತ್ತರ ಇಂಡಿಯದ ಎಲ್ಲ ಭಾಗದಲ್ಲೂ ಶ್ರೀಗಳವರ ಕೀರ್ತಿ ಹರಡಿತು. ರಾಜಕೀಯದ ಮೂಲತತ್ತ್ವಗಳನ್ನು ಚೆನ್ನಾಗಿ ತಿಳಿದ ಶ್ರೀಗಳವರನ್ನು ಹಲವಾರು ಜನ ರಾಜಕೀಯ ಮುಖಂಡರುಗಳೂ ಸಂದರ್ಶಿಸಿ ತಮ್ಮ ಸಂಶಯಗಳನ್ನು ನಿವಾರಿಸಿಕೊಳ್ಳುತ್ತಿದ್ದರು. ಹಲವಾರು ದಿನಗಳಲ್ಲಿ ಶ್ರೀಗಳವರು ಮಹಾತ್ಮಾಮೋಹನ ದಾಸ ಕರಮ ಚಂದ ಗಾಂಧಿಯರ ಮಿತ್ರರಲ್ಲೊಬ್ಬರಾದರು. ರಾಷ್ಟ್ರಾಧ್ಯಕ್ಷರಾಗಿದ್ದ ಡಾ|| ಬಾಬು ರಾಜೇಂದ್ರ ಪ್ರಸಾದರೂ ಮತ್ತು ಆಚಾರ್ಯ ಕೃಪಲಾನಿ, ರಾಜಾಜಿಗಳೇ ಮೊದಲಾದ ಅನೇಕ ಮುಖಂಡರುಗಳು ಇವರನ್ನು ತಮ್ಮ ಸಹದ್ಯೋಗಿಗಳ ಗುಂಪಿಗೆ ಸೇರಿಸಿಕೊಂಡು ಉತ್ತರ ಭಾರತದ ಹಲವಾರು ಕಡೆಗಳಲ್ಲಿ ತಿರುಗಿ ಮಹತ್ತ್ವಪೂರ್ಣಗಳಾದ ಅನೇಕ ಭಾಷಣಗಳನ್ನು ಮಾಡಿ ಲಕ್ಷೋಪಲಕ್ಷ ಜನಗಳ ಹೃದಯಮಂದಿರದಲ್ಲಿ ಬೆಳಕನ್ನುಂಟು ಮಾಡಿದರು. ಇನಿತು ಕೀರ್ತಿಯುತರೂ ವಿದ್ವಾಂಸರೂ, ನಿಯಮನಿಷ್ಠರೂ, ಬಹುಭಾಷಾ ವಿದ್ವಾಂಸರೂ ಆದ ಶ್ರೀಗಳನ್ನು ಬನಾರಸ ವಿಶ್ವವಿದ್ಯಾನಿಲಯವೂ ಬರಮಾಡಿಕೊಂಡು ಪ್ರೊಫೆಸರ್ ಆ ಕೆಲಸಮಾಡಬೇಕೆಂದು ಕೇಳಿಕೊಂಡದರ ಮೇರೆ ಶ್ರೀಗಳವರು ಹಲವಾರು ದಿನಗಳು ವಿಶ್ವವಿದ್ಯಾಲಯದ ಕ್ಲುಪ್ತವಾದ ಕಾಲದಲ್ಲಿ ಯಾವ ವೇತನವನ್ನೂ ಪ ಯದೆ, ಕೆಲಸಮಾಡಿ ಸಹಸ್ರಾರು ವಿದ್ಯಾರ್ಥಿಗಳ ತಮ್ಮ ದಿವ್ಯ ಪ್ರತಿಭೆಯನ್ನು ತೋರಿಸಿದ್ದಾರೆ. ತಮ ಕರ್ತವ್ಯಗಳನ್ನೆಲ್ಲ ಸ್ವತಃ ತಾವೇ ಮಾಡಿಕೊಳ್ಳುತ್ತಿದ್ದ ಆಲಸ್ಯವಂತೂ ಅವರ ಸುತ್ತುಮುತ್ತು ಸುಳಿಯು ಲ್ಲಿಲ್ಲ. ಒಂದು ಕರ್ತವ್ಯ ಮುಗಿಸಿ ಇನ್ನೊಂದು ಕರ್ತ ಮಾಡುವುದೇ ಅವರಿಗೆ ವಿರಾಮ.

ಇಷ್ಟಾದರೂ ಶ್ರೀಗಳವರು ತಮ್ಮ ಲಿಂಗನಿಷ್ಠೆ ಆಚಾರ ಪಾಲತೆಗೆ ಎಂದೂ ಕುಂದಕ ತಂದುಕೊಂಡವರಲ್ಲ ಪ್ರತಿ ದಿನವೂ ಬೆಳಗಿನ ನಾಲ್ಕು ಘಂಟೆಗಳ ಸುಮಾರಿಗೆ ಏಳುವುದು. ಅನಂತರ ಅರ್ಧಘಂಟೆಯವರೆಗೆ ಗುರುಲಿಂಗ ಸಂಗಮಕ್ಕೆ ಸಂಬಂಧಪಟ್ಟ ಪ್ರಾರ್ಥನೆ, ಶರಣರ ವಚನಗಳ ಪಠಣವನ್ನು ಮುಗಿಸಿ ಅನಂತರ ಬೆಳಗಾಗುವುದರೊಳಗೆ ಗಂಗಾನದಿಯಲ್ಲಿ ಸ್ನಾನಮಾಡಿ ಮುಗಿಸಿಕೊಂಡು ಮನೆಗೆ ಬರುತ್ತಿದ್ದರು. ನದಿಯಲ್ಲಿ ಆನಂದವಾಗಿ ಮನಬಂದಂತೆ ಈಸಾಡುವುದು ಸ್ವಾಮಿಗಳ ದಿನಚರಿಯಲ್ಲಿ ಒಂದು. ಮನೆಗೆ ಬಂದು ಪೂಜಾದಿಗಳನ್ನು ಮುಗಿಸುವುದು. ಅಷ್ಟರಲ್ಲಿ ತಾಯಿಯವರೂ ಸ್ನಾನಪೂಜಾದಿಗಳನ್ನು ಮುಗಿಸುತ್ತಿದ್ದರು. ತೀರ್ಥಪ್ರಸಾದಗಳನ್ನು ತಾಯಿಗೆ ಕೊಟ್ಟು ತಾವೂ ಸ್ವೀಕರಿಸುತ್ತಿದ್ದರು. ಅನಂತರ ಮಠವೊಂದರಲ್ಲಿ ಸಂಸ್ಕೃತ ಪಾಠಪ್ರವಚನಗಳನ್ನು ಮಾಡುತ್ತಿದ್ದರು ಇದಾದ ಮೇಲೆ ವಿಶ್ವವಿದ್ಯಾನಿಲಯದಲ್ಲಿ ಪಾಠವಿದ್ದರೆ ಹೋಗುವುದು. ಇಲ್ಲವಾದರೆ ಮನೆಯಲ್ಲಿಯೇ ಹಲವಾರು ದರ್ಶನಗಳ ಮೂಲತತ್ವಗಳ ವಿಚಾರವಾಗಿ ಚಿಂತನೆ ನಡೆಸುತ್ತಿದ್ದರು. ಅದೂ ಸಾಕಾದಾಗ ವಚನ ಶಾಸ್ತ್ರದ ಆಳನೀಳಗಳನ್ನು ಕುರಿತು ಆಲೋಚಿಸುತ್ತಿದ್ದರು. ವಚನಶಾಸ್ತ್ರದ ಸಂಗ್ರಹವನ್ನೂ ಶ್ರೀಗಳವರು ವಿಶೇಷವಾಗಿ ಮಾಡಿದರು ವಚನಶಾಸ್ತ್ರದಲ್ಲಿ ಮುಖ್ಯವಾದ 'ಶೂನ್ಯ ಸಂಪಾದನೆ' ಎಂಬ ಮೂಲ ಗ್ರಂಥವೂ ಅವರಲ್ಲಿತ್ತೆಂದು ಗೊತ್ತಾಗಿದೆ. ಈಗಿರುವ ಗೂಳೂರು ಸಿದ್ಧವೀರಣ್ಣೊಡೆಯರಿಂದ ಸಂಪಾದಿತವಾದ ಶೂನ್ಯ ಸಂಪಾದನೆಯು ಇತ್ತೀಚೆಗೆ ಅಂದರೆ 15 ನೆಯ ಶತಮಾನದಲ್ಲಿ ಸಂಪಾದಿಸಿದ್ದೆಂದೂ. ಅದು ಅನೇಕ ಸ್ವಕಪೋಲಕಲ್ಪಿತಗಳಾದ ವಚನಗಳನ್ನು ಸಂದರ್ಭಕ್ಕನುಗುಣವಾಗಿ ಜೋಡಿಸಿಕೊಂಡುದೆಂದೂ, ಶಿವಾನುಭವ ಮಂಟಪದಲ್ಲಿ ಶಾಂತರಸನೆಂಬ ಶರಣನು ಅಲ್ಲಿ ನಡೆದ ದಿನಚರಿಯ ವಾಗ್ವಾದಗಳನ್ನೆಲ್ಲ ಬರೆದಿಟ್ಟಿರುವನೆಂದೂ ಅದು ತಮ್ಮಲ್ಲಿದ್ದಿತೆಂದೂ ಶ್ರೀಗಳವರು ಹೇಳುತ್ತಿದ್ದರು. ಈಗ ಅದು ಏನಾಗಿದೆಯೋ ತಿಳಿಯದಾಗಿದೆ ಇದಕ್ಕೆ ಸಾಕ್ಷಿಯಾಗಿ ಶ್ರೀಗಳವರು ತಮ್ಮ ಉಪನ್ಯಾಸದಲ್ಲಿ ಅನೇಕ ವಚನಗಳನ್ನು ಉಪಯೋಗಿಸುತ್ತಿದ್ದರು. ಆ ವಚನಗಳು ಈಗಿನ ಶೂನ್ಯ ಸಂಪಾದನೆಯಲ್ಲಿ ಕಂಡು ಬರುತ್ತಿಲ್ಲ. ಆದುದರಿಂದ ಆ ವಚನಗಳು ಮೂಲ ಶೂನ್ಯ ಸಂಪಾದನೆಯವೇ ಆಗಿರಬೇಕು

ಹೀಗೆ ಶ್ರೀಗಳವರು ಮೂವತ್ತು ವರ್ಷಗಳು ಕಾಶಿಯಲ್ಲಿ ಸಾಧನೆ ಮಾಡಿದನಂತರ ಮೈಸೂರಿಗೆ ಹೋಗಬೇಕೆಂದು ಇಚ್ಛೆಪಟ್ಟರು. ಆದರೆ ಯಾವ ತಾಯಿಯವರು 30 ವರ್ಷಗಳು ಎಲ್ಲ ಸೌಲಭ್ಯ ಸನ್ನಿವೇಶಗಳನ್ನೊದಗಿಸಿ ಮಗನಂತೆ ಪೋಷಿಸಿ ಅದ್ವಿತೀಯ ಪಾಂಡಿತ್ಯ ಸಂಪಾದಿಸಲು ಕಾರಣರಾಗಿದ್ದರೋ ಅವರು ಸ್ವಾಮಿಗಳವರನ್ನು ಬಿಡಲಿಲ್ಲ. ನಾನು ಸತ್ತನಂತರ ನೀವೇ ನನ್ನ ಸಂಸ್ಕಾರ ಮಾಡಿ ಹೋಗಬೇಕೆಂದು ಬೇಡಿಕೊಂಡರು. ಸ್ವಾಮಿಗಳವರಿಗೆ ಆ ಆಜ್ಞೆಯನ್ನು ಮೀರಲಾಗಲಿಲ್ಲ. ಪುನಃ ಶ್ರೀಗಳವರು ಅಲ್ಲಿಯೇ ಇರಹತ್ತಿದರು. ಹಲ ಕೆಲವು ದಿನಗಳ ಮೇಲೆ ಆ ತಾಯಿಯವರು ಲಿಂಗೈಕ್ಯರಾದರು. ಶ್ರೀಗಳವರು ಅವರ ಸಂಸ್ಕಾರ ಕಾರ್ಯಗಳನ್ನೆಲ್ಲ ಮುಗಿಸಿದರು. ಅಷ್ಟರಲ್ಲಿ ಮೈಸೂರಿನಿಂದ ನಿಟ್ಟರೆ ಬಸಪ್ಪನವರ ಮುಖಂಡತ್ವದಲ್ಲಿ ಭಕ್ತಾದಿಗಳ ತಂಡವೊಂದು ಕಾಶಿಗೆ ಹೋಗಿ ಶ್ರೀಗಳವರನ್ನು ಕರೆದುಕೊಂಡು ಬರಬೇಕೆಂದು ತೀರ್ಮಾನಿಸಿ ಹೋಯಿತು. ಶ್ರೀಗಳವರು ಹೊರಡಲುದ್ಯುಕ್ತರಾದರು. ಶ್ರೀಗಳು ಕಾಶಿಯಲ್ಲಿ ತಮ್ಮದೇ ಆದ ಹಲವಾರು ಭಾಷೆಯ ಗ್ರಂಥಗಳನ್ನುಳ್ಳ ಲೈಬ್ರರಿ (ವಾಚನಾಯ) ಯನ್ನು ಇಟ್ಟುಕೊಂಡಿದ್ದರು. ಅವುಗಳಲ್ಲಿ ಮಹತ್ವದ ಸಾವಿರಾರು ಗ್ರಂಥಗಳನ್ನು ಮಾತ್ರ ತೆಗೆದುಕೊಂಡು ಉಳಿದ ನಾಲ್ಕಾರು ಸಾವಿರ ಗ್ರಂಥಗಳನ್ನು ಅಲ್ಲಿನ ವಿದ್ಯಾರ್ಥಿಗಳಿಗೆಲ್ಲ ದಾನಮಾಡಿ ಬಿಟ್ಟರಂತೆ. ಇದರಂತೆಯೇ ಹಲವಾರು ಮರದ ಸಾಮಾನುಗಳನ್ನೂ ಇನ್ನಿತರ ವಸ್ತು ಒಡವೆಗಳನ್ನೆಲ್ಲ ಮನ ಬಂದಂತೆ ದಾನ ಮಾಡಿಬಿಟ್ಟರು. ತಾವಿದ್ದಲ್ಲಿಗೆ ಅವನ್ನು ಸಾಗಿಸುವುದೇನೂ ಕಷ್ಟವಾಗುತ್ತಿರಲಿಲ್ಲ. ಆದರೆ ಘನತರ ವೈರಾಗ್ಯವಿದ್ದ ಅವರು ತಮ್ಮ ಉಪಯೋಗಕ್ಕಿಂತ ಹೆಚ್ಚಿನ ವಸ್ತುಗಳಾದರೂ ನಮಗೇಕೆ ಎಂದು ದಾನ ಮಾಡಿಬಿಟ್ಟರು. ಮೈಸೂರಿಗೆ ಹೊರಟರು.

ಕಾಶಿಯಲ್ಲಿರುವಾಗ ಅವರಿಗೆ ಆರ್ಥಿಕವಾಗಿಯಾಗಲಿ ಇನ್ನೇತರ ಕೊರತೆಯಾಗಲಿ ಇರಲಿಲ್ಲ. ಅವರನ್ನು ರಕ್ಷಿಸುತ್ತಿದ್ದ

ತಾಯಿಯವರು ಶ್ರೀಮಂತರಾಗಿದ್ದರು ಆದ್ದರಿಂದಲೇ ಯಾವ ಕೊರತೆಯು ಆಗಲಿಲ್ಲ. ಕರ್ನಾಟಕದಿಂದ ಕಾಶಿಗೆ ವಿದ್ಯಾಭ್ಯಾಸಕ್ಕೆ ಹೋದ ಅನೇಕ ವಿದ್ಯಾರ್ಥಿಗಳಿಗೆ ಶ್ರೀಗಳವರು ಮುಕ್ತ ಹಸ್ತದಿಂದ ಸಹಾಯ ಮಾಡುತ್ತಿದ್ದರಂತೆ. ಎಲ್ಲ ವಿದ್ಯಾರ್ಥಿಗಳಿಗೂ ಶ್ರೀಗಳವರು ಮೇಲ್ಪಂಕ್ತಿಯಾಗಿ ಮಾರ್ಗದರ್ಶಕರಾಗಿದ್ದರು.

ಕ್ರಿ. ಶ. 1946 ನೆಯ ಇಸ್ವಿಯಲ್ಲಿ ಶ್ರೀಗಳವರು ಜನ್ಮಭೂಮಿಗೆ ಮೇಲ್ಮೆಯನ್ನುಂಟು ಮಾಡಲು 33 ವರ್ಷಗಳ ತರುವಾಯ ಹೊರಟುಬಂದರು. ಪ್ರಥಮತಃ ಶ್ರೀಗಳು ಬೆಂಗಳೂರಿಗೆ ಬಂದಿಳಿದರು. ಬೆಂಗಳೂರಿನ ಸಹಸ್ರಾರು ಜನ ಭಕ್ತಮಂಡಲಿಯವರು ಶ್ರೀಗಳವರ ಆಗಮನದ ಸುದ್ದಿಯನ್ನು ಕೇಳಿ ಬಂದು ದರ್ಶನಾಶೀರ್ವಾದಗಳನ್ನು ಪಡೆಯ ಹತ್ತಿದರು. ಹಲವಾರು ಸಂಘಸಂಸ್ಥೆಗಳಲ್ಲಿ ಶ್ರೀಗಳವರ ಉಪನ್ಯಾಸಗಳೇರ್ಪಟ್ಟವು. ಶ್ರೀಗಳವರು ತಮ್ಮ ಮೇಘ ಮಂದ್ರವಾದ ದಿವ್ಯಸ್ವರದಿಂದ ತುಂಬಿ ಹರಿಯುವ ಗಂಗಾನದಿಯ ಪ್ರವಾಹದಂತೆ ಶಾಂತವೂ ಗಂಭೀರವೂ, ಪವಿತ್ರವೂ, ಶುದ್ಧವೂ ಆದ ಉಪನ್ಯಾಸ ಜಲವನ್ನು ಎಲ್ಲರಿಗೂ ಪಾನ ಮಾಡಿಸಿ ಬೆರಗುಗೊಳಿಸಿದರು. ಮೈಸೂರಿನ ಭಕ್ತರುಗಳೆಲ್ಲ ಶ್ರೀಗಳು ಯಾವಾಗ ಮೈಸೂರಿಗೆ ಬಂದಾರೊ ! ಯಾವಾಗ ನಾವೆಲ್ಲ ಸಂದರ್ಶಿಸೇವೊ ಎಂಬ ಕುತೂಹಲದಿಂದ ಕೂಡಿದ್ದರು. ಸುತ್ತೂರು ಶಿವರಾತ್ರಿ ರಾಜೇಂದ್ರ ಶ್ರೀಗಳವರಂತೂ ಬೆಂಗಳೂರಿನಲ್ಲಿಯೇ ಶ್ರೀಗಳವರ ಹತ್ತಿರವಿದ್ದು ಎಲ್ಲ ಏರ್ಪಾಡುಗಳನ್ನು ಮಾಡುತ್ತಿದ್ದರು. ಬೆಂಗಳೂರಿನ ಭಕ್ತರುಗಳಿಗೆ ಶ್ರೀಗಳವರ ಉಪನ್ಯಾಸ ಕೇಳಿ ದರ್ಶನಾಶೀರ್ವಾದ ಪಡೆದು ದಣಿವಾಗಲೊಲ್ಲದು. ದಿನದಿನವೂ ಹೊಸ ಹೊಸ ವಿಷಯ ಹೊಸ ಹೊಸ ಮಾತುಗಳು. ನೂತನ ನೂತನ ತತ್ತ್ವಗಳ ರುಚಿಯುಣಿಸಲು ಯಾರಿಗೆತಾನೆ ಬೇಡ ? ಇಲ್ಲಿಯೇ ಇನ್ನು ಕೆಲವು ದಿನಗಳಿರಬೇಕೆಂದು ಬೆಂಗಳೂರಿನವರ ಒತ್ತಾಯ ಬೆಂಗಳೂರಿನಿಂದ ನಮ್ಮೂರಿಗೆ ಶ್ರೀಗಳು ಬೇಗ ದಯಮಾಡಿಸಬೇಕೆಂದು ಮೈಸೂರಿನವರ ಒತ್ತಾಯ. ನೂರಾರು ಪತ್ರಗಳೂ ತಂತಿ ಸಮಾಚಾರಗಳೂ ಮೈಸೂರಿನಿಂದ ಬರುತ್ತವೆ. ಶ್ರೀಗಳವರು ಬೆಂಗಳೂರಿನ ಜನಗಳನ್ನು ಸಮಾಧಾನಗೊಳಿಸಿ ಮೈಸೂರಿಗೆ ಪ್ರಯಾಣ ಬೆಳಸಿದರು.

ಕಾಶಿಗೆ ಶ್ರೀಗಳು ದಯಮಾಡಿಸಿದ ನಂತರ ಅರಮ[illegible] ಪಂಚಗವಿ ಮಠವು ಹಲಕೆಲವು ಕಡೆ ಸಿಥಿಲತೆಗೊಂಡಿತು. ಶ್ರೀಗಳು ದಯಮಾಡಿಸುವರೆಂಬ ಸುದ್ದಿ ತಿಳಿದೊಡನೆಯೆ ಪುಣ್ಯಶ್ಲೋಕರೂ ಆಳಿದ ಮಹಾಸ್ವಾಮಿಯವರೂ ಆದ ಕೃಷ್ಣರಾಜೇಂದ್ರ ಒಡೆಯರ್ ಬಹದ್ದೂರ್‌ರವರ ಧರ್ಮ[illegible] ಪತ್ನಿಯವರೂ ಲಿಂಗನಿಷ್ಠಾಪರರೂ ಆದ ಮಹಾರಾಣಿ ಮಹಾ ಮಾತೃಶ್ರೀ "ಪ್ರತಾಪಕುಮಾರಿ"ಯವರು ಸಾ[illegible] ರಾರು ರೂಪಾಯಿಗಳ ಖರ್ಚಿನಲ್ಲಿ ಮಠವನ್ನು ಪುನರುದ್ಧಾ[illegible] ರಗೊಳಿಸಿದರು. ಶ್ರೀಗಳವರು ಬರುವಿಕೆಯನ್ನೇ ತಾಯಿ ಮಹಾರಾಣಿಯವರು ಎದುರು ನೋಡುತ್ತಿದ್ದರು. ಶ್ರೀಗಳ[illegible] ವರು 1964 ನೆಯ ಚೈತ್ರಬಹುಳದಲ್ಲಿ ಮಠಕ್ಕೆ ದಯ[illegible] ಮಾಡಿಸಿದರು. ಸಕಲ ವೈಭವದಿಂದ ಮೈಸೂರಿನ ಭಕ್ತ[illegible] ವೃಂದ ಎದುರ್ಗೊಂಡು ಹರ್ಷಪುಳಕಿತಗೊಂಡಿತು. ಸುತ್ತೂರು ಶ್ರೀಗಳವರಂತೂ ಶ್ರೀಗಳನ್ನಗಲಿ ಅ[illegible] ಗಳಿಗೆಯೂ ಇರುತ್ತಿರಲಿಲ್ಲ. ದಾಸೋಹಿಗಳೂ, ತಪೋಧ[illegible] ನರೂ, ದಿವ್ಯತೇಜೋರಾಶಿಗಳೂ ಆದ ಶ್ರೀ ಸಿದ್ಧಗಂಗಾ ಮಠದ ಶ್ರೀ ಶಿವಕುಮಾರ ಸ್ವಾಮಿಗಳೂ ಶ್ರೀಗಳವರ ದರ್ಶನ ಪಡೆದು ಬಂದರು. ಅನೇಕಾನೇಕ ಭಕ್ತ ಮಹನೀಯರೂ ಬಂದು ಶ್ರೀಗಳವರ ದಿವ್ಯ ದರ್ಶನದಿಂದ ತೃಪ್ತ[illegible] ರಾಗ ಹತ್ತಿದರು. ಅನೇಕಾನೇಕ ಸಭೆಸಂಘಗಳಲ್ಲಿ ಶ್ರೀಗಳವರ ಉಪನ್ಯಾಸಗಳಾಗ ಹತ್ತಿದವು. ಸಹಸ್ರಾರು ಜನ ಭಕ್ತಾದಿಗಳು ಮನದಣಿಯೆ ಭಾಷಣಾ[illegible] ಮೃತಪಾನ ತೃಪ್ತರಾಗ ಹತ್ತಿದರು. ಶರಣ ತತ್ವದ ಮೇಲೆ ಶಿವತತ್ತ್ವದ ಮೇಲೆ, ಗುರುಲಿಂಗ ಜಂಗಮದ ವಿಷಯದಲ್ಲಿ ಶ್ರೀಗಳು ಕೊಡುತ್ತಿರುವ ಉಪನ್ಯಾಸ ನೂತನವೂ, ವಿದ್ವತ್ಪೂರ್ಣವೂ ಆಗಿತ್ತು. ವಚನಶಾಸ್ತ್ರ ಮತ್ತು ಶರಣ ತತ್ತ್ವದ ಮೇಲೆ ಶ್ರೀಗಳವರವಾಣಿ ಅಧಿಕಾರ ವಾಣಿ. ಇಂಥ ಅಧಿಕಾರ ವಾಣಿಯಿಂದ ಉಪನ್ಯಾಸ ಮಾಡುವ ವಿದ್ವಾಂಸರನ್ನು ಕಂಡರಿಯೆವು ಕೇಳರಿಯೆವು. ಪ್ರಭು, ಅಕ್ಕಮಹಾದೇವಿ ಬಸವಾದಿ ಪ್ರಮಥರ ವಚನಾ[illegible] ರ್ಥವನ್ನು ಸರ್ವದರ್ಶನ ಸಮನ್ವಯ ದೃಷ್ಟಿಯಿಂದ ಮಾಡುತ್ತಿದ್ದರು. ಉಪನ್ಯಾಸಗಳನ್ನು ಕೇಳುತ್ತಿರುವಂತೆ ಶರಣರ ಅಳ್ತನದ ಹಿರಿಮೆಯೆಂಥಹುದು. ವಿಶ್ವಧರ್ಮಕ್ಕೆ ಶರಣರು ಕೊಟ್ಟಕಾಣಿಕೆಯೇನು ? ಎಂಬುದು ಸ್ಪಷ್ಟ ವಾಗಿ ಗೋಚರಿಸುತ್ತಿತ್ತು. ಶರಣರು ವಿಶ್ವಧರ್ಮ ಸಮ[illegible] ನ್ವಯಾಚಾರ್ಯರೆಂದೂ, ಸಕಲ ಜೀವಾತ್ಮರಿಗೆ ಲೇಸನೇ[illegible]

ಬಯಸುವರೆಂದೂ ತಮ್ಮ ಹಲವಾರು ದರ್ಶನಾನುಭವದ ಒರೆಗಲ್ಲಿಗೆ ತಿಕ್ಕಿ ತೋರಿಸುವ ಶಕ್ತಿ ಸ್ವಾಮಿಗಳಿಗಿತ್ತು.

ಶ್ರೀಗಳವರ ಉಪನ್ಯಾಸದ ವೈಶಿಷ್ಟ್ಯವೆಂದರೆ ಎಲ್ಲರಿಗೂ ಅರ್ಥವಾಗುವ ಸುಲಭವೂ, ಸರಳವೂ ಆದ ಭಾಷೆ; ನೂರಾರು ಸುಂದರವಾದ ಲೌಕಿಕೋಪಮಾನಗಳು, ರಾಮ ಕೃಷ್ಣಪರಮಹಂಸರಂತೆ ಸಣ್ಣ ಸಣ್ಣ ಕಥೆಗಳೂ ತುಂಬಿ ತುಳುಕುವ ಪೂರ್ಣ ಶೈಲಿ. "ಕಿರಿದರೊಳು ಪಿರಿದು ಮರ್ಥವತೋರಿಪ" ವಾಕ್ಸಾಮರ್ಥ್ಯವು ಸಾಸಿವೆಯಲ್ಲಿ ಸಾಗರವನ್ನೇ ತುಂಬಿದಂತೆ. ನಕ್ಕು ನಗಿಸುವ ನುಡಿ, ನೇರವಾಗಿ ಹೃದಯಕ್ಕೆ ಮುಟ್ಟುವ ಪರಿಪಕ್ವ ಭಾವಪೂರ್ಣ ಮಾತು ಅವರದು. ಅಂತೆಯೇ ಸಭೆಯಲ್ಲಿ ಕುಳಿತವನು ಮಹಾವಿದ್ವಾಂಸನಾಗಿರಲಿ. ಏನನ್ನೂ ಓದದವನಾಗಿರಲಿ ಎಲ್ಲರ ಮನಸ್ಸಿನ ಮೇಲೂ ಒಂದಿಲ್ಲೊಂದು ರೀತಿಯ ಸತ್ಪ ರಿಣಾಮವಾಗುತ್ತಿತ್ತು. ಬೇಕೆಂದರೆ ಸ್ವಾಮಿಗಳು ಯಾರಿಗೂ ತಿಳಿಯದ ತಾರ್ಕಿಕ ರೀತಿಯ ಶೈಲಿಯಲ್ಲೂ ಮಾತನಾಡುವ ಸಾಮರ್ಥ್ಯಪಡೆದಿದ್ದರು. ಬೇಕೆಂದು ನಮ್ಮ ಕ್ಯಾತನಹಳ್ಳಿ ಸಾಹುಕಾರ ಸಿದ್ಧಲಿಂಗಪ್ಪನವರ ಸಂಸ್ಕೃತ ಪಾಠಶಾಲೆಯ ವಾರ್ಷಿಕೋತ್ಸವ ಸಮಾರಂಭ ವೊಂದರಲ್ಲಿ ಸಂಸ್ಕೃತದಲ್ಲಿಯೇ ಮಾತನಾಡಬೇಕೆಂದು ಕೇಳಿ ಕೊಂಡದ್ದರ ಮೇರೆಗೆ ಅಂದು ಶ್ರೀಗಳವರು ಪ್ರೌಢ ತಾರ್ಕಿಕ ರೀತಿಯ ಕಠಿಣತರ ಶೈಲಿಯಲ್ಲಿ ಉಪನ್ಯಾಸ ಮಾಡಿದರು. ಆ ದಿನ ಮೈಸೂರಿನ ವಿದ್ವಾಂಸರನೇಕರು ಬರಿದ್ದರು. ಆದರೆ ಗಗನ ಗಂಭೀರ ಧ್ವನಿಯಲ್ಲಿ ಶ್ರೀಗಳ ವರು ಅಂದು ಸಂಸ್ಕೃತದಲ್ಲಿ ಮಾಡಿದ ಉಪನ್ಯಾಸವು ಅವರ ಪ್ರತಿಮವಾದ ಸಂಸ್ಕೃತ ಭಾಷೆಯ ಮೇಲಿನ ಅಧಿಕಾರಿಕ ಪ್ರಿಣಾಮವನ್ನು ಎತ್ತಿ ತೋರಿಸುವಂತಿತ್ತು. ಕೊನೆಗೆ ಶ್ರೀಗಳವರು ಉಪನ್ಯಾಸ ಮುಗಿಸಿ ನಕ್ಕರು. ಯಾರಿಗೆ ಏನು ಅರ್ಥವಾಯಿತು ಎಂದರು. ಎಲ್ಲರೂ ಸುಮ್ಮ ನಿದರು. ಹಲಕೆಲವು ವಿದ್ವಾಂಸರು ಮಾತ್ರ ಏನನ್ನೂ ತಿಳಲರಿಯದೆ ಬಹಳ ಚೆನ್ನಾಗಿತ್ತು ಎನ್ನುವುದರಲ್ಲೇ ತೃಪ್ತರಾದರು.

ಶ್ರೀಗಳವರು ಮೈಸೂರಿಗೆ ಬಂದು ಜನಮನೋ ಭೂಮಿಕೆಯನ್ನು ಹದಗೊಳಿಸುತ್ತಿರುವ ಸಮಯದಲ್ಲಿ ನಮ್ಮ ಹುಟ್ಟೂರಾದ ಉಕ್ಕಲಗೆರೆಯಲ್ಲಿ ಪೂರ್ವಾಶ್ರಮದ ತಂದೆಯವರಾಗಿದ್ದ ಲಿಂಗಪ್ಪನವರು ಶ್ರೀಗಳವರನ್ನು ಮನೆಗೆ ಬರಬೇಕೆಂದೂ ನೋಡಬೇಕೆಂಬ ಆಸೆಯಾಗಿದೆ ಯೆಂದೂ ತಮ್ಮ ಮಕ್ಕಳಾದ ಸುಬ್ಬಣ್ಣ ಮತ್ತು ಶಿವಪ್ಪ ಇವರೀರ್ವರನ್ನೂ ಮೈಸೂರಿಗೆ ಕಳಿಸಿಕೊಟ್ಟರು. ಆಗ ಲಿಂಗಪ್ಪನವರಿಗೆ 110 ವರುಷಗಳಾಗಿದ್ದುವು. ತೀರಾ ಹಣ್ಣು ಹಣ್ಣು ಮುದುಕರಾಗಿದ್ದರು. ಅಭಿಮಾನ ಭಾಧಿ ಸುತ್ತಿತ್ತು. ಜಗತ್ತನ್ನೇ ಬಂಧು ಬಾಂಧವರೆಂದು ತಿಳಿದು ವಿಶಾಲ ಪ್ರಪಂಚದಲ್ಲಿ ವಿಹರಿಸುತ್ತಿರುವ ಶ್ರೀಗಳವರಿಗೆ ಮಮತೆಯ ಸಂಕೀರ್ಣತೆಯೆಲ್ಲ ಮಾಯವಾಗಿದ್ದಿತು. ಆ ಸಂಬಂಧವಾದ ಮಲದಿಂದ ಎಂದೋ ನಿವೃತ್ತಿಗೊಂಡಿದ್ದರು. ಶಿವಣ್ಣ ಮತ್ತು ಸುಬ್ಬಣ್ಣನವರು ಮೈಸೂರು ಮಠಕ್ಕೆ ಬಂದರು. ಮಧ್ಯಾಹ್ನದ ಸಮಯ ಶ್ರೀಗಳವರು ಆಗ ತಾನೆ ಶಿವಪೂಜೆ ಮುಗಿಸಿಕೊಂಡು ಮಠದ ಮುಂದಿರುವ ದಾಳಿಂಬೆಯ ಮರವೊಂದರ ಬುಡದಲ್ಲಿ ಶಿವಸುಂದರ ಬ್ರಹ್ಮಾಂಡವನ್ನು ನೋಡುತ್ತ ಮಲಗಿಕೊಂಡಿದ್ದರು. ಇಬ್ಬರೂ ಬಂದು ನಮಸ್ಕರಿಸಿ ನಿಂತರು. ಸ್ವಾಮಿಗಳು ಎಲ್ಲರನ್ನೂ ಮಾತನಾಡಿಸುವಂತೆ 'ಚೆನ್ನಾಗಿದ್ದಿರಾ ಅಣ್ಣಾ' ಎಂದು ಕೇಳಿದರು. ಇವರು 'ತಮ್ಮ ಆಶೀರ್ವಾದ'ಎಂದು ಸುಮ್ಮನಾಗಿ ತಾವು ಬಂದ ಕಾರ್ಯ ತಿಳಿಸಲು ಹೆದರಿದವ ರಾಗಿ ಅಂಜಿ ಅಳುಕಿ ತಾವು ಬಂದ ಉದ್ದೇಶವನ್ನು ತಿಳಿ ಸಿದರು. ಸ್ವಾಮಿಗಳು ನಕ್ಕು ನಿಮ್ಮ ತಂದೆಯವರಿಗೆ ಮಗನೆಂಬ ಭ್ರಮೆಯೇಕಪ್ಪಾ. ಅದು ಅವರಿಗಿರಬಾರದು. ಎಲ್ಲರಂತೆ ಬೇಕಾದರೆ ಮಠಕ್ಕೆ ಬರಲಿ ನೋಡಿಕೊಳ್ಳಲಿ ಹೋಗಲಿ ಅವರು ಇಲ್ಲಿಗೆ ಬರುವುದಾದರೆ ಒಮ್ಮೆ ನಾನೇ ಬರೆಯುತ್ತೇನೆ. ಇಲ್ಲಿನ ಗಲಾಟೆಗಳೆಲ್ಲ ಮುಗಿಯಲಿ ನಾನು ಬರೆದನಂತರ ಅವರು ಬಂದು ಹೋಗಲಿ; ಹೋಗಿ ತಿಳಿಸಿರೆಂದು ಹೇಳಿಬಿಟ್ಟರು. ಅತ್ತ ಯಜಮಾನರು ಸ್ವಲ್ಪೇ ದಿನಗಳಲ್ಲಿ ಲಿಂಗೈಕ್ಯರಾದರು.

ಶ್ರೀಗಳವರ ವಿದ್ವತ್ತಿಗೂ ತಪಶ್ಶಕ್ತಿಗೂ ಮಾರುಹೋದ ಅಖಿಲ ಕರ್ನಾಟಕದ ಜನ ಶ್ರೀಗಳವರನ್ನು ನಮ್ಮೂರಿಗೆ ಬರಬೇಕು ತಮ್ಮೂರಿಗೆ ಬರಬೇಕೆಂದು ಕರೆಯಹತ್ತಿದರು. ಧಾರವಾಡದಲ್ಲಿ ಶ್ರೀ ಮನ್ನಿರಂಜನ ಮೃತ್ಯುಂಜಯ ಸ್ವಾಮಿ ಗಳು ತಮ್ಮ ಮಠದಲ್ಲಿ ಶಿವಾನುಭವ ಸಮ್ಮೇಳನವನ್ನು ಜಗದ್ಗುರು ಮುರುಘರಾಜೇಂದ್ರ ಮಹಾಸ್ವಾಮಿಗಳವರ ನೇತೃತ್ವದಲ್ಲಿ ಪ್ರತಿವರ್ಷವೂ ನಡೆಸುತ್ತಿರುವುದು ಸರ್ವವಿದಿತ

ವಷ್ಟೇ 1951 ನೆಯ ಇಸ್ವಿಯಲ್ಲಿ ಶ್ರೀಗಳವರನ್ನು ಅಲ್ಲಿಗೆ ಬರಮಾಡಿಕೊಂಡರು. ಶ್ರೀಗಳವರು ದಯಮಾಡಿಸಿದರು. ಘನವಾದ ಸಭೆ ನೆರವೇರಿತು. ಶ್ರೀ ಲಿಂ. ಬಸವನಾಳ ಮಾಸ್ತರರು, ನಂದೀಮಠರವರೇ ಮೊದಲಾದ ಅನೇಕ ಗಣ್ಯ ವಿದ್ವಾಂಸರಿಂದಲೂ ದೇಶದೇಶಗಳಿಂದ ಬಂದ ಭಕ್ತ ವೃಂದವೂ ಕಿಕ್ಕಿರಿದು ಸೇರಿ ಅಭೂತಪೂರ್ವ ಸಭೆ ನೆರವೇರಿದ್ದಿತು. ಆ ಸಭೆಯಲ್ಲಿ ಶ್ರೀಗಳವರು "ಸಿದ್ಧರಾಮ ಸಂಪಾದನೆ"ಯ ವಿಚಾರವಾಗಿ ನಾಲ್ಕು ಘಂಟೆಗಳ ಕಾಲ ಅವಿಚ್ಛಿನ್ನವಾಗಿ ಮಾತನಾಡಿದರು. ಜ ಗ ದ್ಗು ರು ಗ ಳ ಕಣ್ಣಿನಲ್ಲಿ ಆನಂದ ಬಾಷ್ಪಗಳು ಒಂದೇ ಸಮನೆ ಸುರಿಯುತ್ತಿದ್ದುವು. ಸಭೆಯಲ್ಲಿ ಅಷ್ಟು ದೀರ್ಘಕಾಲವೂ ಅಶ್ಮೀಭೂತವಾಗಿ ಕುಳಿತು ಕೊಂಡಿತ್ತು. ಸ್ವಾಮಿಗಳವರು ಉಪನ್ಯಾಸ ಮುಗಿಸಿದೊಡದೆಯೇ ಐದು ನಿಮಿಷಗಳವರೆಗೆ ಸಭೆಯಲ್ಲಿ ಕರತಾಡನ ಹರ್ಷೋದ್ಗಾರಗಳ ಮೊಳಗು ಗಗನ ಗಂಭೀರವಾಗಿ ಹೋಯಿತು. ಜಗದ್ಗುರುಗಳವರು ಪೀಠದಿಂದ ಇಳಿದುಬಂದು ಶ್ರೀಗಳವರನ್ನು ಅಪ್ಪಿಕೊಂಡು ಬಿಟ್ಟರು. ಶಿವಾನುಭವ ಸಮ್ಮೇಳನ ಮುಗಿಯುವವರೆಗೂ ಶ್ರೀಗಳರ ಉಪನ್ಯಾಸ ಪ್ರತಿದಿನವೂ ನಡೆಯುಹತ್ತಿತು. ಸಾವಿರಾರು ಜನ ಶ್ರೋತೃವೃಂದವು ಸ್ವಾಮಿಗಳವರ ದಿವ್ಯವಾದ ಉಪದೇಶದಿಂದ ತೃಪ್ತರಾಗಿ ತಮ್ಮ ತಮ್ಮ ಊರುಗಳಿಗೆ ಬರಬೇಕೆಂದು ಕರೆಯಹತ್ತಿದರು. ಸ್ವಾಮಿಗಳವರು ಆಮೇಲೆ ಗದಗ, ಬೈಲಹೊಂಗಲ ದಾವಣಗೆರೆ ........ಮೊದಲಾದ ಊರುಗಳಿಗೆಲ್ಲ ದಯಮಾಡಿಸಿ ಎಲ್ಲ ಭಕ್ತ ಮಹಾಶಯ ವೃಂದವನ್ನೂ ತೃಪ್ತಿಪಡಿಸಿದರು—

## ಗ್ರಂಥರಚನೆ ಭಾಷ್ಯ ಮತ್ತು ಕಾವ್ಯ

ಬಿಡುವಾದಾಗಲೆಲ್ಲ ಶ್ರೀಗಳವರು ಅನೇಕ ಗ್ರಂಥಗಳ ರಚನಾ ಕಾರ್ಯದಲ್ಲಿ ತೊಡಗುತ್ತಿದ್ದರು. ಶಕ್ತಿ ವಿಶಿಷ್ಟಾದ್ವೈತಪರವಾಗಿ ಪ್ರಸ್ಥಾನತ್ರಯ ಭಾಷ್ಯಗಳು ಇದ್ದವೆಂದೂ ಗೀತಾಭಾಷ್ಯವೊಂದು ಲುಪ್ತವಾಗಿ ಹೋಗಿದೆಯೆಂದೂ ಸ್ವಾಮಿಗಳವರ ಮತ. ಬ್ರಹ್ಮಸೂತ್ರಕ್ಕೆ ಶ್ರೀಪತಿಪಂಡಿತರೂ ದಶೋಪನಿಷತ್ತುಗಳಿಗೆ ಹಲವಾರು ಜನ ಆಚಾರ್ಯರೂ ಭಾಷ್ಯಗಳನ್ನು ಶಕ್ತಿ ವಿಶಿಷ್ಟಾದ್ವೈತ ಪರವಾಗಿ ರಚಿಸಿದ್ದಾರೆ. ಗೀತಾಭಾಷ್ಯವೊಂದು ಈಗ ಆಗಬೇಕಾದ ಕೆಲಸವೆಂದು ಶ್ರೀಗಳವರು ಗೀತಾಭಾಷ್ಯ ಬರೆಯುವತ್ತ ತಮ್ಮ ಗಮನವನ್ನು ತಿರುಗಿಸಿದರು. ಮಠಕ್ಕೆ ದಿನಾಲು ನೂರಾರು ಜನ ದರ್ಶನಾಶೀರ್ವಾದಗಳಿಗೆ ಬಂದು ಹೋಗುವ ಕಾರ್ಯ ಬಲವಾಯಿತು. ಆದುದರಿಂದ ಶ್ರೀಮನ್ಮಹಾರಾಣಿಯವರು ಚಾಮುಂಡಿ ಬೆಟ್ಟದ ಮೇಲಿರುವ 'ಬಂಗಲೆ' ಯೊಂದನ್ನು ತೆರವು ಮಾಡಿಕೊಟ್ಟರು. ಶ್ರೀಗಳು ಅಲ್ಲಿಯೇ ವಾಸಮಾಡಹತ್ತಿದರು. ಅಲ್ಲದೆ ಮಹಾರಾಣಿಯವರು ಶ್ರೀಗಳವರಿಗೆ ಗ್ರಂಥರಚನೆ ಮಾಡಲು ಅನುಕೂಲವಾಗಲೆಂದು ಸುಂದರವಾದ ಸಣ್ಣ ಬಂಗಲೆಯೊಂದನ್ನು ಮಠದ ಮುಂಭಾಗದಲ್ಲಿಯೂ ಕೆಲವಾರು ದಿನಗಳಲ್ಲಿ ಕಟ್ಟಿಸಿ ಸಿದ್ಧಗೊಳಿಸಿಯೇ ಬಿಟ್ಟರು. ಮಹಾರಾಣಿಯವರ ನಿರತಿಶಯ ಭಕ್ತಿ, ವಿಶ್ವಾಸಗಳು ಅಚಲವಾಗಿದ್ದವು. ಸ್ವಾಮಿಗಳವರಿಗೆ ಯಾವ ಕೊರತೆಯೂ ಆಗದಂತೆ ಮಠದ ಸಮಸ್ತ ವೆಚ್ಚದ ಭಾರವನ್ನು ಶ್ರೀಮನ್ಮಹಾರಾಣಿಯವರೇ ವಹಿಸಿಕೊಂಡು ನಿಚ್ಚ ನಿಚ್ಚ ಅರಮನೆಯಿಂದ ಎಲ್ಲ ಪಡಿಪದಾರ್ಥಗಳು ಬರುವಂತೆ ಏರ್ಪಡಿಸಿದ್ದರು. ನಿಚ್ಚ ನಿಚ್ಚ ಸ್ವಾಮಿಗಳವರ ದರ್ಶನ ಮಾಡಿ ದಿವ್ಯೋಪದೇಶಾನುಭವವನ್ನು ಪಡೆಯುತ್ತಿದ್ದರು. ಇತ್ತ ಶ್ರೀಗಳವರು ಭಗವದ್ಗೀತೆಗೆ ಭಾಷ್ಯವನ್ನು ಬರೆದು ಮುಗಿಸಿದರು. ಬಿಡುವು ಸಿಕ್ಕಾಗಲೆಲ್ಲ ಚಂಪೂರೂಪವಾಗಿ ಮಹದೇವಿಯಕ್ಕನ ಪುರಾಣವನ್ನೂ ರಚಿಸಹತ್ತಿದರು. ಇವೆರಡೂ ಗ್ರಂಥಗಳು ಸ್ವಾಮಿಗಳಲ್ಲಿರುವ ದ ರ್ಶ ನ ಸಂಪತ್ತು ಕಾವ್ಯಸಂಪತ್ತುಗಳನ್ನು ಎತ್ತಿ ತೋರಿಸುವಂಥವುಗಳಾಗಿದ್ದುವು. ಷಡಕ್ಷರಿ ಮ ಹಾ ಕ ವಿ ಯ ನಂತರ ಕನ್ನಡದಲ್ಲಿ ಯಾವ ಕವಿಗೂ ಸ್ವಾಮಿಗಳವರ ವಿನಾ ಇಂಥ ಮಹಾ ಕಾವ್ಯವನ್ನು ರಚನೆ ಮಾಡುವ ಸಾಮರ್ಥ್ಯವಿರಲಿಲ್ಲವೆಂಬುದು ಮಹದೇವಿಯಕ್ಕನ ಪುರಾಣ ಪಠಣದಿಂದ ಗೊತ್ತಾಗದಿರದು. ಕನ್ನಡ ಭಾಷೆಯನ್ನು ಕುರಿತೋದದ ಹಲವಾರು ಭಾಷೆಗಳ ಪರಿಚಯ ಮಾತ್ರದಿಂದ ಇದರಲ್ಲಿಯೂ ಅಪ್ರತಿಮ ಪಾಂಡಿತ್ಯ ಸಂಪಾದನೆ ಮಾಡಿದ್ದರು. ಪುರಾಣದಲ್ಲಿನ ಗದ್ಯಗಳಂತೂ ಬಾಣಭಟ್ಟನ ಗದ್ಯದಂತೆ ಹೃದ್ಯವಾಗಿಯೂ, ಭಾವಗರ್ಭಿತವಾಗಿಯೂ, ಉಪಮಾನೋತ್ಪ್ರೇಕ್ಷೆಗಳ ಪರಂಪರೆಯಿಂದಲೂ ರಾರಾಜಿಸುತ್ತಿವೆ. ಅಕ್ಕನ ವಚನಗಳನ್ನು ವೃತ್ತಕಂದರೂಪಗಳಿಗೆ ತಿರುಗಿಸಿ ಬರೆಯುವ ಅಪ್ರತಿಮ ಶೈಲಿಯನ್ನು ಇನ್ನಾವ ಮಹಾಕವಿಯಲ್ಲೂ ಕಾಣೆವು ಅನ್ನುವಂತಿವೆ ಅಲ್ಲಿನ ವೃತ್ತಕಂದಗಳು. ಇದೊಂದು ಉನ್ನತಮಟ್ಟದ ಆದರ್ಶಪುರಾಣ ಆದ

ದುರ್ದೈವದಿಂದ ಅದೂ ಪೂರ್ಣವಾಗಲಿಲ್ಲ ಇದ್ದಷ್ಟು ಕಾವ್ಯವನ್ನು ಶ್ರೀ ಘ. ಲಿಂ. ಚ. ಸುತ್ತೂರು ಶ್ರೀಗಳವರು ಪ್ರಕಟಿಸಿದುದು ಕನ್ನಡಿಗರ ಭಾಗ್ಯವೆನ್ನಬೇಕು. ಇಪ್ಪತ್ತನೆಯ ಶತಮಾನದ ಮಹಾ ಕಾವ್ಯ ಪಟ್ಟ ಅರ್ಹ ಬರೆದ 'ಅಕ್ಕಮಹಾದೇವಿ'ಗೇ ಸಲ್ಲಬೇಕು.

ನಾನು ವಿದ್ಯಾಭ್ಯಾಸ ಮಾಡುವ ಕಾಲದಲ್ಲಿ ಆಗಾಗ ಶ್ರೀಗಳವರು ದರ್ಶನಾಶೀರ್ವಾದಕ್ಕೆ ಮಠಕ್ಕೆ ಹೋದಾಗ ಶ್ರೀಗಳವರ ನಮ್ಮೆದುರಿಗೆ ಓದಿ ಹೇಳುತ್ತಿದ್ದ ಗೀತಾಭಾಷ್ಯದ ಹಲವಾರು ವಿಷಯಗಳೂ, ಪುರಾಣದ ಹಲವಾರು ಪದ್ಯಗಳೂ ಇನ್ನೂ ಕಿವಿಯಲ್ಲಿ ಕುಣಿದಾಡುತ್ತಿವೆ. ಗೀತಾ ಭಾಷ್ಯದ ಕಾರ್ಯವೆಲ್ಲವೂ ಮುಗಿದ ಮೇಲೆ ಮಹಾರಾಜಾ ಸಂಸ್ಕೃತ ಕಾಲೇಜಿನ ಹಲವಾರು ಜನ ವಿದ್ಯಾರ್ಥಿಗಳೆದುರಿಗೆ ಪದೇ ಪದೇ ಓದುತ್ತಿದ್ದರಂತೆ, ನಮ್ಮೆದುರಿಗೂ ಓದಿದ್ದಾರೆ. ಆದರೆ ಆ ಗ್ರಂಥವು ಅವರು ಲಿಂಗೈಕ್ಯವಾದ ನಂತರ ಎಲ್ಲಿ ಬಿದ್ದಿತೋ ಸಿಕ್ಕಲಿಲ್ಲವಂತೆ ಎಲ್ಲಿ ಹೋಗಿದೆಯೋ ಗೊತ್ತಿಲ್ಲ. ಆ ಭಾಷ್ಯವು ತರ್ಕಬದ್ಧವಾಗಿಯೂ ಅನೇಕ ಶಾಸ್ತ್ರ ಪಾಂಡಿತ್ಯ ವ್ಯಕ್ತಪಡಿಸುವಂತಹದೂ ಆಗಿದೆಯೆಂದು ನನ್ನ ಅನೇಕ ಜನ ಮಹಾರಾಜ ಸಂಸ್ಕೃತ ಕಾಲೇಜಿನ ಮಿತ್ರರು ಹೇಳುತ್ತಿದ್ದರು. ಸ್ವಾಮಿಗಳವರು ಒಂದು ದಿನ ನಮ್ಮೆದುರಿಗೆ ತಾವು ಬರೆದ ಪುರಾಣದ ಮತ್ತು ಭಾಷ್ಯದ ಹಲವಾರು ವಿಷಯಗಳನ್ನು ಓದುತ್ತ 'ಇವನ್ನೇಕೆ ನಾನು ನಿಮ್ಮೆದುರಿಗೆ ಓದುತ್ತೇನೆಂದರೆ ಇದರಲ್ಲಿನ ವಿಷಯ ನಿಮಗೆ ತೃಪ್ತಿಯನ್ನುಂಟು ಮಾಡಲೆಂದಲ್ಲ. ನಾನು ಬರೆದ ಕಾವ್ಯ ಪುರಾಣಗಳನ್ನು ನಾನೆ ಒಂದೆರಡುಬಾರಿ ಓದುತ್ತಿದ್ದರೆ ಎಲ್ಲೆಲ್ಲಿ ತಪ್ಪಾಗಿದೆಯೆಂದು ನನಗೇ ಹೊಳೆಯುತ್ತದೆಯೆಂದು" ಎಂಬುದಾಗಿ ಅಪ್ಪಣೆ ಕೊಡುತ್ತಿದ್ದರು. ಕಾವ್ಯಗಳನ್ನಾಗಲಿ ಲೇಖನಗಳನ್ನಾಗಲಿ ಇನ್ನಿತರ ಯಾವ ಗ್ರಂಥರಚನೆ ಮಾಡಿದವರೇ ಆಗಲಿ ಅದನ್ನು ಒಮ್ಮೆ ಬಿಟ್ಟು ಮೂರುನಾಲ್ಕು ಸಲ ಓದಬೇಕೆಂದೂ, ಆಗ ತನ್ನ ತಪ್ಪುಗಳು ತನಗೇ ಅರ್ಥವಾಗುತ್ತವೆಂದೂ ಕಾವ್ಯವನ್ನು ಇನ್ನೊಬ್ಬರ ಕೈಗೆ ತಿದ್ದುವುದಕ್ಕೂ ಕೊಡುವ ಹವ್ಯಾಸ ಒಳ್ಳೆಯದಲ್ಲವೆಂದೂ ಶ್ರೀಗಳವರು ಆಗಾಗ ಹೇಳುತ್ತಿದ್ದರು. ಈಗ ಬರೆದ ಒಂದು ಪದ್ಯ ಇನ್ನು ಇನ್ನು ಮೂರು ನಾಲ್ಕು ತಿಂಗಳು ಬಿಟ್ಟು ಮತ್ತೊಮ್ಮೆ ಓದಿದಾಗ ಆಗ ಮಾಡಿದತಪ್ಪುಗಳು ಈಗ ಹೊಳೆಯುವವು. ಆಗ ತಿದ್ದುವುದಕ್ಕೆ ಅನುಕೂಲವಾಗುವುದು. ಇಂದು ಬರೆದ ಪದ್ಯವನ್ನು ಹಾಗೆಯೆ ಇಂದೇ ಪ್ರಕಟನೆಗೊಳಿಸಬಾರದು. ದೋಷಗಳು ಬಹಳ ಇರುತ್ತವೆ. ಗ್ರಂಥಗಳು ಶಾಶ್ವತವಾಗಿರಬೇಕು ಎಂದು ಇಚ್ಛಿಸುವವನು ಹಲವಾರು ದಿನಗಳು ಅವನ್ನು ಪುನಃ ಪುನಃ ನೋಡಿ ಹಲವಾರು ವಿಚಾರಗಳ ಮಥನ ಮಾಡಿ ಶುದ್ಧವೂ ಭಾವ ಪೂರ್ಣವೂ ಆಯಿತೆಂದು ತಿಳಿದಾಗ ಪ್ರಕಟಿಸಬೇಕೆಂಬುದೇ ಶ್ರೀಗಳವರ ಸಂದೇಶ. ಆದುದರಿಂದಲೇ ಅವರು ತಮ್ಮ ದರ್ಶನಕ್ಕೆಂದು ಬಂದ ಹಲವಾರು ಜನಗಳೆದುರು ಅವನ್ನು ಓದುತ್ತಿದ್ದುದರ ಉದ್ದೇಶ. ಬೇರೆಮಾತುಗಳಿಂದ ತೃಪ್ತಿಪಡಿಸಿಕಳಿಸುವುದಕ್ಕಿಂತ ಈ ಮಾತುಗಳಿಂದ ತೃಪ್ತಿಪಡಿಸಿದರೆ ಏಕಕಾಲದಲ್ಲಿ ಎರಡೂ ಕೆಲಸಗಳಾಗುತ್ತವೆಯೆಂಬುದೇ ಶ್ರೀಗಳವರ ಇಚ್ಛೆ. ಇಷ್ಟು ಶ್ರಮಪಟ್ಟು ಗೀತಾಭಾಷ್ಯವನ್ನು ಶ್ರೀಗಳವರು ರಚಿಸಿದರೂ ಅವರ ಕಾಲದಲ್ಲಿಯೇ ಅದು ಪ್ರಕಟವಾಗಲಿಲ್ಲ. ಅವರು ಬರೆಬರೆದು ಎಲ್ಲಿ ಇಟ್ಟರೋ ಏನೋ ದೇವರಿಗೇ ಗೊತ್ತು. ಈಗ ಆ ಮಹಾ ಭಾಷ್ಯವೆಲ್ಲ ಸಮಗ್ರವಾಗಿ ಸಿಗುತ್ತಿಲ್ಲವೆಂದೂ ಅಲ್ಲಷ್ಟು ಇಲ್ಲಷ್ಟು ಸಿಕ್ಕುತ್ತದೆಂದೂ ಕೇಳಿದ್ದೇನೆ. ಪೂರ್ಣಗ್ರಂಥವು ಸಿಕ್ಕು ಪ್ರಕಟವಾಗುವುದಾದರೆ ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತಕ್ಕೊಂದು ದೊಡ್ಡ ಆಸ್ತಿಯೇ ಆದೀತು. ಇಪ್ಪತ್ತನೆಯ ಶತಮಾನಕ್ಕೊಂದು ಕಳೆ ಬೆಳೆದು ಬಂದೀತು.

ಶ್ರೀಗಳವರಲ್ಲಿನ ಇನ್ನೊಂದು ವಿಶಿಷ್ಟವಾದಶಕ್ತಿಯೆಂದರೆ ಪೂರ್ಣವೈರಾಗ್ಯ ಮನೋಭಾವ. ಅವರ ಕಣ್ಣಿಗೆ ಧನವೂ ಒಂದು ಮಣ್ಣು ಹೆಂಟೆಯೂ ಒಂದೇ. ಎಷ್ಟೋ ಸಲ ಅನೇಕ ಜನ ಶ್ರೀಮಂತರು ತಮ್ಮ ಧನವನ್ನು ಪವಿತ್ರಗೊಳಿಸಬೇಕೆಂದು ಅರ್ಪಿಸಲ್ಪಟ್ಟ ದಕ್ಷಿಣಾದ್ರವ್ಯವನ್ನು ಕೈಯ್ಯಿಂದ ಮುಟ್ಟುತ್ತಿರಲಿಲ್ಲ. "ಆ ಧನವನ್ನು ನಾನೇನು ಮಾಡಲಿ ಬೇಕಾಗಿಲ್ಲವೆನ್ನುತ್ತಿದ್ದರು. ವಿದ್ಯಾರ್ಥಿಗಳಿಗೋ ಅಥವಾ ವಿದ್ಯಾರ್ಥಿನಿಲಯಗಳಿಗೋ ಕೊಟ್ಟುಬಿಡಿರೆಂದು ಅವರೇ ಸೂಚಿಸಿಬಿಡುತ್ತಿದ್ದರು. ಗುರುಲಿಂಗ ಜಂಗಮದ ಪ್ರೇಮದ ನಿಬ್ಬೆರಗುಗೊಂಡ ಅವರಿಗೆ ಯಾವುದರಲ್ಲಿಯೂ ಪ್ರೀತಿಯಿರಲಿಲ್ಲ. ವಿಶ್ವವನ್ನೆಲ್ಲ ಸತ್ಯ ಶುದ್ಧ ಸುಂದರ ಶಿವನರೂಪವೆಂದು ಹೃದಯ ವೈಶಾಲ್ಯದಿಂದ ನೋಡಿ ಆನಂದಿಸುವುದೇ ಅವರ ಆನಂದವಾಗಿತ್ತು. ಅವನ

ವಿಲಕ್ಷಣವಾದ ಗೂಢಾರ್ಥ ಭರಿತ ಹಾಸ್ಯ ಪ್ರಸಂಗಗಳಂತೂ ಅನಿರ್ವಚನೀಯ. ಯಾವಾಗಲೂ ನಗುವುದ ನಗಿಸುವುದು, ಅವರ ಸುಂದರವಾದ ಮಾತುಗಳ ಮೂಲವಾಗಿತ್ತು. ಒಮ್ಮೊಮ್ಮೆ ತಲೆ ಚಿಟ್ಟೆನ್ನುವಷ್ಟು ಗೂಢವಾದ ಗಾಢವಾದ ವಿಷಯಗಳನ್ನು ನಿವೇದನೆಗೊಳಿಸುತ್ತಿದ್ದರು. ಕಠಿಣವಾದ ಸಮಸ್ಯೆಗಳನ್ನು ಮನಸ್ಸುಧಾರಣ ಮಾಡಲು ಪೂರ್ವಭಾವಿಯಾಗಿ ಮನಸ್ಸು ಪ್ರಸನ್ನತೆಗೊಳಿಸುವುದಾವಶ್ಯಕವೆಂದು ತಿಳಿದೋ ಏನೋ ಸುಂದರವಾದ ಕತೆಗಳ ಮೂಲಕ ಮನಸ್ಸನ್ನು ಪ್ರಸನ್ನಗೊಳಿಸಿ ಅಧಿಕಾರ ಯೋಗ್ಯತೆಗೊಳಿಸಿ ಗೂಢತತ್ತ್ವಾರ್ಥಗಳನ್ನು ವಿವರಿಸುವುದೇ ಅವರ ಮಾತಿನ ರಹಸ್ಯವಾಗಿತ್ತು. ಇನ್ನೊಬ್ಬರಲ್ಲಿರುವ ದೋಷಗಳನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸಿ ಸೋದಾಹರಣ ಪೂರ್ವಕ ಮನದಟ್ಟುಗೊಳಿಸಿ ಸನ್ಮಾರ್ಗಕ್ಕೆಳೆಯುತ್ತಿದ್ದರು.

### ಕೊನೆಯ ದಿನಗಳು

'ಜಾತಸ್ಯ ಮರಣಂ ಧ್ರುವಂ' ಎಂಬುಕ್ತಿಯಂತೆ ದೇಹಧಾರಿಗಳೆಲ್ಲ ಆ ದೇಹವನ್ನು ಬಿಡಲೇ ಬೇಕಲ್ಲವೆ ? ಆದರೆ ಮಾಡತಕ್ಕ ಪೂರ್ಣಕರ್ತವ್ಯವನ್ನು ಮಾಡದೆ ಹಾಗೆ ದೇಹ ಬಿಟ್ಟಾಗ ಸಮಾಜ ಮರುಗಬೇಕಾಗುತ್ತದೆ. ಹಣ್ಣಾಗುವ ಪೂರ್ವದಲ್ಲಿ ಹೀಚುದುರಿದಂತಾಯಿತು, ಶ್ರೀಗಳವರ ಲಿಂಗೈಕ್ಯ ಪ್ರಸಂಗ. ಮೂರು ನಾಲ್ಕು ಶತಮಾನಗಳಿಂದಲೂ ಹುಟ್ಟದಿದ್ದ ಅಪೂರ್ವಪ್ರತಿಭೆಯ, ವೈರಾಗ್ಯದ ಮಹಾವ್ಯಕ್ತಿಯು ಮೈದಾಳಿ ಬಂದು ತನ್ನ ಸಮಸ್ತಶಕ್ತಿಯ ಪರಿಪಕ್ವಫಲದ ರಸವನ್ನು ಸಮಾಜಕ್ಕುಣಿಸುವ ಮುನ್ನವೇ ವ್ಯಕ್ತಿ ಮಾಯವಾಯಿತು. ಎಣ್ಣೆಯಿತ್ತು, ಪಣತೆಯಿತ್ತು ಬತ್ತಿಯೂ ಇತ್ತು ಕೊನೆಗೆ ಜ್ಯೋತಿಯೂ ಹೊತ್ತಿಸಲ್ಪಟ್ಟಿತ್ತು. ಎಣ್ಣೆ ಮುಗಿದಿರಲಿಲ್ಲ ಪಣತಿ ಒಡೆದಿರಲಿಲ್ಲ ಬತ್ತಿ ಪೂರ್ಣ ಸುಟ್ಟಿರಲಿಲ್ಲ. ಆದುದರಿಂದಲೇ ಸಮಾಜ ಚಿರ ಯಾತನೆಯನ್ನು ಶ್ರೀಗಳವರ ಲಿಂಗೈಕ್ಯ ಸ್ಥಿತಿಯಿಂದ ಹೊಂದಬೇಕಾಯಿತು.

ಮೊದಲು ಹೊಟ್ಟೆನೋವು ಕಾಣಿಸಿ ಕೊಂಡಿತು. ಆ ಹೊಟ್ಟೆನೋವನ್ನು ಶ್ರೀಗಳವರು ತಾಳಿಕೊಂಡು ಯಾರಿಗೂ ಹೇಳಲಿಲ್ಲ. ಒಳಗೊಳಗೆ ಅನುಭವಿಸಹತ್ತಿದರು. ಮುಖಮಾತ್ರ ನಗುತ್ತಲೇ ಇತ್ತು. ದೇಹ ದಿನ ದಿನಕ್ಕೆ ಕೃಶವಾಗುತ್ತಾ ಬಂತು, ಒಳಗೊಳಗೇ ಸುಡುತ್ತಿರುವ ಮಹಾವಿಟಪಿಯಂತೆ. ಮೂರುನಾಲ್ಕು ತಿಂಗಳು ಯಾರಿಗೂ ಶ್ರೀಗಳವರು ಹೇಳಲೇ ಇಲ್ಲ. "ಕ್ಯಾನ್ಸರ್" ಎಂಬ ಮಹಾವ್ಯಾಧಿಗೆ ಸಣ್ಣಕರುಳು ತುತ್ತಾಗಿ ಹೋಗಿತ್ತು. ವ್ಯಾಧಿ ಬೆಳೆಯುತ್ತ ಬಂದಂತೆಲ್ಲ ದೇಹ ಬಾಡುತ್ತ ಬಂದಿತು. ದೇಹಾನಿತ್ಯತೆಯನ್ನು ಅರಿತ ಶ್ರೀಗಳಿಗೇನೂ ಈ ವ್ಯಾಧಿ ಮನಃಕ್ಲೇಶಗೊಳಿಸಲಿಲ್ಲ. ದೇಹ ಬರುತ್ತೆ ಹೋಗುತ್ತೆ—ಎಂಬ ಮೂಲ ಮಂತ್ರದಲ್ಲಿಯೇ ಇತ್ತು. ಸಮಾಜಕ್ಕೆ ಭಯವಾಯಿತು. ಮಹಾಮಾತೃಶ್ರೀ ಮಹಾರಾಣಿಯವರೂ ಸುತ್ತೂರು ಸ್ವಾಮಿಗಳೂ ಶ್ರೀಗಳವರ ಈ ಅಕಾಲಿಕ ಅನಾಹುತ ವ್ಯಾಧಿಯ ಪರಿಣಾಮವಾಗಿ ಮರುಗ ಹತ್ತಿದರು. ಸಮಾಜವೆಲ್ಲ ಇದಾವ ಕಾಡುಗಾಳಿ ಬೀಸಿ ಮಹಾವೃಕ್ಷವನ್ನು ಒಣಗಿಸಹತ್ತಿತೋ ಎಂದು ಚಿಂತೆಗೊಳಗಾಯಿತು. ಕೊನೆಗೆ ಶ್ರೀಗಳವರನ್ನು ಒತ್ತಾಯ ಪಡಿಸ ಹತ್ತಿದರು. ಶ್ರೀಗಳವರು ವ್ಯಾಧಿಯ ರೀತಿಯನ್ನು ವಿವರಿಸಿದರು. ಕಾಲ ಮಿಂಚಿ ಹೋಗಿತ್ತು. ಸಣ್ಣ ಕರುಳಿಗೆ ಕ್ಯಾನ್ಸರ್ ವ್ಯಾಧಿ ವಿಶೇಷವಾಗಿ ಹಬ್ಬಿದುದು ಕಂಡು ಬಂತು. ತತ್‌ಕ್ಷಣವೇ ವೆಲ್ಲೂರು ಚಿಕಿತ್ಸಾಲಯಕ್ಕೆ ಮಹಾಮಾತೃಶ್ರೀ ಮಹಾರಾಣಿಯವರು ಕಳಿಸುವ ಏರ್ಪಾಡು ಮಾಡಿದರು. ಜೊತೆಗೆ ಸುತ್ತೂರು ಶ್ರೀಗಳವರೂ ಹೊರಟರು. ಹತ್ತಿಪ್ಪತ್ತು ಸಾವಿರ ರೂಪಾಯಿಗಳ ವ್ಯಯಮಾಡಿದುದಾಯಿತು. ಫಲವಾಗಲಿಲ್ಲ. ಈ ಸುದ್ದಿ ಕಾಳ್ಗಿಚ್ಚಿನಂತೆ ನಾಡಿನ ಮೂಲೆ ಮೂಲೆಗೂ ಹಬ್ಬಿತು. ಸಿದ್ಧಗಂಗಾ ಶ್ರೀಗಳವರಂತೂ ಧೀರಪ್ರಕೃತಿಯ ವೈರಾಗ್ಯಮೂರ್ತಿಗಳಾದರೂ ಎದೆಯೊಡೆದರು, ಧೈರ್ಯಗುಂದಿದರು. ವೆಲ್ಲೂರಿಗೆ ಪ್ರಯಾಣ ಮಾಡಿದರು. ಪರಿಸ್ಥಿತಿ ಕೈಮೀರಿ ಹೋಗಿದೆಯೆಂದು ಅಲ್ಲಿನ ಜಗತ್ಪ್ರಸಿದ್ಧ ವೈದ್ಯರು ಹೇಳಿದಾಗ ಎಲ್ಲರೂ ಎದೆಗುಂದಿದರು. ಅತ್ಯಂತ ಉಲ್ಬಣಾವಸ್ಥೆಯ ಜಠರ ಬಾಧೆಯಲ್ಲೂ ಶ್ರೀಗಳವರು ಸ್ಪಷ್ಟವಾಗಿ ಮಾತಾಡಿ ನಗುತ್ತಿದ್ದರು. ಒಂದು ಸಲವೂ ಸಂತಾಪದ ಧ್ವನಿಯಿಂದ ನರಳಲಿಲ್ಲವಂತೆ. ದೇಹದ ಬಾಧೆಗಳನ್ನೆ ಸಂಪೂರ್ಣ ನೀಗಿದವರಿಗೆಲ್ಲಿ ಬಾಧೆ ಗೊತ್ತಾಗಬೇಕು! ಸಿದ್ಧಗಂಗಾ ಶ್ರೀಗಳವರು ದಯಮಾಡಿಸಿದ ದಿವಸ ನಾ...

ಂಕರ ಶ್ರೀಗಳವರು ಒಳ್ಳೊಳ್ಳೆ ಭಕ್ಷ್ಯಭೋಜ್ಯ ಪ್ರಸಾದ ಳನ್ನು ಸಿದ್ಧಗೊಳಿಸಬೇಕೆಂದು ಅಪ್ಪಣೆ ಮಾಡಿದರಂತೆ. ಮಾಜದ ಆಧಾರ ಸ್ತಂಭದಂತಿದ್ದ ಶ್ರೀಗಳವರೇ ಕಳಚಿ ಬೀಳುವ ಸ್ಥಿತಿಯಲ್ಲಿ ಆ ಪ್ರಸಾದ ಯಾರ ನಾಲಿಗೆಗೆ ರುಚಿಯಾಗಬೇಕು. ಪಾಪ! ಸಿದ್ಧಗಂಗಾ ಶ್ರೀಗಳವರಿಗೆ ಸ್ವಾಮಿ, ಬಂದು ಬಿಟ್ಟದ್ದೀರಿ ಇಂದು ನೀವು ನಿಶ್ಚಿಂತೆ ಯಿಂದ ಇಲ್ಲಿ ಪೂಜೆ ಮುಗಿಸಿ ಆನಂದವಾಗಿ ಪ್ರಸಾದ ಸ್ವೀಕಾರ ಮಾಡಬೇಕೆಂ"ದರಂತೆ. ಸಿದ್ಧಗಂಗಾ ಶ್ರೀಗಳು ಬುದ್ಧಿ, ನನಗೆ ಇಂದು ಯಾವ ಪ್ರಸಾದವೂ ಸೇರುವುದಿಲ್ಲ' ಂದರಂತೆ ಗದ್ಗದಿತ ಕಂಠದಿಂದ ಕಂಬನಿಸುರಿಸುತ್ತ. ಆ ಮಾತಿಗೆ ಗೌರೀಶಂಕರ ಶ್ರೀಗಳವರು 'ನೀವು ಮಹಾ ಜಂಗಮವರ್ಯರು, ಇಲ್ಲಿಗೆ ದಯಮಾಡಿಸಿದ್ದೀರಿ. ಇದು ನನ್ನ ಕ್ತಿ. ನನ್ನ ಭಕ್ತಿಯನ್ನು ಸ್ವೀಕರಿಸಿ ನನ್ನ ಮನಸ್ಸಿಗೆ ಮೃದಿ ಮಾಡಬೇಕೆಂಬಿಚ್ಛೆಯಿದ್ದರೆ ತೃಪ್ತಿ ಯಾ ಹೋಳಿಗೆ ತುಪ್ಪ ಪ್ರಸಾದ ಸ್ವೀಕರಿಸಲೇಬೇಕು. ನನ್ನ ಮನಸ್ಸಿಗೆ ಸಂಕಟವನ್ನುಂಟು ಮಾಡಬೇಕೆಂಬಿಚ್ಛೆಯಿದ್ದರೆ ಉಪವಾಸವಿರಬೇಕೆ'ಂದರಂತೆ. ಇದೆಂಥ ಕಟ್ಟಾಜ್ಞೆ ! ಶ್ರೀ ಳವರ ಅಪ್ಪಣೆಯನ್ನು ನೆರವೇರಿಸಲು ಶ್ರೀ ಸಿದ್ಧಗಂಗಾ ೀಗಳೂ ಸುತ್ತೂರು ಶ್ರೀಗಳೂ ಸ್ನಾನಪೂಜಾದಿಗಳನ್ನು ುಗಿಸಿ ಪ್ರಸಾದ ಸೀಕಾರ ಮಾಡಿದರಂತೆ. ಅವರು ಸಾದ ಸ್ವೀಕಾರ ಮಾಡಿದರೆಂಬ ಸುದ್ದಿಯನ್ನು ಕೇಳಿ ಜ್ಯ ಶ್ರೀಗಳು ಬಹು ತೃಪ್ತಿಯನ್ನು ಸೂಚಿಸಿದರಂತೆ. ದ್ಧಗಂಗಾ ಶ್ರೀಗಳು ಎರಡು ಮೂರು ದಿನಗಳು ಲ್ಲಿಯೇ ಇರಲು ಸ್ವಾಮಿಗಳವರು "ಸ್ವಾಮಿ, ನೀವಿನ್ನು ಠಕ್ಕೆ ದಯಮಾಡಿಸಿ ; ಅಲ್ಲಿನ ಕೆಲಸ ಕಾರ್ಯಗಳನ್ನು ೀಡಿ; ಅದೊಂದು ದೊಡ್ಡ ಸಂಸಾರ ನಿಮ್ಮದು. ಅದು ಸೂತ್ರವಾಗಿ ಸಾಗಲಿ" ಎಂದು ಅಪ್ಪಣೆ ಮಾಡಿ ಕಳಿಸಿ ಟ್ಟರಂತೆ. ಸಿದ್ಧಗಂಗಾ ಶ್ರೀಗಳವರು ಅಗಲಿ ಹೊರಡ ರದ ಮನಸ್ಸಿನಿಂದ ಮಠಕ್ಕೆ ಹಿಂತಿರುಗಿದರು.

ಶ್ರೀಗಳವರಿಗೆ ಜಂಗಮವನ್ನು ಕಂಡರಂತೂ ಅತ್ಯಂತ ಠಾಭಕ್ತಿಗಳನ್ನು ಪ್ರಕಟಗೊಳಿಸುತ್ತಿದ್ದರು. ಶ್ರೀಸಿದ್ಧ ಗಾ ಶ್ರೀಗಳವರನ್ನು ಗವೀಮಠಕ್ಕೆ ಕರೆಸಿ ಕರೆಸಿ ಪದೇ ೀ ಪಾದಪೂಜೆಗಳನ್ನೇರ್ಪಡಿಸಿ ತೀರ್ಥಪ್ರಸಾದಗಳನ್ನು ಕಾರ ಮಾಡುತ್ತಿದ್ದರು. ಶ್ರೀಸಿದ್ಧಗಂಗಾ ಸುತ್ತೂರು ಗಳು ಮಾಡುತ್ತಿರುವ ಸಮಾಜ ಸೇವೆಯನ್ನೂ ವಿದ್ಯಾಭ್ಯಾಸದ ಪ್ರಗತಿಯನ್ನೂ ದಾಸೋಹ ಸೌಭಾಗ್ಯವನ್ನೂ ನೋಡಿ ಪದೇ ಪದೇ ಶ್ರೀಗಳವರು ಆನಂದ ತುಂದಿಲರಾಗಿ ಬಿಡುತ್ತಿದ್ದರು. ಎಲ್ಲ ಮಠಗಳೂ ಈ ನಿಷ್ಠೆಯನ್ನು ಮುಂದು ಮಾಡಿಕೊಂಡು ಬಂದರೆ ಸಮಾಜವೆಷ್ಟು ಸಂಸ್ಕಾರಗೊಂಡೀತೆಂದು ಉದ್ಗಾರ ತೆಗೆಯುತ್ತಿದ್ದರು. ಸಿದ್ಧಗಂಗೆಗೆ ಪದೇಪದೇ ದಯಮಾಡಿಸಿ ಏಕತ್ರ ಸಮಾವೇಶಗೊಳ್ಳುವ ಸಾವಿರಾರು ಹುಡುಗರ ವಿದ್ಯಾಭ್ಯಾಸದ ಸೌಂದರ್ಯವನ್ನೂ ಮಹಾದಾಸೋಹವನ್ನೂ ನೋಡಿ ಪರಮಾನಂದ ಸಾಗರದಲ್ಲಿ ಮುಳುಗಿ ಶ್ರೀ ಶಿವಕುಮಾರ ಸ್ವಾಮಿಗಳವರನ್ನು ಬಾಯ್ತುಂಬ ಹೊಗಳಿ ಹರಸುತ್ತಿದ್ದರು. ಒಮ್ಮೆ ಸಿದ್ಧಗಂಗಾ ಶ್ರೀಗಳವರನ್ನು ಗವೀ ಮಠಕ್ಕೆ ಕರೆಸಿಕೊಂಡು ಪೂಜಾದಿಗಳನ್ನು ಮಾಡಿಸಿ ಒತ್ತಾಯಪೂರ್ವಕವಾಗಿ ಬಂಗಾರದ ಕರಂಡಗೆಯೊಂದನ್ನು ಮಾಡಿಸಿ ಕೊಡುತ್ತ, ಈ ಕರಂಡಗೆಯನ್ನು ಇನ್ನು ಉಪಯೋಗಿಸಿ ಎಂದು ಅಪ್ಪಣೆ ಮಾಡಿದರು. ಸಿದ್ಧಗಂಗಾ ಶ್ರೀಗಳವರು ಬಂಗಾರದ ಕರಂಡಗೆಯನ್ನು ಪ್ರತಿನಿತ್ಯವೂ ಉಪಯೋಗಿಸಲಾರದೆ ಶ್ರೀಗಳವರ ದರ್ಶನಕ್ಕೆ ಹೋಗುವಾಗ ಮಾತ್ರ ಉಪಯೋಗಿಸುತ್ತಿದ್ದರು.

ಇಂಥ ಪುಣ್ಯಮಯ ಮಂಗಳ ದೇಹದ ಶ್ರೀಳವರ ಕೊನೆಯ ದಿನಗಳು ವೆಲ್ಲೂರು ಆಸ್ಪತ್ರೆಯಲ್ಲಿಯೇ ಕೊನೆಗೊಂಡವು. ತಾ॥12-8-1952 ನೆಯ ದಿನ ಸಮಾಜಕ್ಕೆ ಕಗ್ಗಾವಳನ್ನುಂಟುಮಾಡುವ ಭೀಕರ ದಿನ ; ಆ ದಿನದ ರಾತ್ರಿಯಲ್ಲಿ ಶ್ರೀ ಮನ್ನಿರಂಜನ ಗೌರೀಶಂಕರ ಶ್ರೀಗಳವರು ಲಿಂಗೈಕ್ಯರಾದರು. ನಾಡುನಾಡುಗಳ ಮೂಲೆಮೂಲೆಗಳಲ್ಲಿ ಜನತೆಯ ದುಃಖಾರ್ತಧ್ವನಿ ಮಾರ್ದನಿಗೊಂಡಿತು. ವೆಲ್ಲೂರಿನಿಂದ ಮಠಕ್ಕೆ ದಿವ್ಯ ದೇಹವು ತರಲ್ಪಟ್ಟಿತು. 13-8-52 ನೆಯ ದಿನ ವಿಧ್ಯುಕ್ತವಾಗಿ ಶ್ರೀಗಳವರ ಗದ್ದುಗೆಯನ್ನು ಗವೀಮಠದ ಪಕ್ಕದಲ್ಲಿ ಮಾಡಲಾಯಿತು. ನಾಡುನಾಡಿನ ತಂಡೋಪತಂಡವಾದ ಜನದ ತಿಂಥಿಣಿಯಿಂದಲೂ, ಹರಚರಗುರು ಪಟ್ಟಾಧ್ಯಕ್ಷರುಗಳಿಂದಲೂ ವಿರಕ್ತ ಸಮೂಹದಿಂದಲೂ ಸಮಾಧಿಕ್ರಿಯೆಯೇ ವೊದಲಾದವುಗಳು ಮುಗಿದುವು. ಬಂದವರೆಲ್ಲ ಕಣ್ಣೀರು ಸುರಿಸುತ್ತ ಬಿಸಿಯುಸುರು ಬಿಡುವಂತಾಯಿತು. ಶ್ರೀ ಸಿದ್ಧಗಂಗಾ ಶ್ರೀಗಳವರಿಗಂತೂ ದಿಕ್ಕೇತೋಚದಂತಾಗಿತ್ತು.

ಸಮಾಪ್ತಿ

# ದೃಷ್ಟಿ-ದೋಷಗಳು

# REFRACTIVE ERRORS

ಬೆಂ. ಗು. ಚಂದ್ರಶೇಖರ

ದೇಹ ಭಾಗಗಳಲ್ಲಿ ಶಿರಸ್ಸೂ, ಶಿರಸ್ಸಿನಲ್ಲಿ ನೇತ್ರಗಳೂ ಬಹುಮುಖ್ಯವಾದ ಇಂದ್ರಿಯಗಳಾಗಿವೆ. ಇಲ್ಲಿ ವೈದ್ಯ ಶಾಸ್ತ್ರಾಭ್ಯಾಸಿಗಳಾದ ಉತ್ಸಾಹೀತರುಣಲೇಖಕರು ದೃಷ್ಟಿದೋಷಗಳು ಹೇಗುಂಟಾಗುತ್ತವೆ? ಅದರ ಪರಿಣಾಮ ಜೀವನದ ಮೇಲೆ ಎಂಥ ಹಾನಿಯನ್ನುಂಟು ಮಾಡುವುದು? ಅದರ ನಿವಾರಣೋಪಾಯವೇನು? ಇತ್ಯಾದಿಗಳ ಬಗೆಗೆ ಉಪಯುಕ್ತ ಅಂಶಗಳನ್ನು ಬರೆದಿದ್ದಾರೆ.

—ಸಂ.

"ಪುಸ್ತಕಂ ಹಸ್ತ ಭೂಷಣಂ" ಎಂಬಂತೆ "ಸುಲೋಚನಂ ನಯನ ಭೂಷಣಂ" ಎಂದರೆ ತಪ್ಪಾಗಲಾರದು. ಕನ್ನಡಕವು ಮುಖದ ಲಕ್ಷಣವನ್ನು ವೃದ್ಧಿಗೊಳಿಸುತ್ತದೆ ಕನ್ನಡಕವನ್ನು ಕೆಲವರು ಪ್ರತಿಷ್ಠೆಗಾಗಿಯೂ ಮತ್ತೆ ಕೆಲವು ಮಂದಿ ಐಶ್ವರ್ಯವಂತರೆಂದು ತೋರಿಸಿಕೊಳ್ಳಲೂ ಧರಿಸುವರೆಂದು ಕೆಲವರ ವಾದ. ಇದು ಭಾಗಶಃ ನಿಜವಿರಬಹುದು. ಯಾವ ಕೆಲಸವನ್ನು ಮಾಡಬೇಕಾದರೂ ಯಾವುದಾದರೊಂದು ಉದ್ದೇಶವಿದ್ದೇ ಇರುತ್ತದೆ. ಹಾಗೆಯೇ ಕನ್ನಡಕ ಹಾಕುವುದರಲ್ಲಿಯೂ ಅನೇಕ ಉದ್ದೇಶಗಳಿವೆ. ಇವನ್ನು ಸಂಪೂರ್ಣವಾಗಿ ಅರ್ಥ ಮಾಡಿಕೊಳ್ಳದೆ ಕನ್ನಡಕವನ್ನು ಧರಿಸುವವರು ಸಾಮಾನ್ಯವಾಗಿ ಕುರುಡರು ಎಂದು ಕೆಲವರು ಕರೆಯುವುದುಂಟು. ಆದರೆ ಅದು ಕುರುಡಲ್ಲ; ದೃಷ್ಟಿ ನ್ಯೂನತೆ (Refractive-error) ಅಥವ ದೃಷ್ಟಿ-ದೋಷಮಾತ್ರ.

ಈ ಕಾಲದಲ್ಲಿ ಮೊದಲಿಗಿಂತಲೂ ಹೆಚ್ಚು ಜನರು ಕನ್ನಡಕವನ್ನು ಹಾಕುತ್ತಿರುವುದರಿಂದ ಇದು ನಾಗರೀಕತೆಯ ಕುರುಹು ಅಲ್ಲವೆ ಎಂದು ಯಾರಾದರೂ ಪ್ರಶ್ನಿ[illegible]ದರೆ ಇದು ನಾಗರೀಕತೆಯ ಚಿನ್ಹೆಯಲ್ಲ ಎಂದು ನೇರವಾ[illegible] ಹೇಳಬಹುದು. ಜನತೆಯು ದೃಷ್ಟಿ ನ್ಯೂನತೆಗಳ ಬ[illegible] ಹೆಚ್ಚು ತಿಳುವಳಿಕೆ ಪಡೆದು ತಮ್ಮ ಕಣ್ಣನ್ನು ಪರೀಕ್ಷಿ[illegible] ಕೊಂಡು ತಜ್ಞವೈದ್ಯರಿಂದ ಸೂಕ್ತ ಕನ್ನಡಕ ತೆಗೆ[illegible] ಕೊಳ್ಳುತ್ತಿರುವುದು ಇದಕ್ಕೆ ಕಾರಣ. ನಮ್ಮ ನಾ[illegible]ನಲ್ಲಿ ತಜ್ಞ ನೇತ್ರ ವೈದ್ಯರ ಸಂಖ್ಯೆ ಹೆಚ್ಚಿ ವೈದ್ಯಕೀ[illegible] ಪ್ರಗತಿ ಹೊಂದುತ್ತಿರುವುದರಿಂದ ಹೆಚ್ಚು ಮಂದಿ[illegible] ಕಣ್ಣಿನ ಮುಂದೆ ಕನ್ನಡಕವು ರಾರಾಜಿಸುತ್ತಿದೆಯೆ[illegible] ಹೊರತು ಕೇವಲ ಆಡಂಬರಕ್ಕಾಗಿಯಲ್ಲ ಎಂ[illegible] ನಿಸ್ಸಂಕೋಚವಾಗಿ ಹೇಳಬಹುದು.

ಹಾಗಾದರೆ ಯಾವ ಯಾವ ಕಾರಣಗಳಿಂ[illegible] ಕನ್ನಡಕಗಳನ್ನು ಉಪಯೋಗಿಸುತ್ತಾರೆ ಎಂಬುದ[illegible] ಪರಿಶೀಲಿಸೋಣ.

ಇದನ್ನು ಕೇವಲ ಮೂರೇ ಮೂರು ಕಾರಣ[illegible]ಗಾಗಿ ಉಪಯೋಗಿಸುತ್ತಾರೆ.

(೧) ದೃಷ್ಟಿ ದೋಷಗಳಿಗಾಗಿ :—ಇದು ಸಾಮಾ[illegible] ಹಾಗು ಪ್ರಧಾನ ಕಾರಣ.

(೨) ಬೇಸಗೆಯಲ್ಲಿ ತಂಪಿಗಾಗಿ.

(೩) ನಯನ ರಕ್ಷಣೆಗಾಗಿ.

ದೋಷ ರಹಿತ ಕಣ್ಣಿನಲ್ಲಿ (Ametropic e[illegible] ಬಾಹ್ಯವಸ್ತುಗಳಿಂದ ಹೊರಟ ಕಿರಣಗಳು ಅಕ್ಷಿಪ[illegible] (Retina) ಚೇತನ ಭಾಗದ ಮೇಲೆ ಬೀಳುವುದ[illegible] ಹತ್ತಿರದ ಮತ್ತು ದೂರದ ವಸ್ತುಗಳ ಪ್ರತಿಬಿಂ[illegible] ನಮಗೆ ಗೋಚರವಾಗುತ್ತದೆ. ಹಾಗೆ ಅಕ್ಷಿಪ[illegible] ಮೇಲೆ ಬೀಳದೆ ಅದರ ಹಿಂದೆ ಅಥವ ಮುಂದೆ ಬ[illegible] ವಸ್ತುಗಳ ಪ್ರತಿಬಿಂಬವು ಸ್ಪಷ್ಟವಾಗಿ ಕಾಣು[illegible]

ಈ ಕಾರಣದಿಂದ ದೃಷ್ಟಿದೋಷವನ್ನು ಮೂರು ಗುಂಪುಗಳಾಗಿ ವಿಂಗಡಿಸಬಹುದು.

I ಅ) ಸಮೀಪ ದೃಷ್ಟಿ (Short sight or Myopia)

ಆ) ದೂರ ದೃಷ್ಟಿ (Long sight or Hypermetropia)

ಇ) ಬಿಂದು ರಾಹಿತ್ಯ ದೃಷ್ಟಿದೋಷ (Astigmatism)

**ಸಾಮಾನ್ಯ ಕಾರಣ** :—ವಸ್ತುಗಳ ಪ್ರತಿಬಿಂಬವು ಸ್ಪಷ್ಟವಾಗಿ ಕಾಣಬೇಕಾದರೆ ಕರಿಯ ಗುಡ್ಡೆಗೂ (Cornea) ಮತ್ತು ಅಕ್ಷಿಪಟಕ್ಕೂ (Retina) ನಡುವೆ ಒಂದು ಅಂಗುಲ ಅಂತರವಿರಬೇಕು. ಇದರ ವ್ಯತ್ಯಾಸವಾದಾಗ ದೃಷ್ಟಿದೋಷ ಉಂಟಾಗುತ್ತದೆ.

**ಸಮೀಪ ದೃಷ್ಟಿ** :–ಕಣ್ಣು ಚಲಿಸದೆ ಸ್ಥಿರವಾಗಿದ್ದಾಗ ದೂರದಲ್ಲಿನ ವಸ್ತುಗಳ ಸಮಾನಾಂತರ ರೇಖೆಗಳು ಅಕ್ಷಿಪಟದ ಮುಂದೆ ಬೀಳುವುದರಿಂದ ಹತ್ತಿರದ ವಸ್ತುಗಳು ಮಾತ್ರ ಸ್ಪಷ್ಟವಾಗಿ ಕಂಡು ದೂರದ ವಸ್ತುಗಳ ಪ್ರತಿಬಿಂಬವು ಅಸ್ಪಷ್ಟವಾಗಿ ಕಾಣುತ್ತದೆ.

**ಕಾರಣಗಳು** :—(i) ಅಕ್ಷದ ಸಮೀಪ ದೃಷ್ಟಿ (Axial myopia) :– ಕಣ್ಣು ಗುಡ್ಡೆಯು ಅತಿ ಉದ್ದವಾಗಿದ್ದರೆ ಕರಿಯ ಗುಡ್ಡೆಗೂ ಮತ್ತು ಅಕ್ಷಿಪಟಕ್ಕೂ ನಡುವೆ ಅಂತರವು ಒಂದು ಅಂಗುಲಕ್ಕಿಂತಲೂ ಹೆಚ್ಚಾಗುತ್ತದೆ. ಇದು ಪ್ರಧಾನವಾದ ಕಾರಣ. ಎಳೆಯ ಮಕ್ಕಳಲ್ಲಿ ಕಣ್ಣುಗುಡ್ಡೆಯು ಅತಿ ಚಿಕ್ಕದಾಗಿರುತ್ತದೆ. ಮಗುವಿನ ದೈಹಿಕ ಬೆಳವಣಿಗೆಯಾಗುವಾಗ ಕಣ್ಣುಗುಡ್ಡೆಯು ಸಹ ಬೆಳೆಯುತ್ತಾ ಹೋಗುತ್ತದೆ. ಕಲವು ವೇಳೆ ಮಿತಿ ಮೀರಿ ಬೆಳೆದು ಅತಿ ಉದ್ದವಾದರೆ ಈ ದೋಷವನ್ನು ಕಾಣಬಹುದು. ಇದು ಅಕ್ಷಕ್ಕೆ ಸಂಬಂಧಪಟ್ಟ ಕಾರಣವಾದುದರಿಂದ ಈ ವಿಧವನ್ನು ಅಕ್ಷದ ಸಮೀಪ ದೃಷ್ಟಿ ಎನ್ನುತ್ತೇವೆ. ಇದು ಮಕ್ಕಳು ಶಾಲೆಗೆ ಹೋಗುವ ವಯಸ್ಸಿನಲ್ಲಿ ಪ್ರಾರಂಭವಾಗುತ್ತದೆ.

ಕೆಲವು ವೇಳೆ ಈ ವಿಧವು ಶಾಲೆಗೆ ಹೋಗುವ ವಯಸ್ಸಿನಲ್ಲಿ ಪ್ರಾರಂಭವಾಗಿ ಇಪ್ಪತ್ತೈದು ವರ್ಷ ವಯಸ್ಸಿನವರೆವಿಗೂ ವೃದ್ಧಿಯಾಗುತ್ತಾ ಹೋಗಿ ಇಪ್ಪತ್ತರಿಂದ ಮೂವತ್ತು ಡಯಾಪ್ಟರ್‌ಗಳನ್ನು ತಲುಪುತ್ತದೆ. ಇಲ್ಲಿ ಕರಿಯಗುಡ್ಡೆ ಮತ್ತು ಕಣ್ಣಿನ ಇತರ ಭಾಗಗಳು ನಶಿಸುವುದರಿಂದ ಮಧ್ಯ-ವಯಸ್ಸಿನಲ್ಲಿ ಅಂಧತೆಯು ಸಹ ಪ್ರಾಪ್ತವಾಗಬಹುದು. ದೃಷ್ಟಿದೋಷವು ಬಾಲ್ಯಾವಸ್ಥೆಯಿಂದ ಪ್ರೌಢಾವಸ್ಥೆಯವರೆವಿಗೂ ಹೆಚ್ಚಾಗುತ್ತ ಹೋಗುವುದರಿಂದ ಇದನ್ನು ವೃದ್ಧಿಯುತ ಸಮೀಪ ದೃಷ್ಟಿ (Progressive myopia) ಎನ್ನುತ್ತೇವೆ.

(ii) **ಸೂಚಕ ಸಮೀಪ ದೃಷ್ಟಿ** (Index myopia) :—ವೃದ್ಧರಲ್ಲಿ ಕಣ್ಮಣಿಯು (lens) ಸಂಕುಚಿತವಾಗುವುದರಿಂದ ಅದರ ಪ್ರತಿಫಲನ **ಸೂಚಕತ್ವ** (Index) ಹೆಚ್ಚಾಗಿ ಸಮೀಪ ದೃಷ್ಟಿಯನ್ನುಂಟು ಮಾಡುತ್ತದೆ.

(iii) **ವಕ್ರತೆಯ ಸಮೀಪ ದೃಷ್ಟಿ**:–(Curvature Myopia) ಕನಿನಿಕೆಯ ವಕ್ರತೆಯು ಅಧಿಕವಾದರೆ (Increased curvature of cornea) ದೂರದ ವಸ್ತುಗಳ ಕಿರಣಗಳು ಅಕ್ಷಿಪಟದ ಮುಂಭಾಗದಲ್ಲಿ ಬಿದ್ದು ದೃಷ್ಟಿದೋಷವನ್ನುಂಟು ಮಾಡುತ್ತವೆ

**ಲಕ್ಷಣಗಳು** :—ದೂರವಸ್ತುಗಳ ಅಸ್ಪಷ್ಟತೆಯು ಅತಿ ಮುಖ್ಯವಾದ ಲಕ್ಷಣ. ಶಾಲೆಗಳಲ್ಲಿ ಕಪ್ಪು ಹಲಗೆಯ ಮೇಲೆ ಬರೆದಿರುವ ಅಕ್ಷರಗಳು ಚೆನ್ನಾಗಿ ಕಾಣುವುದಿಲ್ಲವೆಂದು ಹೇಳುತ್ತಾರೆ. ಹತ್ತಿರದ ವಸ್ತುಗಳ ವೀಕ್ಷಣೆಗೆ ಯಾವ ತೊಂದರೆಯೂ ಉಂಟಾಗಲಾರದು. ಇದು ಅತಿಯಾದರೆ ತಲೆನೋವು ಕಾಣಿಸಿಕೊಳ್ಳುತ್ತದೆ. ಹುಡುಗರು ಪುಸ್ತಕವನ್ನು ಬಹಳ ಹತ್ತಿರವಿಡಿದು ಓದಲು ಪ್ರಾರಂಭಿಸುತ್ತಾರೆ.

**ಚಿಕಿತ್ಸಾ ಕ್ರಮ** :—ವೈದ್ಯರಿಂದ ಪರೀಕ್ಷಿಸಿಕೊಂಡು ಸರಿಯಾದ ನಿಮ್ನ ಮಸೂರದ (Concave lens) ಕನ್ನಡಕಗಳನ್ನು ಉಪಯೋಗಿಸಬೇಕು. ಬೆಳೆಯುವ

ಮಕ್ಕಳಿಗೆ ಇದು ಆವಶ್ಯಕ. ಇಲ್ಲದಿದ್ದರೆ ತಮ್ಮ ದೃಷ್ಟಿಯು ಇರುವುದೇ ಅಷ್ಟು ಎಂದು ತಿಳಿದು ಬಾಹ್ಯ ಪ್ರಪಂಚದ ಚಟುವಟಿಕೆಗಳಲ್ಲಿ ಭಾಗವಹಿಸದೆ ಮಕ್ಕಳ ಬುದ್ಧಿಶಕ್ತಿಯು ಕುಂಠಿತವಾಗುತ್ತದೆ.

ವೃದ್ಧಿಯುತ ಸಮೀಪ ದೃಷ್ಟಿಯು ವಂಶಪಾರಂಪರ್ಯವಾಗಿ ಬರುವುದರಿಂದ ಈ ದೋಷವುಳ್ಳ ದಂಪತಿಗಳು ಕುಟುಂಬ ನಿಯಂತ್ರಣವನ್ನು ಅನುಸರಿಸಬೇಕು. ಹಾಗಿಲ್ಲದಿದ್ದ ಪಕ್ಷದಲ್ಲಿ ಮಕ್ಕಳನ್ನು ತಜ್ಞವೈದ್ಯರಿಂದ ನ್ಯಾಯರೀತಿಯಿಂದ ಪರೀಕ್ಷಿಸಬೇಕು. ಇದನ್ನು ಸಂಪೂರ್ಣವಾಗಿ ಸರಿಪಡಿಸುವ ಆವಶ್ಯಕತೆ ಇಲ್ಲ. **ಸಂಪರ್ಕ ಕನ್ನಡಕ** (Contact lens)ಗಳು ಸಹ ಉತ್ತಮ ಫಲಿತಾಂಶವನ್ನು ಕೊಡುತ್ತವೆ.

ಮಕ್ಕಳ ಆರೋಗ್ಯದ ಮಟ್ಟವನ್ನು ಹೆಚ್ಚಿಸಲು ಉತ್ತಮ ಆಹಾರ, ಒಳ್ಳೆಯ ಗಾಳಿ–ಬೆಳಕು ಮತ್ತು ಕ್ಯಾಲ್ಸಿಯಂ'ಎ' ಮತ್ತು 'ಡಿ' ಅನ್ನಾಂಗಗಳನ್ನು ಹೇರಳವಾಗಿ ಒದಗಿಸಬೇಕು. ವ್ಯಾಯಾಮ ಮತ್ತು ಉತ್ತಮ ರಸಾಯನ (Tonic)ಗಳು ಒಳ್ಳೆಯ ಫಲಕಾರಿಗಳು.

(ಆ) **ದೂರದೃಷ್ಟಿ** :—ಕಣ್ಣು ಚಲಿಸದೆ ಸ್ಥಿರವಾಗಿದ್ದಾಗ ಹತ್ತಿರದ ವಸ್ತುಗಳಿಂದ ಪ್ರತಿಫಲಿಸಿದ ಕಿರಣಗಳು ಅಕ್ಷಿಪಟದ ಹಿಂದೆ ಸಂಗಮವಾಗುವುದರಿಂದ ಹತ್ತಿರದ ವಸ್ತುಗಳ ಪ್ರತಿಬಿಂಬವು ಸ್ಪಷ್ಟವಾಗಿ ಕಾಣದೆ, ದೂರ ವಸ್ತುಗಳು ಮಾತ್ರ ಚೆನ್ನಾಗಿ ಕಾಣುತ್ತವೆ.

**ಕಾರಣಗಳು** ;— (i) ಅಕ್ಷ ಸಂಬಂಧ ದೂರದೃಷ್ಟಿ (Axial Hypermetropia) :—ಪ್ರಕೃತಿ ನಿಯಮಕ್ಕಿಂತ ಕಣ್ಣುಗುಡ್ಡೆಯು ಚಿಕ್ಕದಾಗಿದ್ದರೆ ಕಿರಣಗಳು ಅಕ್ಷಿಪಟದ ಹಿಂದೆ ಬೀಳುತ್ತವೆ.

(ii) **ಸೂಚಕ ದೂರದೃಷ್ಟಿ** (Index Hypermetropia) :—ಇಲ್ಲಿ ಕಣ್ಮಣಿಯ ಸೂಚಕವು (Index of lens) ಕಡಿಮೆ ಇರುತ್ತದೆ.

(iii) ವಕ್ರತೆಯ ದೂರದೃಷ್ಟಿ (Curvature Hypermetropia) :—ಇಲ್ಲಿ ಕನೀನಿಕೆಯ ವಕ್ರತೆಯು ಅತಿ ಕಡಿಮೆ.

**ಲಕ್ಷಣಗಳು** :—ಈ ದೋಷವು ಅತಿಯಾಗಿಲ್ಲದಿದ್ದ ಯಾವ ತೊಂದರೆಯೂ ಆಗದೆ ಹತ್ತಿರದ ವಸ್ತುಗಳ ವೀಕ್ಷಣೆಗೆ ಮತ್ತು ಓದುವಿಕೆಗೆ ಮಾತ್ರ ತುಸು ಕಷ್ಟವಾಗಬಹುದು. ಇದು ಪಾಷ್ಮೀಕಾವಯವದ (Ciliary body) ಸಂಕೋಚನೆಯಿಂದ (Contraction of ciliary muscle) ಸರಿ ಹೋಗುತ್ತದೆ. ಆದರೆ ಹೆಚ್ಚು ಹೊತ್ತು ಓದಿದರೆ ಆ ಮಾಂಸಖಂಡಗಳಿಗೆ ಆಯಾಸವಾಗಿ(Fatigue)ಕಣ್ಣು ನೋವುಟಾಂಗುತ್ತದೆ. ತಲೆಶೂಲೆ, ದೃಷ್ಟಿ ಮಾಂದ್ಯ (ಓದುವಾಗ ಮಾತ್ರ) ತಲೆಭಾರವಾಗುವಿಕೆ ಮುಂತಾದುವುಗಳನ್ನು ಸಹ ಕಾಣಬಹುದು.

**ಚಿಕಿತ್ಸಾ ಕ್ರಮ** :—ವೈದ್ಯರ ಆದೇಶದ ಮೇರೆಗೆ ಪೀನ ಮಸೂರದ (Convex lens) ಕನ್ನಡಕಗಳನು ಉಪಯೋಗಿಸಿ ಈ ದೋಷವನ್ನು ಸರಿಪಡಿಸಿಕೊಬಹುದು.

(ಇ) **ಬಿಂದು ರಾಹಿತ್ಯ ನ್ಯೂನತೆ** (Astigmatism) :—ಕನೀನಿಕೆಯ ಸ್ವಲ್ಪಭಾಗವು ಉಬ್ಬಾಗಿಯೂ, ಸ್ವಲ್ಪಭಾಗವು ತಗ್ಗಾಗಿಯೂ (ವಕ್ರವಾಗಿದ್ದರೆ) ಒಂದು ಭಾಗದ ಮೇಲೆ ಬಿದ್ದ ಕಿರಣಗಳು ಮಾತ್ರ ಅಕ್ಷಿಪಟದ ಮೇಲೆ ಬಿದ್ದು ಆ ವಸ್ತುಗಳ ಪ್ರತಿಬಿಂಬವು ಮಾತ್ರ ಕಂಡು ಮತ್ತೊಂದು ಭಾಗದ ಮೇಲೆ ಬೀಳುವ ವಸ್ತುಗಳ ಪ್ರತಿಬಿಂಬವು ಕಾಣವುದಿಲ್ಲ. ಅಂದರೆ ಕಪ್ಪು ಹಲಗೆಯ ಮೇಲೆ ಬರೆದ ಉದ್ದದ ಗೀಟುಗಳು ಕಂಡರೆ ಅಡ್ಡದ ಗೀಟುಗಳು ಕಾಣುವುದಿಲ್ಲ. ಉ. ಹ :- ಈ ದೋಷವಿರುವವರನ್ನು H ಎಂಬ ಅಕ್ಷರವನ್ನು ಓದಿ ಎಂದರೆ ಒಂದು (–) ಗೀಟಿರುವುದೆಂದೂ ಮತ್ತೆ ಕೆಲವರು (||) ಎರಡು ಉದ್ದವಾದ ಗೀಟುಗಳಿರುವುದೆಂದೂ ಹೇಳುತ್ತಾರೆ.

**ಕಾರಣಗಳು** :—ಕನೀನಿಕೆ ಅಥವ ಕಣ್ಮಣಿಯ ವಕ್ರತೆ (Curvature) ಯ ಬದಲಾವಣೆಯಿಂದ ಅಥವ ಎರಡರ ಬದಲಾವಣೆಯಿಂದಾಗಲಿ ಅಥವ ಕಣ್ಮಣಿಯು ಸ್ಥಾನಪಲ್ಲಟವಾದರೂ ಈ ದೋಷ ಉಂಟಾಗುತ್ತದೆ.

ವಿಧಗಳು :—ಇದನ್ನು ಎರಡು ಗುಂಪುಗಳಾಗಿ ವಿಂಗಡಿಸಬಹುದು.

(i) ಸಕ್ರಮ ಬಿಂದು ರಾಹಿತ್ಯ ದೋಷ (Regular Astigmatism)

(ii) ಅಕ್ರಮ ಬಿಂದು ರಾಹಿತ್ಯ ದೋಷ (Irregular Astigmatism)

**ಸಕ್ರಮ ಬಿಂದು ರಾಹಿತ್ಯ ದೋಷ** :— ಇಲ್ಲಿ ಯಾವ್ಯೋತ್ತರ ವೃತ್ತದ (meridians) ಹೆಚ್ಚು ಮತ್ತು ಕಡಿಮೆ ಪ್ರಮಾಣದ ಬೆಳಕಿನ ಪ್ರತಿಫಲನಗಳು ಒಂದಕ್ಕೊಂದು ಸಮಕೋನದಲ್ಲಿರುತ್ತವೆ. ಅವು ನಿಯಮಿತವಾದವುಗಳು. ಇದನ್ನು ಮತ್ತೆ ಮೂರು ಗುಂಪುಗಳಾಗಿ ವಿಂಗಡಿಸಬಹುದು.

(ಅ) ಸರಳ ಬಿಂದು ರಾಹಿತ್ಯ ದೋಷ (Simple Astigmatism)

(ಆ) ಸಂಯುಕ್ತ " (compound " )

(ಇ) ಮಿಶ್ರಣ " (Mixed " )

**ಸರಳ ಬಿಂದು ರಾಹಿತ್ಯ ದೋಷ** :— ಈ ವಿಧದಲ್ಲಿ ಕನಿನಿಕೆ ಅಥವ ಕಣ್ಮಣಿಯ ಒಂದುಭಾಗವು ಪ್ರಕೃತಿ ನಿಯಮಕ್ಕನುಗುಣವಾಗಿಯೂ ಮತ್ತೊಂದು ಭಾಗವು ಸಮೀಪ ಅಥವ ದೂರದೃಷ್ಟಿ ದೋಷವುಳ್ಳದ್ದಾಗಿಯೂ ಇರುವುದರಿಂದ ಅದಕ್ಕನುಗುಣವಾಗಿ ಸರಳ ಸಮೀಪ ಮತ್ತು ಸರಳ ದೂರ ಬಿಂದು ರಾಹಿತ್ಯ ದೃಷ್ಟಿ ದೋಷವೆನ್ನುತ್ತೇವೆ.

(ಆ) **ಸಂಯುಕ್ತ ಬಿಂದು ರಾಹಿತ್ಯ**:—ಇಲ್ಲಿ ಕನಿನಿಕೆ ಅಥವ ಕಣ್ಮಣಿಯ ಎರಡು ಬಿಂದುಗಳೂ ಸಮೀಪ ಅಥವ ದೂರ ದೃಷ್ಟಿಯ ದೋಷವುಳ್ಳವಾಗಿರುತ್ತವೆ. ಆದರೆ ಅದು ಬೇರೆ ಬೇರೆ ಸತ್ವ (degree) ದಲ್ಲಿರುತ್ತದೆ. ಆದುದರಿಂದ ಅದನ್ನು ಸಂಯುಕ್ತ ದೂರ ಬಿಂದುರಾಹಿತ್ಯ ಅಥವ ಸಂಯುಕ್ತ ಸಮೀಪ ಬಿಂದು ರಾಹಿತ್ಯ ದೋಷವೆನ್ನುತ್ತೇವೆ.

(ಇ) **ಮಿಶ್ರಣ ಬಿಂದು ರಾಹಿತ್ಯ** :ಒಂದು ಬಿಂದುವು ಸಮೀಪ ದೃಷ್ಟಿ ದೋಷವುಳ್ಳದ್ದಾಗಿಯೂ ಮತ್ತೊಂದು ಬಿಂದುವು ದೂರದೃಷ್ಟಿ ದೋಷದಿಂದಲೂ ಕೂಡಿರುತ್ತದೆ.

(ii) **ಅಕ್ರಮ ಬಿಂದು ರಾಹಿತ್ಯ ದೋಷ**:-ಕನಿನಿಕೆಯಲ್ಲಿ ಕಲಮೆ (opacity) ಇದ್ದರೆ ಅಥವ ಅದು ಬುಗುರಿಯಾಕಾರದಲ್ಲಿದ್ದರೆ (keratoconus) ಈ ಭಾಗದ ಮೇಲೆ ಬಿದ್ದ ಕಿರಣಗಳು ಅಕ್ರಮವಾಗಿ ಪ್ರತಿಫಲಿತವಾಗುವುದರಿಂದ ವಸ್ತುಗಳು ಮಬ್ಬಾಗಿ ಕಾಣುತ್ತವೆ.

**ಲಕ್ಷಣಗಳು** :—ತುಸು ದೋಷವಿದ್ದರೆ ಯಾವ ಲಕ್ಷಣಗಳೂ ಇರುವುದಿಲ್ಲ. ಅತಿಯಾದರೆ ಹತ್ತಿರದ ಮತ್ತು ದೂರದ ವಸ್ತುಗಳ ವೀಕ್ಷಣೆಗೆ ಕಣ್ಣು ಬಾಧೆಯಾಗುತ್ತದೆ.

**ಚಿಕಿತ್ಸಾಕ್ರಮ** :—ಸ್ತಂಭಾಕೃತಿಯ (cylendrical lens) ಗಾಜಿನ ಕನ್ನಡಕಗಳನ್ನು ಉಪಯೋಗಿಸಿದರೆ ಎಲ್ಲಾ ಕಿರಣಗಳೂ ಅಕ್ಷಿಪಟದ ಮೇಲೆ ಸಂಗಮವಾಗುವುದರಿಂದ ಪ್ರತಿಬಿಂಬವನ್ನು ಚೆನ್ನಾಗಿ ಕಾಣಬಹುದು. ಈ ಕ್ರಮದಿಂದ ಸಕ್ರಮ ಬಿಂದು ರಾಹಿತ್ಯ ದೋಷವನ್ನು ಸರಿಪಡಿಸಬಹುದು. ಅಕ್ರಮ ರೀತಿಯ ದೋಷಕ್ಕೆ ಈ ಕನ್ನಡಕವು ಪರಿಣಾಮಕಾರಿಯಲ್ಲ. ಸಂಪರ್ಕ ಗಾಜಿನ (Contact lens) ಕನ್ನಡಕವನ್ನು ಕನಿನಿಕೆಗೆ ಸಂಬಂಧಿಸಿಡುವುದರಿಂದ ಈ ದೋಷವನ್ನು ತುಸು ಉತ್ತಮ (ಗುಣ) ಪಡಿಸಬಹುದು.

ಈ ಮೂರು ಮುಖ್ಯವಾದ ದೋಷಗಳಿಲ್ಲದೆ ಕೆಲವು ವೇಳೆ ಚಾಳೀಸ ಮತ್ತು ಕಣ್ಮಣಿಯ ಸ್ಥಾನಪಲ್ಲಟವನ್ನು ಸಹ ಕಾಣಬಹುದು.

**ಚಾಳೀಸ** (Presbyopia) :— ಈ ದೋಷವು ಸಾಮಾನ್ಯವಾಗಿ ನಲವತ್ತು ವರ್ಷ ವಯಸ್ಸಿಗೆ ತಲೆದೋರುವುದರಿಂದ ಇದನ್ನು ಚಾಳೀಸ ಎಂದು ಕರೆಯುತ್ತಾರೆ. ಹಿಂದಿಯಲ್ಲಿ ಚಾಲೀಸ್ ಎಂದರೆ ನಲವತ್ತು. ಈ ದೋಷವಿರುವವರು ಓದುವಾಗ ಪುಸ್ತಕವನ್ನು ಬಹಳ ದೂರ ಹಿಡಿದು ಓದುತ್ತಾರೆ ಈ ವಯಸ್ಸಿನಲ್ಲಿ ಕಣ್ಮಣಿಯ ಸ್ಥಿತಿಸ್ಥಾಪಕತೆಯು ಕಡಿಮೆಯಾಗುವುದರಿಂದ ಕಣ್ಣಿಗೂ ಮತ್ತು ಪುಸ್ತಕಕ್ಕೂ ಇರುವ (ಓದುವ) ಅಂತರವು(Reading distance)ಹೆಚ್ಚಾಗುತ್ತದೆ. ಕಣ್ಣಿನ ದೋಷವಿಲ್ಲದವರು ಕಣ್ಣಿಗೂ ಮತ್ತು

ಪುಸ್ತಕಕ್ಕೂ 12 ಅಂಗುಲ ಅಂತರವಿರುವಂತೆ ಕೈಯಲ್ಲಿ ಪುಸ್ತಕವನ್ನು ಹಿಡಿದುಕೊಳ್ಳುವುದು ಕಣ್ಣನ್ನು ಕಾಪಾಡಿಕೊಳ್ಳಲು ಉತ್ತಮ ಮಾರ್ಗ. ಇದು ಪಾಷ್ಮೀಕಾವಯವ ಅಥವ ವಪೆಯ ದುರ್ಬಲತೆಯಿಂದುಂಟಾದುದಲ್ಲ.

**ಲಕ್ಷಣಗಳು** :—ಓದುವುದು, ಬರೆಯುವುದು, ಹೊಲಿಗೆ ಕೆಲಸ ಮುಂತಾದ ಹತ್ತಿರದ ಕೆಲಸಗಳನ್ನು ಮಾಡುವಾಗ ಕಣ್ಣಿಗೆ ತೊಂದರೆಯಾಗುತ್ತದೆ.

**ಚಿಕಿತ್ಸಾ ಕ್ರಮ** :–ಪ್ರಾರಂಭದಲ್ಲಿ ಕಣ್ಣಿಗೂ ಕೆಲಸ ಮಾಡುವ ದೂರಕ್ಕೂ ಇರುವ ಅಂತರವನ್ನು ಹಂತ ಹಂತವಾಗಿ ಹೆಚ್ಚಿಸಿಕೊಂಡು ಹೋಗಿ ಸುಸೂತ್ರವಾಗಿ ಕೆಲಸಗಳನ್ನು ಸಾಗಿಸಬಹುದು. ಆದರೆ ವಯಸ್ಸಾದಂತೆಲ್ಲ ತೊಂದರೆಗಳು ಹೆಚ್ಚಾಗುವುದರಿಂದ ವೈದ್ಯರನ್ನು ಭೇಟಿ ಮಾಡಿ ನಿಮ್ಮ ಮಸೂರದ ಕನ್ನಡಕಗಳನ್ನು ಪ್ರಾರಂಭದಲ್ಲಿಯೇ ಪಡೆಯುವುದು ಉತ್ತಮ.

**ಕಣ್ಮಣಿಯು ಸ್ಥಾನಪಲ್ಲಟ** (Aphakia) :—ಕಣ್ಮಣಿಯು ಪಾಪೆಯ ನಿಯಮಿತ ಸ್ಥಾನದಲ್ಲಿಲ್ಲದಿರುವುದಕ್ಕೆ ಕಣ್ಮಣಿಯ ಅನುಪಸ್ಥಿತ(Absence of lens) ಎನ್ನುತ್ತೇವೆ.

**ಕಾರಣಗಳು** :– (i) **ನ್ಯೂನತೆ** :– ಭ್ರೂಣಾವಸ್ಥೆಯಲ್ಲಿ ಮಗುವಿನ ಕಣ್ಣು ಬೆಳೆಯುವಾಗ ಕಣ್ಮಣಿಯು ತಲೆದೋರದಿರಬಹುದು.

(ii) ಪೊರೆ (Cataract) :—ಕಣ್ಣಿನ ಪೊರೆಯು ಪ್ರಾಪ್ತವಾದಾಗ ಶಸ್ತ್ರಚಿಕಿತ್ಸೆಯಿಂದ ಕಣ್ಮಣಿಯನ್ನು ತೆಗೆದು ಹಾಕಬಹುದು.

(iii) ಅಪಾಯ ;– ಕಣ್ಣಿಗೆ ಏಟು ಬಿದ್ದಾಗ ಕಣ್ಮಣಿಯ ಅಸ್ಥಿಬಂಧಕ (lenticular or zonular ligament) ಮುರಿಯುವುದರಿಂದ, ಕಣ್ಣಿನ ಪೊರೆ ಬಂದಾಗ ನಾಟಿವೈದ್ಯರ ಅಸಂಪೂರ್ಣ ತಿಳುವಳಿಕೆಯಿಂದ ಕಣ್ಮಣಿಯನ್ನು ಬರಿಯ ಸೂಜಿಯಿಂದ ನೂಕಿ ಹಿಂದೆ ತಳ್ಳುತ್ತಾರೆ.

ಮಕ್ಕಳಲ್ಲಿ ಕಣ್ಣಿನ ಪೊರೆ ಬಂದರೆ ಕಣ್ಮಣಿಯು ಕರಗಿ ಹೋಗುತ್ತದೆ. ಚೂಪಾದ ಆಯುಧದಿಂದ ಕಣ್ಣಿಗೆ ಏಟು ಬಿದ್ದರೆ ಕಣ್ಮಣಿಯು ಕಾಚಧಾತುವಿಗೆ ಸ್ಥಾನಪಲ್ಲಟವಾಗುತ್ತದೆ. ಇದರ ಒತ್ತುವಿಕೆಯಿಂದಾಗಿ ವಪೆಯ ಪೊರೆಯ ಜನ್ಯವ್ಯಾಧಿಯ(Iridocyclitis) ಬರಬಹುದು.

**ಲಕ್ಷಣಗಳು** :–ದೂರ ದೃಷ್ಟಿದೋಷದ ಎಲ್ಲ ಲಕ್ಷಣಗಳನ್ನು ಇಲ್ಲಿ ಕಾಣಬಹುದು. ಕರಿಯ ಪಾಪೆ (je black pupil), ವಪೆಯ ಪೊರೆಯ ಅದುರುವಿ- ಅಥವ ಅಸ್ಥಿರತೆ (Tremulesness or Irido-donisis)ಮತ್ತು ಕನಿನಿಕೆಯ ಮೇಲ್ಭಾಗದಲ್ಲಿ ಕಲು ಯನ್ನು ಸಹ ಕಾಣಬಹುದು.

**ಚಿಕಿತ್ಸಾ ಕ್ರಮ** :— + 10 D ಬಲದ ನಿ ಮಸೂರದ ಕನ್ನಡಕಗಳನ್ನು ಉಪಯೋಗಿಸಬೇಕು ಶಸ್ತ್ರಚಿಕಿತ್ಸೆಯ ನಂತರ ಕನಿನಿಕೆಯ ಕಲೆಯು ಬಿಂ ರಾಹಿತ್ಯ ದೋಷವನ್ನುಂಟು ಮಾಡುವುದರಿಂದ +10 ಜೊತೆಗೆ +2 ಅಥವ +3D ಶಕ್ತಿಯ ಸ್ತಂಭಾಕೃತಿ ಗಾಜು ಅಡ್ಡವಾಗಿ ನಿಲ್ಲುವಂತೆ ಸೇರಿಸುವುದು ಒ ಯದು.

II **ಛಾಯಾ ಕನ್ನಡಕಗಳು** :—ಬೆಸಗೆ ಕೆಲ ಮಾಡುವಾಗ ಬೆಳಕಿನ ಕಿರಣಗಳು ಹೆಚ್ಚು ಉತ್ಪ ಯಾಗುವುದರಿಂದಲೂ, ಕಣ್ಣಿಗೆ ದೂಳು ಬೀಳುವಂತ ಕೆಲಸ ಮಾಡುವವರು, ಕಣ್ಣು ಬಿಡಲು ತೊಂ ಯಾಗಬಹುದಾದ ಕಣ್ಣು ರೋಗದಿಂದ ನರಳುವ ರೋ ಗಳು ಈ ಕನ್ನಡಕ (Goggles)ವನ್ನು ಉಪಯೋ ತಮ್ಮ ಕಣ್ಣನ್ನು ಕಾಪಾಡಿಕೊಳ್ಳಬೇಕಾಗುತ್ತ ಇಲ್ಲದಿದ್ದಲ್ಲಿ ಸೃಷ್ಟಿ ವೈಚಿತ್ರ್ಯಗಳ ಸೊಬಗನ್ನು ವೀಕ್ಷಿಸ ನಯನವು ಲಯವಾಗುತ್ತದೆ.

III **ತಂಪಿನ ಕನ್ನಡಕ** :—ಸಾಮಾನ್ಯವಾಗಿ ಬೇ ಕಾಲದಲ್ಲಿ ತಂಪಿನ ಕನ್ನಡಕಗಳನ್ನ ಉಪಯೋ ಸುತ್ತಾರೆ.

ಶಿಕ್ಷಣದ ಮಟ್ಟವು ಎಲ್ಲ ರಂಗಗಳಲ್ಲಿಯೂ ಅಭಿವೃ ಯಾಗಿ ಸಾಮಾನ್ಯವಾಗಿ ಎಲ್ಲ ಮಕ್ಕಳು ಶಾಲೆಗೆ ಹೋ ವುದರಿಂದಲೂ, ಶಾಲೆಯಲ್ಲಿ ಕಪ್ಪು ಹಲಗೆಯ ಮೇ ಬರೆದಿರುವ ಅಕ್ಷರಗಳನ್ನು ಓದಲು ತೊಡಕಾಗುವು

...ಡುಕೊಳ್ಳುವುದರಿಂದಲೂ. ಕ್ರಮವಾಗಿ ಮಕ್ಕಳು ...ನ್ನು ಶಾಲೆಗಳಲ್ಲಿ ಪರೀಕ್ಷಿಸಿ ಅವರ ದೃಷ್ಟಿ ದೋಷ ...ನ್ನು ಗೊತ್ತುಪಡಿಸುವುದರಿಂದಲೂ ಕನ್ನಡಕವನ್ನು ...ಸುವವರ ಸಂಖ್ಯೆಯು ಏರುತ್ತಿದೆ.

...ದೃಷ್ಟಿ-ದೋಷಗಳನು ಗಮನಿಸದಿರುವುದರಿಂದ ...ಜ್ಞಾನೇಂದ್ರಿಯಗಳಲ್ಲಿ ಅತಿಮುಖ್ಯವಾದ ಕಣ್ಣು ಗೊಂದ ...ಕ್ಕೀಡಾಗಿ ಹಾಳಾಗುತ್ತದೆ. ಆದಕಾರಣ ದೋಷಗಳು ಕಂಡ ತತ್‌ಕ್ಷಣವೇ ತಜ್ಞವೈದ್ಯರಿಂದ ಪರೀಕ್ಷಿಸಿ ಸೂಕ್ತವಾದ ಕನ್ನಡಕವನ್ನು ಪಡೆದು ಕಣ್ಣನ್ನು ರಕ್ಷಿಸಿಕೊಳ್ಳುವುದು ಸೂಕ್ತವಾದ ಮಾರ್ಗ.

ಮನೆಯ ಮುಂದೆ ಹಾಗೂ ಬೀದಿಗಳಲ್ಲಿ ಮಾರಲು ಬರುವವರ ಹತ್ತಿರ ಕಡಿಮೆ ಹಣಕ್ಕೆ "ಕಾಸಿಗೆ ತಕ್ಕ ಕಜ್ಜಾಯ" ಎಂಬಂತೆ ಅಪಾಯಕರವಾದ ಕನ್ನಡಕಗಳನ್ನು ಕೊಂಡು ಗೊಂದಲಕ್ಕೀಡುಮಾಡಿಕೊಂಡು ಕಣ್ಣುಗಳನ್ನು ಹಾಳುಮಾಡಿಕೊಳ್ಳಬಾರದು.



## ನಮ್ಮ ಹಿಂದಿನ ಕತೆ ನಿಮಗೆ ತಿಳಿದಿದೆಯೆ ?

| | |
|---|---|
| ವಿಜಯನಗರ ಸಾಮ್ರಾಜ್ಯದ ಒಟ್ಟು ಆದಾಯ | ೪೦ ಕೋಟಿ ರೂಪಾಯಿ. |
| ಇದರಲ್ಲಿ ನೆಲದ ಆದಾಯವೇ ಸುಮಾರು | ೫ ಕೋಟಿ ರೂಪಾಯಿಗಳು. |
| ರಾಯಚೂರು ಯುದ್ಧದಲ್ಲಿ ವಿಜಯನಗರ ಸೈನ್ಯಬಲ | ೬ ಲಕ್ಷ. |
| ಒಟ್ಟು ಸಾಮ್ರಾಜ್ಯದ ಸೈನ್ಯಬಲ | ೧೦ ಲಕ್ಷ. |
| ಸೈನ್ಯಸಂಖ್ಯೆಯಿಂದ ಜನಸಂಖ್ಯೆಯನ್ನು ಸುಮಾರು | ೩ ಕೋಟಿ ಎಂದು ಗಣಿಸಿದ್ದಾರೆ. |

ವಿಜಯನಗರದ ಪೇಟೆಯಲ್ಲಿ ಸಾಮಾನುಗಳು ಬಹು ಅಗ್ಗ ಬೆಲೆಗೆ ಸಿಕ್ಕುತ್ತಿದ್ದವಂತೆ

ಒಂದು ಆಣೆಗೆ ೨ ಕೋಳಿ, ಇಲ್ಲವೆ ೮ ಪಾರಿವಾಳಗಳು ದೊರೆಯುತ್ತಿದ್ದವು. ಒಂದು ಕುರಿಯ ಬೆಲೆ ...ಂದ ೮ ಆಣೆ. ಒಂದು ತಿಂಗಳಿಗೆ ೨೦-೨೫ ರೂಪಾಯಿ ಗಳಿಸುವ ಒಬ್ಬ ಕುದುರೆ ಸವಾರನು ತನ್ನ ಕುದುರೆ, ಒಬ್ಬ ...ಕೆ ಇಷ್ಟು ಜನರನ್ನು ಸುಖವಾಗಿ ಸಲಹಿಕೊಂಡು ಬಾಳುತ್ತಿದ್ದನು.

ರಾಷ್ಟ್ರಕೂಟರ ಕಾಲದಲ್ಲಿ ಈಗಿನ ಪರಿಮಾಣದಂತೆ ಒಂದು ರೂಪಾಯಿಗೆ ೩೨ ಸೇರು ಅಕ್ಕಿ, ೨೫ ಸೇರು ... ೭೫ ಸೇರು ಉಪ್ಪು ಸಿಗುತ್ತಿತ್ತು. ಆಕಳ ಮತ್ತು ಎಮ್ಮೆಗಳ ಬೆಲೆ ಸರಾಸರಿ ೨ ರಿಂದ ೪ ರೂಪಾಯಿ. ೯ ರೂಪಾಯಿ ... ಒಬ್ಬ ಬಡವನು ಒಂದು ವರ್ಷದವರೆಗೆ ಉದರನಿರ್ವಾಹ ಮಾಡಬಹುದಾಗಿತ್ತು. ಒಬ್ಬ ಕೂಲಿಕಾರ ವರ್ಷಕ್ಕೆ ...ರೂ. ಗಳಿಸುತ್ತಿದ್ದನು.

# ಅಪ್ರಕಟಿತ ಗ್ರಂಥ ಪರಿಚಯ—ತಗರ ಪವಾಡ

ಸಿ. ಕೆ. ಪರಶುರಾಮಯ್ಯ

ಅಪ್ರಕಟಿತ 'ತಗರ ಪವಾಡ' ವೆಂಬ ಸಾಂಗತ್ಯ ಗ್ರಂಥವನ್ನು ಸಂಗ್ರಹಿಸಿ ಪ್ರಕೃತ ಲೇಖಕರು ಅದನ್ನು ಪೂರ್ಣ ಓದಿ ಸಾರಾಂಶವನ್ನು ಕನ್ನಡಿಗರೆದುರು ಪ್ರಕಟಿಸಿದ್ದಾರೆ. ಕುರುಬ (ಹಾಲುಮತ) ಜನಾಂಗದ ಬಗೆಗೆ ವೀರಶೈವ ಶಿವಶರಣರು ಹಲವಾರು ಮುಖಗಳಲ್ಲಿ ಶ್ರಮಿಸಿದ್ದಾರೆ. 'ಹಾಲ ಮತದ ಪುರಾಣ'ವು ಹೇಗೆ ಕುರುಬ ಜನಾಂಗದ ಸಂಸ್ಕೃತಿಯನ್ನು ಸೂಚಿಸುತ್ತದೊ ಅದರಂತೆ ಪ್ರಕೃತ ಗ್ರಂಥವು ಆ ಪಂಗಡದ ಜನಕ್ಕೆ ಸಂಬಂಧಿಸಿದುದಾಗಿದೆ. ರೇವಣ ಸಿದ್ಧೇಶ್ವರರು ಸಿದ್ಧರಾಮೇಶ್ವರರು ಈ ಜನಾಂಗದ ಸಂಸ್ಕಾರಕ್ಕೆ ವಿಶೇಷ ಶ್ರಮಿಸಿದುದು ಪ್ರಾಚೀನ ಪುರಾಣಗಳಿಂದ ಅರಿಯುವುದು. ಪ್ರಕೃತ ಅಪ್ರಕಟಿತ ಕೃತಿಯ ಬಗೆಗೆ ಬರೆದು ಲೇಖಕರು ಉಪಕಾರ ಮಾಡಿದ್ದಾರೆ—

—ಸಂ.

ತಗರ ಪವಾಡ ಎನ್ನುವುದು ಎಂಟು ಸಂಧಿಗಳಿಂದ ಕೂಡಿದ ಒಂದು ಸಾಂಗತ್ಯಗ್ರಂಥ. ಇದರಲ್ಲಿ ಒಟ್ಟು 638 ಪದ್ಯಗಳಿವೆ. ಪ್ರತಿಕಾರನು ಗ್ರಂಥದಲ್ಲಿ ಎಲ್ಲಿಯೂ ಕವಿಯ ಹೆಸರನ್ನಾಗಲಿ ತನ್ನ ಹೆಸರನ್ನಾಗಲಿ, ಗ್ರಂಥದ ಕಾಲವನ್ನಾಗಲೀ ತಿಳಿಸಿಲ್ಲ. ಕವಿಚರಿತ್ರೆಯಲ್ಲಿ ಕೂಡ ಈ ಕೃತಿಯ ಉಲ್ಲೇಖವಿಲ್ಲ. ಸಾಮಾನ್ಯವಾಗಿ ಕವಿಗಳು ತಮ್ಮ ಕಾವ್ಯಾರಂಭದಲ್ಲಿ ಪೂರ್ವಕವಿ ಸ್ಮರಣೆ ಮಾಡುವ ರೂಢಿ. ಈ ಗ್ರಂಥದಲ್ಲಿ ಪೂರ್ವ ಕವಿ ಸ್ತುತಿ ಇಲ್ಲ. ಪ್ರಾರಂಭದಲ್ಲಿ ಇಷ್ಟದೇವತೆಯ ಪ್ರಾರ್ಥನೆ ಮಾಡಿ ಕವಿ ಕಥೆಯನ್ನು ಹೇಳಿದ್ದಾನೆ. ಕೃತಿಯ ಕಡೆಯಲ್ಲಿ ಹೇಳಿರುವ "ಅಂತು ಸಂಧಿ ಎಂಟಕ್ಕಂ ಪದನುಂ 638ಕ್ಕಂ ತಗರ ಪವಾಡ ಸಂಪೂರ್ಣಂ ಮಂಗಳ ಮಹಾ" ಎಂಬ ವಾಕ್ಯದಿಂದ ಮತ್ತು ಈ ಗ್ರಂಥದ ಅಂತ್ಯದಲ್ಲಿ ಬರುವ ಪವಾಡದ ನಿರೂಪಣೆಯಿಂದ ಗ್ರಂಥದ ಹೆಸರು ತಗರ ಪವಾಡವೆಂದು ಸ್ಪಷ್ಟವಾಗುತ್ತದೆ.

ಈಗ ಈ ಕೃತಿಯ ಎರಡು ಪ್ರತಿಗಳು ದೊರೆತಿವೆ. ಒಂದು ಚಿಕ್ಕನಾಯಕನ ಹಳ್ಳಿಯ ಶ್ರೀ ರೇವಣ್ಣ ಸಿದ್ಧೇಶ್ವರ ಮಠದ್ದು; ಇನ್ನೊಂದು ಗುಬ್ಬಿ ತಾಲೂಕು ಹಾಗಲ್ವಾಡಿಯ ಶ್ರೀರೇವಣ್ಣ ಸಿದ್ಧೇಶ್ವರ ಮಠದ್ದು. ಚಿಕ್ಕನಾಯಕನ ಹಳ್ಳಿಯ ಪ್ರತಿಯ ಮೂಲ ಓಲೆಗರಿ ಪ್ರತಿಯು ಒರಟು ಕಾಗದದ್ದು. ಎರಡು ಪ್ರತಿಗಳ ಪಾಠವೂ ಒಂದೆರಡು ಕಡೆ ಬಿಟ್ಟರೆ ಒಂದೇ ಆಗಿವೆ. ಈಗ ಇರುವ ಪ್ರತಿಗಳ ಜೊತೆಗೆ ಇನ್ನೂ ಒಂದೆರಡು ಪ್ರತಿಗಳು ಸಿಕ್ಕರೆ ಪಾಠಾಂತರವನ್ನು ಗುರುತಿಸಿ ಗ್ರಂಥವನ್ನು ಸಂಸ್ಕರಿಸಬಹುದು. ಅಲ್ಲದೆ ಇದರಿಂದ ಗ್ರಂಥದ ಕರ್ತೃ ಮತ್ತು ಕಾಲ[illegible] ಬಗ್ಗೆಯೂ ಹೆಚ್ಚಿನ ಬೆಳಕು ಬೀಳಲು ಸಾಧ್ಯವಾಗುತ್ತ[illegible]

ಈ ಗ್ರಂಥದಲ್ಲಿ ಬರುವ ಕಥೆಯನ್ನು ಸಂಗ್ರಹವ[illegible] ಹೇಳುವುದು ಈ ಲೇಖನದ ಉದ್ದೇಶ.

**ಮೊದಲನೆಯ ಸಂಧಿ :—**

ಒಂದು ದಿನ ಪರಮೇಶ್ವರನು ಕೈಲಾಸದಲ್ಲಿ ಸಕಲ ಗ[illegible] ಗಳೊಂದಿಗೆ ಒಡ್ಡೋಲಗದಲ್ಲಿರುತ್ತಾನೆ. ಅಲ್ಲಿಗೆ ನಾರ[illegible] ಪ್ರವೇಶವಾಗುತ್ತದೆ. ಪರಮೇಶ್ವರನು ನಸು ನಗುತ್ತ[illegible] ನಾರದನನ್ನು ಸ್ವಾಗತಿಸಿ ಅವನ ಯೋಗಕ್ಷೇಮವ[illegible] ವಿಚಾರಿಸಿ ಭೂಲೋಕದ ಸುದ್ದಿಯನ್ನು ವಿಚಾರಿಸುವ[illegible] ಅದಕ್ಕೆ ನಾರದನು "ಏನು ಹೇಳಲಿ ಪರಮೇಶ್ವ[illegible] ಭೂಲೋಕದಲ್ಲಿ ಕೊಲ್ಲಾಪುರವೆಂಬ ಪಟ್ಟಣದಲ್ಲಿ ಮಾ[illegible] ಎಂಬ ವೇಶ್ಯೆ ಇದ್ದಾಳೆ. ಆಕೆಗೆ ದಾನವ ಮಾನವರಾ[illegible] ಸಾಟಿಯಿಲ್ಲ. ಆಕೆಯ ರೂಪಲಾವಣ್ಯ ವಿಭ್ರಮಗಳ[illegible] ವನ್ನು ಕಂಡು ಆಕೆಯನ್ನು ಕೂಡಬೇಕೆಂದು ಅನೇಕ ಸಿದ್ಧ[illegible] ಹೋಗುವರು. ಹಾಗೆ ಅವಳಲ್ಲಿ ಹೋಗುವ ಸಿದ್ಧರುಗ[illegible] ವಿಷವನ್ನು ಉಣ್ಣಲಿಕ್ಕುವಳು. ಆ ವಿಷವನ್ನು ಉ[illegible] ಆಕೆಯನ್ನು ಜಯಿಸಿದ ಕಡುಗಲಿ ಸಿದ್ಧನು ಇದುವ[illegible] ಯಾವನೂ ಇಲ್ಲ. ಮಾಯೆಗೆ ಸೋತು ಶರಣಾ[illegible] ನವಕೋಟಿ ಸಿದ್ಧರುಗಳು ಆಕೆಯ ಮನೆಯ **ಜೀತದ**[illegible]

ಗಳಾಗಿ ಮೂಗಿಗೆ ಕವಡೆ ಕಟ್ಟಿಕೊಂಡು ದುಡಿಯುತ್ತಿದ್ದಾರೆ. ಈ ಪರಿಯನ್ನು ವಿಚಾರಿಸದೆ ಕಾಲಾಂತಕನಾದ ನೀನು ಸುಮ್ಮನಿರುವುದೇ ?" ಎಂದು ಬಿನ್ನವಿಸುತ್ತಾನೆ.

ಆಗ ಪರಮೇಶ್ವರನು ಒಬ್ಬ ಸಿದ್ಧನ ವೇಷವನ್ನು ತಾಳಿ ಕೊಲ್ಲಾಪುರಿಯಲ್ಲಿದ್ದ ಮಾಯಿಯಲ್ಲಿಗೆ ಬರುವನು. ಮಾಯಿಯ ಮನೆಗೆ ಬಂದ ಸಿದ್ಧವೇಷದ ಶಿವನಿಗೆ ಮಾಯಿಯು ಎಂದಿನಂತೆ ವಿಷವನ್ನು ಕೊಡುವಳು. ಅವನ್ನು ಸಂತೋಷದಿಂದ ಕುಡಿದ ಸಿದ್ಧನನ್ನು ಕಂಡ ಮಾಯಿಯು ತನ್ನಲ್ಲಿದ್ದ ವಿಷದ ಕೊಡಗಳನ್ನೆಲ್ಲ ತಂದು ಅವನ ಮುಂದಿಡುವಳು. ಅದೆಲ್ಲವನ್ನೂ ಸಿದ್ಧನು ಕುಡಿದು ಬಿಡುವನು. ಸಿದ್ಧನ ಶಕ್ತಿ ಅವನು ಮಾಯಾತೀತನೆಂಬುದನ್ನು ಅವಳಿಗೆ ಅರಿವು ಮಾಡಿಕೊಡುತ್ತದೆ. ಅವಳು ಸಿದ್ಧನ ಪಾದಕ್ಕೆ ಬೀಳುವಳು. ಪರಮೇಶ್ವರನು ಹಾಗೆ ಮಣಿದ ಮಾಯಿಯ ಮೂಗು ಮುಂದಲೆಗಳನ್ನು ಕತ್ತರಿಸಿ, "ರಂಡೆ ನೀ ಹೋಗೆಂದು" ಝಂಕಿಸುವನು.

ಆಮೇಲೆ ಮಾಯಿಯ ಮೋಹಕ್ಕೆ ಮನಸೋತು ಅವಳನ್ನು ಗೆಲ್ಲಲಾರದೆ ಶರಣಾಗಿ ಸೆರೆಯಲ್ಲಿದ್ದ ಸಿದ್ಧರುಗಳ ಕಡೆ ಶಿವನ ದೃಷ್ಟಿ ಹೊರಳುತ್ತದೆ. ಅವರ ಅವಿವೇಕಕ್ಕೆ ಕೋಪಗೊಂಡ ಶಿವನು ಅವರೆಲ್ಲರೂ ಕುರಿಗಳಾಗುವಂತೆ ಶಾಪಕೊಡುವನು. ಆಗ ನವಕೋಟಿ ಸಿದ್ಧರೂ ನಾನಾ ವರ್ಣದ ಕುರಿಗಳಾಗಿ ಭೋರ್ಗರೆಯುತ್ತ ಶಿವನ ಸುತ್ತು ಮುತ್ತುತ್ತವೆ. ಶಿವನು ಅವುಗಳನ್ನು ಕಾಯುವ ಭಾರವನ್ನು ದಿಗ್ದೇವತೆಗಳಿಗೆ ವಹಿಸುವನು. ಕೆಲವು ಕಾಲ ಕುರಿಗಳನ್ನು ಕಾಯ್ದ ದೇವತೆಗಳು ಅವನ್ನು ನಿರ್ವಹಿಸಲಾರದೆ ಮತ್ತೆ ಪರಮೇಶ್ವರನಿಗೇ ವಹಿಸುವರು. ಪರಮೇಶ್ವರನು ಶರಣ ವೇಷದಲ್ಲಿ ಕುರಿಗಳನ್ನು ಕಾಯುತ್ತಾ ತೊಗರಿಸಿ ಎಂಬ ಊರಿಗೆ ಬರುತ್ತಾನೆ. ಆ ಊರಿನಲ್ಲಿ ಆದಿಗೊಂಡನೆಂಬ ಒಕ್ಕಲಿಗನು ಒಕ್ಕಲುತನ ಮಾಡಿಕೊಂಡಿದ್ದನು. ಅವನಿಗೆ ಏಳು ಮಂದಿ ಮಕ್ಕಳು; ಆದಿಗೊಂಡನಿಗೆ ಕೊಪಗಿ ಹೊಲವಿರುತ್ತದೆ. ಪರಮೇಶ್ವರನು ಕುರಿಗಳೆಲ್ಲವನ್ನೂ ಆ ಹೊಲದ ಮೂಲೆಯಲ್ಲಿದ್ದ ಒಂದು ದೊಡ್ಡ ಹುತ್ತದಲ್ಲಿ ಅಡಗಿಸಿ ಆ ಹುತ್ತದ ಮೇಲೆ ಒಂದು ಮುತ್ತುಗವನ್ನು ಬೆಳೆಸಿದನು. ಅಲ್ಲದೆ ಪದ್ಮಣ್ಣನ ಹೊರತು ಬೇರೆ ಯಾರಾದರೂ ಆ ಹುತ್ತದ ಬಳಿ ಬಂದರೆ ಭೂತಗಳು ಹೆದರಿಸಲೆಂದು ಕಟ್ಟುಮಾಡಿ ಅಲ್ಲಿ ವೀರೇಶನನ್ನು ಯಾರಿಗೂ ಗೊತ್ತಾಗದಂತೆ ಕಾವಲಿರಿಸಿ ಕೈಲಾಸಕ್ಕೆ ಹೊರಟು ಹೋಗುವನು.

**ಎರಡನೆಯ ಸಂಧಿ :—**

ತೊಗರಿಸಿಯ ಆದಿಗೊಂಡನ ಏಳು ಜನ ಮಕ್ಕಳಲ್ಲಿ ಪದ್ಮಣ್ಣನೇ ಕಿರಿಯವನು. ಆತನು ಮನೆಯ ಯಾವ ಕೆಲಸದಲ್ಲೂ ನೆರವಾಗದೆ ಸುಮ್ಮನೆ ತಿರುಗಾಡಿಕೊಂಡಿದ್ದನು. ನೆರೆಹೊರೆಯ ಜನರೆಲ್ಲ ಅವನನ್ನು ಉಂಡಾಡಿ, ಪುಂಡುಗಾರ ಎಂದೆಲ್ಲ ಕರೆಯುತ್ತಿದ್ದರು. ಪದ್ಮಣ್ಣನ ತಾಯಿ ಯಲ್ಲಮ್ಮನು ಮಗನಿಗೆ ಹೇಳಿದ ಬುದ್ಧಿ ಸಫಲವಾಗಲಿಲ್ಲ. ಆದರೆ ಒಂದು ದಿನ ತಾಯಿಯ ಮಾತುಗಳು ಪದ್ಮಣ್ಣನಿಗೆ ಹಿಡಿಸಿದವು. ಅಂದು ಅವನು ಊಟವನ್ನು ಮುಗಿಸಿಕೊಂಡು ಹೊಲದಲ್ಲಿನ ಗಿಡಗಳನ್ನು ಕಡಿಯಲು ಹೊರಡುತ್ತಾನೆ. ಆಗ ತಂದೆ ಆದಿಗೊಂಡನು ಮಗನನ್ನು ಕುರಿತು "ಹುತ್ತವನ್ನು ಹೊಡೆಯಬೇಡ, ಮುತ್ತುಗವನ್ನು ತರಿಬೇಡ, ಮತ್ತಿಪ್ಪ ಮರಗಳನ್ನು ನೀ ತರಿ" ಎಂದು ಸೂಚನೆ ಕೊಡುತ್ತಾನೆ. ಹೊಲಕ್ಕೆ ಹೋದ ಪದ್ಮಣ್ಣನು ತಂದೆಯ ಮಾತನ್ನು ಮೀರಿ ಹೊಲದ ಮೂಲೆಯಲ್ಲಿದ್ದ ಹುತ್ತವನ್ನು ಹೊಡೆದು ಅದರ ಮೇಲಿದ್ದ ಮುತ್ತುಗವನ್ನು ಕಡಿಯವನು. ಆಗ ಹುತ್ತದಲ್ಲಿ ಅಡಗಿದ್ದ ಕುರಿಹಿಂಡು ಭೋರ್ಗರೆಯುತ್ತ ಈಚೆಗೆ ಬಂದು ಪದ್ಮಣ್ಣನನ್ನು ಮುತ್ತುತ್ತವೆ. ಹಿಂಡನ್ನು ನೋಡಿ ಪದ್ಮಣ್ಣನಿಗೆ ಭಯವಾಗುತ್ತದೆ. ಪರಮೇಶ್ವರನು ಪದ್ಮಣ್ಣನ ಬಳಿಗೆ ಬಂದು ಪದ್ಮಣ್ಣನಿಗೆ ಸಮಾಧಾನ ಹೇಳಿ ಇವಕ್ಕೆ ಇನ್ನುಮುಂದೆ ನೀನು ಒಡೆಯನಾಗಬೇಕೆಂದು ಹೇಳುವನು. ಅದಕ್ಕೆ ಪದ್ಮಣ್ಣನು ಇಷ್ಟೊಂದು ಕುರಿಗಳನ್ನು ನಿರ್ವಹಿಸುವುದು ತನ್ನ ಕೈಯಿಂದ ಅಸಾಧ್ಯವೆಂದೂ ತನ್ನ ಜೊತೆಗೆ ಇನ್ನೊಬ್ಬನನ್ನು ಕೊಡಬೇಕೆಂದೂ ಬೇಡುವನು. ಪದ್ಮಣ್ಣನ ಬೇಡಿಕೆಯನ್ನು ಮನ್ನಿಸಿದ ಪರಮೇಶ್ವರನು ವೀರಬೀರಯ್ಯನನ್ನು ಸೃಷ್ಟಿಮಾಡಿ ಪದ್ಮಣ್ಣನನ್ನೂ ಅವನನ್ನೂ ಜೊತೆಮಾಡಿ ಕುರಿಗಳ ಭಾರವನ್ನು ಅವರಿಗೆ ವಹಿಸಿ ಕೈಲಾಸಕ್ಕೆ ತೆರಳುತ್ತಾನೆ.

ಇತ್ತ ಕುರಿಗಳನ್ನು ಮುಂದೆ ಬಿಟ್ಟುಕೊಂಡು ಪದ್ಮಣ್ಣನೂ, ಬೀರಯ್ಯನೂ ಹೊರಡುತ್ತಾರೆ. ಹೀಗೆ

ಹೋಗುತ್ತಿರಲು ಒಂದು ಅಡವಿಯ ಮಧ್ಯದಲ್ಲಿ ಬಕನೆಂಬ ರಕ್ಕಸನು ಎದುರುಬಂದು ಕುರಿಗಳನ್ನು ತಿನ್ನುವುದಕ್ಕೆ ಧಾವಿಸುತ್ತಾನೆ. ಆಗ ಕಡುಗಲಿ ವೀರಬೀರಯ್ಯನು ತನ್ನ ತೋಳಬಲದಿಂದ ರಕ್ಕಸನನ್ನು ಸಂಹರಿಸುತ್ತಾನೆ. ರಕ್ಕಸನನ್ನು ಸಂಹರಿಸಿದ ತಕ್ಷಣ ಆತನ ಮಗಳು ತನಗೆ ದಿಕ್ಕಿಲ್ಲದಂತಾಯಿತೆಂದು ರೋದಿಸುತ್ತಾ ಬಂದು ಬೀರಯ್ಯನ ಪಾದಕ್ಕೆರಗುತ್ತಾಳೆ. ಆಗ ಪದ್ಮಣ್ಣನಿಗೆ ಆಕೆಯನ್ನು ವಿವಾಹ ಮಾಡುತ್ತಾನೆ ಬೀರಪ್ಪ. ಇಲ್ಲಿಗೆ ಬೀರಯ್ಯನ ವಿಚಾರ ಮುಗಿಯುತ್ತದೆ. (ಕಥೆಯಲ್ಲಿ ಇನ್ನು ಮುಂದೆ ಆತನ ಪ್ರಸ್ತಾಪ ಬರುವುದಿಲ್ಲ.)

ಪದ್ಮಣನು ರಾಕ್ಷಸಿಯ ಮಗಳು ಸಿರಿವಂತೆಯೊಡನೆ ಕುರಿಗಳನ್ನು ಕಾಯುತ್ತಾ ಮುಂದುವರಿಯುತ್ತಾನೆ. ಅಲ್ಲಿಗೆ ಪರಮೇಶ್ವರನು ಬರುತ್ತಾನೆ. ಪದ್ಮಣ್ಣನು ನಡೆದ ಸಂಗತಿಯನ್ನು ವಿವರಿಸುತ್ತಾನೆ. ಆಗ ಪರಮೇಶ್ವರನು ಪದ್ಮಣ್ಣನಿಗೆ "ಕಂದ, ಈಕೆಯನ್ನು ನಿನ್ನ ಚಿಕ್ಕಹೆಂಡತಿಯನ್ನಾಗಿ ಸ್ವೀಕರಿಸು"ಎಂದು ಹೇಳುತ್ತಾನೆ. (ಪದ್ಮಣ್ಣನು ತೊಗರಿಸಿಯನ್ನು ಬಿಡುವ ವೇಳೆಗೆ ಮದುವೆಯಾಗಿರುತ್ತದೆ. ಹೆಂಡತಿಯ ಹೆಸರು ಲಿಂಗಮ್ಮ) ಮತ್ತೆ ಪರಮೇಶ್ವರನು ಕಂದ ನಿನ್ನ ಹಿರಿಯ ಹೆಂಡತಿ ಲಿಂಗಮ್ಮನ ಮಕ್ಕಳು ಹತ್ತಿಕಂಕಣದ ಕುರುಬರೆಂದೂ ನಿನ್ನ ಚಿಕ್ಕಹೆಂಡತಿ ಸಿರಿವಂತೆಯ ಮಕ್ಕಳು ಉಣ್ಣೆಕಂಕಣದ ಕುರುಬರೆಂದೂ ಲೋಕದಲ್ಲಿ ಪ್ರಸಿದ್ಧರಾಗುತ್ತಾರೆ. (ಹತ್ತಿ ಕಂಕಣದ ಕುರುಬರು ಮತ್ತು ಉಣ್ಣೆಯ ಕಂಕಣದ ಕುರುಬರು ಎಂಬ ಪ್ರಭೇದ ಈಗಲೂ ಇದೆ) ನೀನು ಹುಟ್ಟಿನಿಂದ ಒಕ್ಕಲಿಗ, ಕುರಿಗಳನ್ನು ಕೂಡಿದ್ದರಿಂದ ಕುರುಬಗೌಡನಾದೆ. ನಿನ್ನ ಕುಲದೇವರು ವೀರಬೀರಯ್ಯ. ನಿನ್ನ ಕುಲಗುರುವು ಶಾಂತಮುತ್ತಯ್ಯ(ಈ ಶಾಂತಮುತ್ತಯ್ಯನ ವಿಚಾರ ಮುಂದೆ ಬರುತ್ತದೆ. ಈತ ಪದ್ಮಣ್ಣನ ಹಿರಿಯ ಹೆಂಡತಿ ಲಿಂಗಮ್ಮನ ಮಗ. ಈತನೇ ಕಲ್ಯಾಣ ಪಟ್ಟಣದಲ್ಲಿ ತಗರ ಪವಾಡವನ್ನು ಮೆರೆಯುವವನು) ಆತನಿಗೆ ಒಕ್ಕಲಾಗಿ ಶಶಿಧರ ರೇವಣ್ಣಸಿದ್ಧೇಶ್ವರನ ಮಕ್ಕಳಾಗಿ ಸೌಭಾಗ್ಯ ಸಂಪನ್ನರಾಗಿ ಬದುಕುವರೆಂದು ಹರಸಿ ಭಸಿತವನಿಟ್ಟು ಕೈಲಾಸಕ್ಕೆ ತೆರಳುತ್ತಾನೆ.

ಇತ್ತ ತೊಗರಿಸಿಯಲ್ಲಿ ಪದ್ಮಣ್ಣನ ತಾಯಿ ಮಲ್ಲಮ್ಮನು ತನ್ನ ಮಗನು ಹೋದ ದುಃಖದಿಂದ ತೀವ್ರವಾಗಿ ಬಳಲುತ್ತಿರುತ್ತಾಳೆ. ಅಲ್ಲದೆ ಆ ಹಿಂದಿನ ರಾತ್ರಿ ತನ್ನ ಮಗನು ಸಿರಿವಂತೆ ಸಹವಾಗಿ ಕುರಿಗೂಡಿಕೊಂಡು ಮನೆಗೆ ಬಂದಂತೆ ಕನಸಾಗಿರುತ್ತದೆ. ಮತ್ತು ಅದೇ ದಿನ ಒಬ್ಬ ಶರಣನು ಅವರಲ್ಲಿಗೆ ಬಂದು ಪದ್ಮಣ್ಣನು ಯಾವ ಅಪಾಯಕ್ಕೂ ಗುರಿಯಾಗಿಲ್ಲವೆಂದೂ ಆತನು ಹಿಂತಿರುಗಿ ಬರುತ್ತಾನೆಂದೂ ನಂಬಿಕೆ ಕೊಡುತ್ತಾನೆ. ಮಗ ಬರುವನೆಂಬ ನೆಮ್ಮದಿಯಿಂದ ಆದಿಗೊಂಡ ಮಲ್ಲಮ್ಮ ಇವರು ತಮ್ಮ ಮೊಮ್ಮಗ ಶಾಂತಯ್ಯನಿಗೆ ಪರಿವಿಗೊಂಡನೆಂಬುವನ ಮೊಮ್ಮಗಳು ದೇವಮ್ಮ ಎಂಬಾಕೆಯನ್ನು ತಂದು ಸಂತೋಷದಿಂದ ವಿವಾಹ ಮಾಡುತ್ತಾರೆ. ಅಷ್ಟರಲ್ಲಿ ಪದ್ಮಣ್ಣನು ಕುರಿಹಿಂಡು ಸಮೇತ ತೊಗರಿಸಿಯನ್ನು ಪ್ರವೇಶಿಸಿ ಬಿತ್ತಿದ ಹೊಲಕ್ಕೆ ಅಷ್ಟೂ ಕುರಿಗಳನ್ನು ಕೂಡುತ್ತಾನೆ. ಈ ಅನಾಹುತವನ್ನು ನೋಡಿ ಊರಿನ ಜನವೆಲ್ಲಾ ಅಲ್ಲಿಗೆ ಬೊಬ್ಬಿಡುತ್ತ ಧಾವಿಸಿ ಬರುತ್ತಾರೆ. ತನ್ನ ಕಡೆಗೆ ಧಾವಿಸಿ ಬರುತ್ತಿರುವ ಜನವನ್ನು ಕಂಡ ಪದ್ಮಣ್ಣನು ದೊಡ್ಡ ದೊಣ್ಣೆಯೊಂದನ್ನು ಬೀಸಿ ಜನರನ್ನು ಹೆದರಿಸುತ್ತಾನೆ. ಆದಿಗೊಂಡನ ಹಿರಿಯ ಮಗ ಮಲ್ಲಣ್ಣನು ಈ ದೃಶ್ಯವನ್ನು ನೋಡಿ ಭಯಭೀತನಾಗಿ ತಂದೆಯ ಬಳಿ ಬಂದು ಇಂದು ನಿನ್ನ ಬಸುರಲ್ಲಿ ಮತ್ತೆ ಬಂದಂತಾಯಿತು ಎಂದು ನಡೆದ ಸಂಗತಿಯನ್ನು ವರದಿಮಾಡುತ್ತಾನೆ. ಈ ಮಾತುಗಳನ್ನು ಕೇಳಿದ ಮಲ್ಲಮ್ಮನು ಆತನು ತನ್ನ ಮಗನೇ ಇರಬೇಕೆಂದು ಊಹಿಸಿ ಪತಿಯೊಡನೆ ಹೊಲಕ್ಕೆ ತೆರಳುತ್ತಾಳೆ. ಹರೆಯನಳಿದ ಪದ್ಮಣ್ಣನನ್ನು ನೋಡಿ ಮಲ್ಲಮ್ಮ ಮರುಗುತ್ತಾಳೆ. ಪದ್ಮಣ್ಣನು ತಂದೆ ತಾಯಿಗಳ ಪಾದಕ್ಕೆರಗುತ್ತಾನೆ. ಆ ವೇಳೆಗೆ ಸಂಜೆಯಾಗುತ್ತದೆ ಪದ್ಮಣ್ಣನು ಕುರಿಗಳನ್ನೂ ಸಿರಿವಂತೆಯನ್ನೂ ಊರ ಹೊರಗೆ ಇರುವ ಕರುವುಗಲ್ಲಿನ ಬಳಿ ಬಿಟ್ಟು ತಂದೆ ತಾಯಿಗಳ ಜೊತೆ ಮನೆಗೆ ಹೋಗುತ್ತಾನೆ.

**ಮೂರನೆಯ ಸಂಧಿ :—**

ಬಹಳ ದಿನಗಳನಂತರ ಬಂದ ಪತಿಯನ್ನು ಲಿಂಗಮ್ಮನು ಬಹು ವಿಧವಾಗಿ ಸತ್ಕರಿಸುತ್ತಾಳೆ. ಆ ರಾತ್ರಿ ಪದ್ಮಣ್ಣನು ಅಲ್ಲಿಯೇ ಇರುತ್ತಾನೆ. ಬೆಳಗ್ಗೆ ಎದ್ದು ಪದ್ಮಣ್ಣನು ತಾನಿನ್ನು ಹೊರಡುವುದಾಗಿ ತಾಯಿಗೆ ತಿಳಿಸುತ್ತಾನೆ. ಇದನ್ನು ಕೇಳಿದ ಮಲ್ಲಮ್ಮನು ಮರುಗುತ್ತಾಳೆ. ಕಡೆಗೆ ಹೋಗುವುದಾದರೆ ತಮ್ಮಲ್ಲಿರುವ ಹನ್ನೆರಡು ಸಾವಿರ

ಹೊನ್ನು ಹಣವನ್ನು ಭಾಗಮಾಡಿಕೊಂಡು ಹೆಂಡತಿ ಮಕ್ಕಳನ್ನು ಕರೆದುಕೊಂಡು ಹೋಗುವುದೆಂದು ಹೇಳುತ್ತಾಳೆ. ಪದ್ಮಣ್ಣ ಲಿಂಗಮ್ಮ ಇವರು ಹಣವನ್ನು ತೆಗೆದುಕೊಳ್ಳದೆ ಅದು ಉಳಿದ ಆರು ಜನ ಮಕ್ಕಳಿಗೇ ಇರಲೆಂದು ಅವರು ಅನುಭವಿಸಿದರೆ ಅದು ನಾವು ಅನುಭವಿಸಿದಂತೆ ಎಂದು ಹೇಳಿ ಆದಿಗೊಂಡ ಮಲ್ಲಮ್ಮರಿಗೆ ನಮಸ್ಕರಿಸಿ ಹೊರಡಲನುವಾಗುತ್ತಾರೆ. ಅವರು ಗಂಡಹೆಂಡಿರನ್ನು ಕಳಿಸುತ್ತಾರೆ. ಊರಿನ ಜನರೆಲ್ಲ ಗಂಡಹೆಂಡಿರನ್ನು ಹರಸಿ ಬೀಳ್ಕೊಡುತ್ತಾರೆ. ಪದ್ಮಣ್ಣನು ತನ್ನ ಇಬ್ಬರು ಹೆಂಡಿರು ಮತ್ತು ಮಗ ಶಾಂತಯ್ಯನೊಡನೆ ಕುರಿಗಳನ್ನು ಹಿಡಿಸಿಕೊಂಡು ಹೊರಡುತ್ತಾನೆ. ಕೆಲವು ದಿವಸ ಎಲ್ಲರೂ ಕುರಿಗಳನ್ನು ಕಾಯುತ್ತ ಒಟ್ಟಿಗೆ ಇರುತ್ತಾರೆ. ಪದ್ಮಣ್ಣನ ರಾಕ್ಷಸಿ-ಹೆಂಡತಿ ಸಿರಿವಂತೆಯೊಡನೆ ಸಹಭೋಜನ ಮಾಡುವುದು, ಒಟ್ಟಿಗೆ ಇರುವುದು ಶಾಂತಯ್ಯನಿಗೆ ಸರಿಬೀಳಲಿಲ್ಲ. ಆತನು ಈ ಕಾರಣದಿಂದ ತನ್ನ ಹೆಂಡತಿ ದೇವಮ್ಮನೊಡನೆ ಬೇರೆಯಾಗುತ್ತಾನೆ. ಅವರಲ್ಲಿದ್ದ ಕುರಿಗಳನ್ನು ಎರಡು ಭಾಗ ಮಾಡಿಕೊಳ್ಳುತ್ತಾರೆ.(ಇಲ್ಲಿಂದ ಮುಂದೆ ಪದ್ಮಣ್ಣ, ಲಿಂಗಮ್ಮ, ಸಿರಿವಂತೆ ಇವರ ವಿಚಾರ ಬರುವುದಿಲ್ಲ. ಶಾಂತಯ್ಯನು ಕಥೆಯ ಮುಖ್ಯವ್ಯಕ್ತಿಯಾಗಿ ನಿಲ್ಲುತ್ತಾನೆ.)

ಶಾಂತಯ್ಯನು ತನ್ನ ಹೆಂಡತಿ ದೇವಮ್ಮನೊಡನೆ ಅತಿ ಪ್ರಿಯವಾದ ಲಿಂಗಪೂಜೆಯಲ್ಲಿ ನಿರತನಾಗಿ ಭಕ್ತಿಸುಖದಲ್ಲಿದ್ದನು. ಹೀಗಿರಲು ಶಾಂತಯ್ಯನ ಭಕ್ತಿಯನ್ನು ಪರೀಕ್ಷಿಸಿ ನೋಡುವೆನೆಂದು ಪರಮೇಶ್ವರನು ಅವನಲ್ಲಿಗೆ ಬರುತ್ತಾನೆ. ಶರಣನಾಗಿ ಬಂದ ಪರಮೇಶ್ವರನಿಗೆ ದಂಪತಿಗಳು ಕೂಡಿ ಸತ್ಕರಿಸುತ್ತಾರೆ. ಆರೋಗಣೆಗೆ ಎಡೆ ಮಾಡುವ ವೇಳೆಗೆ ಪರಮೇಶ್ವರನು ಕಂದನ ಭಕ್ತಿಯನ್ನು ಇಂದು ಪರಿಕಿಸುವೆನೋ ಎಂಬಂತೆ ಜಂಗಮಕೋಟಿಯನ್ನು ಕರೆಯುತ್ತಾನೆ. ಹಾಗೆ ಬಂದ ಶರಣಕೋಟಿಗೆ ಶಾಂತಯ್ಯನು ಪರಮೇಶ್ವರನ ಅನುಗ್ರಹದಿಂದ ಸಂತುಷ್ಟಿಪಡಿಸುತ್ತಾನೆ. ಶಾಂತನ ಭಕ್ತಿಗೆ ಮೆಚ್ಚಿದ ಪರಮೇಶ್ವರನು ಶಾಂತನನ್ನು ಕುರಿತು ಏನುಬೇಕು ಕೇಳೆನ್ನುತ್ತಾನೆ. ಅದಕ್ಕೆ ಶಾಂತನು "ನಿನ್ನ ದಯೆಯಿಂದ ಎಲ್ಲವೂ ಇದೆ, ನನಗೆ ದೀಕ್ಷೆ ಮೋಕ್ಷಗಳನ್ನಿತ್ತು ಸಲಹಬೇಕು" ಎಂದು ಪ್ರಾರ್ಥಿಸುತ್ತಾನೆ. ಆಗ ಪರಮೇಶ್ವರನು ಲೋಕದಲ್ಲಿರುವ ಶುಭವಸ್ತುಗಳನ್ನು ತರಿಸಿ ನಾಲ್ಕು ಕಲಶಗಳ ಮಧ್ಯೆ ಶಾಂತಯ್ಯನನ್ನು ಕುಳ್ಳಿರಿಸಿ ದೀಕ್ಷೆಗೆ ಅಣಿಮಾಡಿಸುತ್ತಾನೆ. ಈ ಸಮಾರಂಭಕ್ಕೆ ಪಂಡಿತಾರಾಧ್ಯ, ರೇವಣಾರಾಧ್ಯ, ಏಕೋರಾಮಯ್ಯ, ಮರುಳಸಿದ್ಧಯ್ಯ ಇನ್ನೂ ಮುಂತಾದ ಶರಣರೆಲ್ಲ ಸೇರುತ್ತಾರೆ. ಅಲ್ಲಿದ್ದ ಶರಣರು ಶಾಂತಯ್ಯನನ್ನು ಕುರಿತು ಪರಮೇಶ್ವರನ ಪುರದಲ್ಲಿರುವ ಕರಿಮಲ್ಲಿಗೆಯ ಪುಷ್ಪವನ್ನು ತಂದಲ್ಲದೆ ದೀಕ್ಷೆ ಸಂಪೂರ್ಣವಾಗುವುದಿಲ್ಲವೆನ್ನುತ್ತಾರೆ. ಆಗ ಶಾಂತಯ್ಯನು ಪರಮೇಶ್ವರನನ್ನೂ ಬಹುವಿಧವಾಗಿ ಪ್ರಾರ್ಥಿಸಿ ಕಡೆಗೆ ಕರಿಮಲ್ಲಿಗೆ ಪುಷ್ಪವು ಬರದಿದ್ದಲ್ಲಿ ಶಿರವನರಿದುಕೊಳ್ಳುವೆನೆಂದು ಕೈಗೆ ಚಂದ್ರಾಯುಧವನ್ನು ತೆಗೆದುಕೊಳ್ಳುತ್ತಾನೆ. ಆಗ ಕೈಲಾಸದಿಂದ ಕರಿಮಲ್ಲಿಗೆಯ ಪುಷ್ಪವು ಸರ್ರನವಾಗಿ ಇಳಿದು ಬರುತ್ತದೆ. ಸರಸರವಾಗಿ ಕರಿಮಲ್ಲಿಗೆಯ ಪುಷ್ಪವು ಪರಮೇಶ್ವರನ ಪುರದಿಂದ ಇಳಿದು ಬಂದದ್ದರಿಂದ ಆ ಸ್ಥಳಕ್ಕೆ ಸರವೂರೆಂದು ಹೆಸರಾಯಿತು. ನೆರೆದ ಶರಣರೆಲ್ಲರು ಜಯಜಯವೆಂದು ಹೊಗಳಿ ಶಾಂತಯ್ಯನಿಗೆ ದೀಕ್ಷೆ ಕೊಟ್ಟರು. ಆಗ ಪರಮೇಶ್ವರನು ಶಾಂತಯ್ಯ ದೇವಮ್ಮ ಇವರನ್ನು ಹರಸಿ ವಿಭೂತಿಯನ್ನಿತ್ತು ಇಂದಿನಿಂದ ನೀನು ಚೊಕ್ಕ ಶರಣನಾದೆ, ನಿನ್ನ ತಂದೆ ರಕ್ಕಸಿಯನ್ನು ಕೂಡಿದ್ದನಷ್ಟೆ. ಅವನ ಮಕ್ಕಳು—ಮನೆತನಗಳು ಮುಂದೆ ನಿನ್ನಲ್ಲಿಗೆ ಬರುತ್ತಾರೆ. ಅವರಿಗೆ ಕುಲವನ್ನಿತ್ತು ರಕ್ಷಿಸಿ ಗುರುವಾಗೆಂದು ಹೇಳುತ್ತಾನೆ

**ನಾಲ್ಕನೆಯ ಸಂಧಿ :—**

(ನಾಲ್ಕನೆಯ ಸಂಧಿಯಲ್ಲಿ ಕಿನ್ನರ ಬ್ರಹ್ಮಯ್ಯನೆಂಬ ಶರಣನ ವಿಚಾರ ಬರುತ್ತದೆ.) ಕಿನ್ನರ ಬ್ರಹ್ಮಯ್ಯನು ಕಲ್ಯಾಣ ಪಟ್ಟಣದಲ್ಲಿದ್ದ ಒಬ್ಬ ಶರಣ. ತ್ರಿಪುರಾಂತಕ ದೇವಾಲಯಕ್ಕೆ ಮೆಚ್ಚಿದ ಲಿಂಗವು ಪ್ರತಿದಿನವೂ ಹನ್ನೊಂದು ಹಣ ಹಾಗವನ್ನು ಕರುಣಿಸುತ್ತಿತ್ತು. ಆ ಹಣವನ್ನು ಬ್ರಹ್ಮಯ್ಯನು ಜಂಗಮಾರಾಧನೆಗೆ ವಿನಿಯೋಗಿಸುತ್ತಿದ್ದನು. ಹೀಗಿರಲು ಅದೇ ಕಲ್ಯಾಣ ಪಟ್ಟಣದಲ್ಲಿ ವಿಟಗಾರ ಬೊಪ್ಪಯ್ಯನೆಂಬವನಿದ್ದನು, ಆತನಿಗೆ ಚೆನ್ನಿ ಎಂಬ ವೇಶ್ಯೆ ಇದ್ದಳು. ಆಕೆಯು ಒಂದುದಿನ ತನ್ನ ಪ್ರಿಯತಮನೊಡನೆ, ತಾನು ಹಬ್ಬವೊಂದನ್ನು ಆಚರಿಸಬೇಕು, ಅದಕ್ಕೆ ಒಂದು ಒಳ್ಳೆಯ ತಗರು ಬೇಕು ತೆಗೆದು

ಕೊಂಡು ಬಾ, ಎಂದು ಹೇಳುತ್ತಾಳೆ. ಅದರಂತೆ ಬೊಪ್ಪಯ್ಯನು ಒಂದು ತಗರನ್ನು ಕೊಂಡು ಹೊತ್ತು ತರುತ್ತಿರುತ್ತಾನೆ. ಊರು ಮುಂದಕ್ಕೆ ಬರುವ ವೇಳೆಗೆ ಆಯಾಸವಾಗಿ ಅಲ್ಲಿದ್ದ ತ್ರಿಪುರಾಂತಕ ದೇವಾಲಯದಲ್ಲಿ ತಗರನ್ನು ಇಳುಹಿ ತಾನೂ ಅಲ್ಲೇ ಕುಳಿತಿರುತ್ತಾನೆ. ಸ್ವಲ್ಪ ಹೊತ್ತಿನಲ್ಲಿ ಆ ತಗರು ತ್ರಿಪುರಾಂತಕ ದೇವಾಲಯವನ್ನು ಹೊಕ್ಕು ಅಲ್ಲಿದ್ದ ಲಿಂಗವನ್ನು ಮರೆಹೊಕ್ಕಿರುತ್ತದೆ. ಇದನ್ನು ನೋಡುತ್ತಿದ್ದ ಕಿನ್ನರ ಬ್ರಹ್ಮಯ್ಯನು ಬೊಪ್ಪಯ್ಯನನ್ನು ವಿಚಾರಿಸಲು ಆತನು ತನ್ನ ಪ್ರೇಯಸಿ ಚೆನ್ನಿಯ ಮನದಿಚ್ಛೆಯನ್ನು ಸಲ್ಲಿಸುವ ಸಲುವಾಗಿ ತಂದುದಾಗಿ ತಿಳಿಸುತ್ತಾನೆ. ಮರೆಹೊಕ್ಕದ್ದನ್ನು ಕಾಯಬೇಕಲ್ಲದೆ ಕೊಲ್ಲಲೊಯ್ಯುವುದು ಸರಿಯಲ್ಲವೆಂದು ಬ್ರಹ್ಮಯ್ಯನು ತಗರನ್ನು ಕೊಂಡ ಬೆಲೆಯ ಎರಡರಷ್ಟು ಹಣವನ್ನು ಕೊಟ್ಟು ಬೊಪ್ಪಯ್ಯನ ತಗರನ್ನು ಕೊಳ್ಳುತ್ತಾನೆ. ಅಲ್ಲದೆ ಆ ತಗರನ್ನು ಮತ್ತೆ ಬಂದು ಕೇಳಿದರೆ ಕೊಡುವುದಿಲ್ಲವೆಂದು ಹೇಳಿ ಅದಕ್ಕೆ ಲಿಂಗವೇ ಸಾಕ್ಷಿ ಎಂದು ಹೇಳಿ, ತ್ರಿಪುರಾಂತಕ ಲಿಂಗದೆದುರು ತಗರಿಗೆ ಲಿಂಗಮುದ್ರೆಯನ್ನು ಒತ್ತುತ್ತಾನೆ

ಇತ್ತ ಬೊಪ್ಪಯ್ಯನು ತಗರನ್ನು ಬಿಟ್ಟು, ಹಣವನ್ನು ತೆಗೆದುಕೊಂಡು ಚೆನ್ನಿಯ ಮನೆಗೆ ಬರುತ್ತಾನೆ. ಸಂಗತಿಯನ್ನರಿತ ಚೆನ್ನಿಯು ಹಣವನ್ನು ನಿರಾಕರಿಸಿ ಅದೇ ತಗರು ತನಗೆ ಬೇಕೆಂದು ಹೇಳಿ ತಗರನ್ನು ತರುವ ವರೆಗೆ ಮನೆಗೆ ಕಾಲಿಡಕೂಡದೆಂದು ಹಿಂದಕ್ಕೆ ಕಳುಹಿಸುತ್ತಾಳೆ. ಈ ಸುದ್ದಿಯನ್ನು ಹೊತ್ತು ಬೊಪ್ಪಯ್ಯನು ಬ್ರಹ್ಮಯ್ಯನಲ್ಲಿಗೆ ಬರುತ್ತಾನೆ. ಆದರೆ ಮೊದಲೇ ಮಾಡಿಕೊಂಡಿದ್ದ ಕರಾರಿನಂತೆ ಬ್ರಹ್ಮಯ್ಯನು ನಿರಾಕರಿಸುತ್ತಾನೆ. ಬರಿಗಯ್ಯಲ್ಲಿ ಬಂದ ಬೊಪ್ಪಯ್ಯನನ್ನು ಕುರಿತು ಚೆನ್ನಿಯು ಬ್ರಹ್ಮಯ್ಯನನ್ನು ಕೊಂದು ಸದೆಬಡಿದಾದರೂ ತಗರನ್ನು ತರುವಂತೆ ಹೇಳಿ, ಬೊಪ್ಪಯ್ಯನೊಡನೆ ತನ್ನ ಅಣ್ಣಂದಿರನ್ನೂ ಇತರ ಪರಿವಾರವನ್ನೂ ಸಹಾಯಕ್ಕೆ ಕಳುಹಿಸುತ್ತಾಳೆ. ತ್ರಿಪುರಾಂತಕ ದೇವಾಲಯದ ಬಳಿ ಬ್ರಹ್ಮಯ್ಯನಿಗೂ ಚೆನ್ನಿಯ ಕಡೆಯವರಿಗೂ ತಗರಿಗಾಗಿ ಬಲವಾದ ಕಾಳಗ ನಡೆಯುತ್ತದೆ. ಬ್ರಹ್ಮಯ್ಯನು ತನ್ನ ಕೈದುವಿನಿಂದ ಚೆನ್ನಿಯ ಅಣ್ಣಂದಿರನ್ನು ಕೆಡಹುತ್ತಾನೆ. ಈ ಸುದ್ದಿಯನ್ನು ಬೊಪ್ಪಯ್ಯನು ಚೆನ್ನಿಗೆ ತಿಳಿಸುತ್ತಾನೆ. ತಗರು ತನಗೆ ಸೇರದುದನ್ನೂ, ಅಣ್ಣಂದಿರಳಿದುದನ್ನೂ ಕೇಳಿದ ಚೆನ್ನಿಯು ಕಲ್ಯಾಣ ಪಟ್ಟಣ ಬೀದಿಗಳಲ್ಲಿ "ಈ ಪಟ್ಟಣಕ್ಕೆ ಯಾರೂ ದಿಕ್ಕಿಲ್ಲ" ವೆಂದು ಗೋಳಿಡುತ್ತಾ ದೂರನ್ನು ಹೊತ್ತು ಕಲ್ಯಾಣದರಸು ಬಿಜ್ಜಳನಲ್ಲಿಗೆ ಬರುತ್ತಾಳೆ. ದೂರನ್ನು ಕೇಳಿದ ಬಿಜ್ಜಳನು ಚೆನ್ನಿಯ ಸಹಾಯಕ್ಕೆ ಸೈನ್ಯವನ್ನು ಕಳುಹುತ್ತಾನೆ. ದೇವಾಲಯದ ಕಡೆಗೆ ಬರುತ್ತಿದ್ದ ಸೈನ್ಯವನ್ನು ನೋಡಿದ ಬ್ರಹ್ಮಯ್ಯನು ಲಿಂಗವನ್ನು ಪ್ರಾರ್ಥಿಸಿ ಚಂದ್ರಾಯುಧವನ್ನು ತೆಗೆದುಕೊಂಡು ಸೈನ್ಯಕ್ಕಿದಿರಾಗಿ ನುಗ್ಗುತ್ತಾನೆ. "ಕಟ್ಟಿದ ಕದಳಿಯ ವನವ ಕರಿ ಹೊಕ್ಕಂತೆ ದಿಟ್ಟ ಕಿನ್ನರಿ ಬ್ರಹ್ಮಯ್ಯನು" ಸೈನ್ಯವನ್ನು ಪ್ರವೇಶಿಸುತ್ತಾನೆ. ಬ್ರಹ್ಮಯ್ಯನ ಪ್ರವೇಶದಿಂದ ಸೈನ್ಯವೆಲ್ಲ ಭ್ರಮೆಹಿಡಿದಂತಾಗಿ ತಮ್ಮ ತಮ್ಮಲ್ಲೇ ಕಡಿದಾಡಿ ಮಡಿಯುತ್ತಾರೆ ಉಳಿದವರು ಕೆಲವರು ಈ ವಾರ್ತೆಯನ್ನು ಬಿಜ್ಜಳನಿಗೆ ಕೊಂಡೊಯ್ಯುತ್ತಾರೆ. ಇದನ್ನು ಕೇಳಿದ ಬಿಜ್ಜಳನು ಚಿಂತೆಯಿಂದ ಕೂಡಿದವನಾಗಿ ಬಸವ ದಂಡೇಶನಿಗೆ ಹೇಳಿ ಕಳುಹಿಸುತ್ತಾನೆ.

ಐದನೆಯ ಸಂಧಿ :—

ದೊರೆ ಬಿಜ್ಜಳನ ಕರೆಯನ್ನು ಕೇಳಿದ ಬಸವನು ಆಸ್ಥಾನಕ್ಕೆ ಬರುತ್ತಾನೆ. ಬಿಜ್ಜಳನು ಬಸವನನ್ನು ಕುರಿತು "ನಿಮ್ಮ ಶರಣರು ಎಂತಹವರು, ನಮ್ಮನ್ನು ಕೂಡ ಲೆಕ್ಕಿಸದೆ ಸೈನ್ಯವನ್ನೇ ಸಂಹರಿಸಿದ್ದಾರೆ. ಅವರನ್ನು ಹಿಡಿದು ಕೊಲ್ಲಿಸುತ್ತೇನೆ" ಎಂದು ಹೇಳುತ್ತಾನೆ. ಆ ಬಸವನು ಕಿನ್ನರಯ್ಯನೊಬ್ಬನ ಮೇಲೆ ಅಷ್ಟೊಂ ಸೈನ್ಯವನ್ನು ಕಳುಹಿದುದು ಸರಿಯಲ್ಲವೆಂದು ಶರಣನ ಮಾತನಾಡುತ್ತಾನೆ. ಇದರ ಮರ್ಮವನ್ನರಿ ಬೇಕೆಂದು ಅಲ್ಲಿದ್ದ ಕೊಂಡೆಯ ಮಂಚಣ್ಣನು, ತ್ರಿಪುರಾಂತಕ ದೇವಾಲಯಕ್ಕೆ ಹೋಗಿ ನಡೆದ ಸಂಗತಿಯನ್ನೆ ತಿಳಿದು ಬರಲು ಅಟ್ಟುತ್ತಾನೆ. ಅದರಂತೆ ಮಂಚಣ್ಣ ಬ್ರಹ್ಮಯ್ಯನಲ್ಲಿ ಬರಲು ಬ್ರಹ್ಮಯ್ಯನು ತಾನು ಅ ಸಾಕ್ಷಿಯಾಗಿ ತಗರನ್ನು ಕೊಂಡಲ್ಲಿಂದ ಹಿಡಿದು, ಸ ಸಂಗತಿಯನ್ನೆಲ್ಲ ಹೇಳಿ ತಗರನ್ನು ಕೊಂಡದ್ದಕ್ಕೆ ಸ ಯಾಗಿ ಲಿಂಗವೇ ನುಡಿಯುವುದೆಂದು ಕೂಡ ಹೇ ತ್ತಾನೆ. ಈ ವಿಚಾರವನ್ನು ಮಂಚಣ್ಣನು ದೊರೆ ಬಿ ನಿಗೆ ತಿಳಿಸುತ್ತಾನೆ. ಆಗ ಬಿಜ್ಜಳನು ತನ್ನ ದಂ ಬಸವನೊಡನೆ ಪರಿವಾರ ಸಹಿತವಾಗಿ ತ್ರಿಪುರಾಂ ದೇವಾಲಯದೆಡೆಗೆ ಬರುತ್ತಾನೆ. ಅಲ್ಲಿ ಕಿನ್ನರ ಬ್ರ

ಯ್ಯನು ಸಕಲ ಶರಣರೆದುರು ಲಿಂಗವನ್ನು ಅನನ್ಯಭಕ್ತಿ ಯಿಂದ ಪ್ರಾರ್ಥಿಸುತ್ತಾನೆ. ಆಗ ಲಿಂಗವು "ನಿರುತರ ಸಹಜದ ವೇಷನ ಕೊಂಡೆದ್ದೆನುತಲಿ, ಎಂಟೆಂಟು ಬಾರಿಗೆ ಉಂಟು ಎನುತ್ತ" ಒಡನೆ ನುಡಿಯುತ್ತದೆ. ಶರಣರ ಮಹಿಮೆಯು ಅರಿಯಲಳವಲ್ಲವೆಂದು ಬಿಜ್ಜಳನು ಕೈಮುಗಿದು ಕ್ಷಮೆಬೇಡುತ್ತಾನೆ. ಬ್ರಹ್ಮಯ್ಯನ ಅನುಗ್ರಹದಿಂದ ಮಂದಿ ಮಾರ್ಬಲವೆಲ್ಲ ಮತ್ತೆ ಏಳುತ್ತದೆ. ಶರಣರ ಮಹಿಮೆಯನ್ನು ಬಸವನೊಡನೆ ಕೊಂಡಾಡುತ್ತ ಬಿಜ್ಜಳನು ಪರಿವಾರದೊಡನೆ ಅರಮನೆಗೆ ತೆರಳುತ್ತಾನೆ.

ಇತ್ತ ಕಿನ್ನರ ಬ್ರಹ್ಮಯ್ಯನು ಈ ತಗರಿಗೆ ಮುತ್ತು ಮಾಣಿಕಗಳಿಂದ ಅಲಂಕೃತವಾದ ಗೆಜ್ಜೆಗಳನ್ನು ಹಾಕಿ, ಒಂಬತ್ತು ಪುರಿಯ ಚಿನ್ನದ ಮುಖವಾಡವನ್ನು ಧರಿಸಿ ಪ್ರೀತಿಯಿಂದ ದೇವಸ್ಥಾನದಲ್ಲಿಟ್ಟುಕೊಳ್ಳುತ್ತಾನೆ. ತಗರು ಎಲ್ಲರ ಪ್ರೀತಿಗೂ ಪಾತ್ರವಾಗುತ್ತದೆ. ಎಲ್ಲರೂ ಅದಕ್ಕೆ ತಿನಿಸುಗಳನ್ನು ಕೊಡುತ್ತಾರೆ. ಜನರ ಬಾಯಲ್ಲಿ ಶಂಭು ಎಂಬ ಹೆಸರಿನಿಂದ ಕಲ್ಯಾಣ ಪಟ್ಟಣದಲ್ಲಿ ಕಿನ್ನರಯ್ಯನ ಆರೈಕೆಯಲ್ಲಿ ತಗರು ಮೈಕೊಬ್ಬುತ್ತದೆ. ಹೀಗೆ ಕೊಬ್ಬಿದ ತಗರು ಕೆಲವು ದಿವಸಗಳನಂತರ ಚೇಷ್ಟೆಗೆ ಪ್ರಾರಂಭಿಸುತ್ತದೆ. ಅಲ್ಲದೆ ಕಿನ್ನರಯ್ಯನು ಲಿಂಗಕ್ಕೆ ಮಾಡಿದ್ದ ಅಲಂಕಾರವನ್ನೂ ಕೆಡಿಸಲು ಪ್ರಾರಂಭಿಸುತ್ತದೆ. ಇದನ್ನು ನೋಡಿದ ಕಿನ್ನರಯ್ಯನು ಕೊಬ್ಬಿದ ತರಗನ್ನು ಮುಂದೆಯಲ್ಲಿಡುವ ಯೋಚನೆಯನ್ನು ಮಾಡುತ್ತಾನೆ. ಈ ತಗರಿಗೆ ಲಿಂಗಮುದ್ರೆಯಾಗಿರುವುದರಿಂದ ಶರಣರಲ್ಲದ ಸಾಮಾನ್ಯರ ಮುಂದೆಯಲ್ಲಿ ಬಿಡುವ ಹಾಗಿಲ್ಲ. ಆಗ ಸರವೂರಿನಲ್ಲಿ ಶರಣ ಶಾಂತಯ್ಯನ ಮಂಪೆ ಇರುವುದೆಂದು ತಿಳಿದು ಅಲ್ಲಿಗೆ ತೆಗೆದುಕೊಂಡು ಹೋಗಿಬಿಡಬೇಕೆಂದು ತೀರ್ಮಾನಿಸುತ್ತಾನೆ. ಅದರಂತೆ ತಗರನ್ನು ಶೃಂಗರಿಸಿ ವಾದ್ಯಗಳೊಡನೆ ಮೆರವಣಿಗೆಯಲ್ಲಿ ಸರವೂರಿಗೆ ತಂದು ಅಲ್ಲಿ ಶಾಂತಯ್ಯನಿಗೆ ಆ ತಗರಿನ ಜವಾಬ್ದಾರಿಯನ್ನು ವಹಿಸಿ ತಾನು ಕಲ್ಯಾಣಕ್ಕೆ ಹಿಂದಿರುಗುತ್ತಾನೆ.

ಆರನೆಯ ಸಂಧಿ:—

ಕಲ್ಯಾಣ ಪಟ್ಟಣದಲ್ಲಿ ಕುರುಬರಿರುತ್ತಾರೆ. ಪಟ್ಟಣದವರಿಗೆ ಬೇಕಾದ ಹಾಲು ಮೊಸರು ತುಪ್ಪಗಳನ್ನು ಮಾರುವುದು ಅವರ ಕಸಬು. ಅವರೂ ಸಹ ಹರ ಶರಣರು. ಹೀಗೆ ಅವರು ಹಾಲು ಮೊಸರುಗಳನ್ನು ಪೇಟೆಯಲ್ಲಿ ಪಸರವಿಕ್ಕಿ ಮಾರುತ್ತಿರಲು ಪರಮೇಶ್ವರನು ಸಿದ್ದಶೆಟ್ಟಿ, ಮಲ್ಲಶೆಟ್ಟಿ ಎಂಬ ಎರಡು ರೂಪುಧರಿಸಿ ಕಲ್ಯಾಣಕ್ಕೆ ಬಂದು ಅವರ ಜೊತೆಯಲ್ಲಿಯೇ ಪಸರವಿಕ್ಕಿ ವ್ಯಾಪಾರವನ್ನು ಪ್ರಾರಂಭಿಸುತ್ತಾನೆ. ಈ ಹೊಸ ವ್ಯಾಪಾರಿಗಳನ್ನು ಕಂಡ ಕಲ್ಯಾಣದ ಜನರು ನಿಮ್ಮ ನೆಲೆ ಯಾವುದೆಂದು ಕೇಳಲು ತಾವು ಕಡವಾಡಿ ಎಂಬ ಪಟ್ಟಣದಿಂದ ಬಂದೆವೆಂದೂ ಕಲ್ಯಾಣದ ಅಧಿಕತೆಯನ್ನು ಕೇಳಿ ಬಂದೆವೆಂದೂ ಹೇಳುತ್ತಾರೆ. ಹೀಗಿರಲು ಒಂದು ದಿವಸ ಹಾಲು ಮಾರುವ ಕುರುಬರು ಹಾಲಿನ ಜೊತೆಯಲ್ಲಿ ಸತ್ತ ಕುರಿಯೊಂದನ್ನು ಪೇಟೆಗೆ ತಂದರು ಇದನ್ನು ಕಂಡ ಸಿದ್ದಶೆಟ್ಟಿ. ಮಲ್ಲಶೆಟ್ಟಿಯರು ಇದನ್ನು ಪ್ರತಿಭಟಿಸಿ ಶರಣರು ಕೊಳ್ಳುವ ಹಾಲು ಮೊಸರಿನ ಜೊತೆ ಸತ್ತ ಕುರಿಮರಿಯನ್ನು ತಂದದ್ದು ಮಹಾಪರಾಧವೆಂದು ಅದನ್ನು ಪಟ್ಟಣದ ಶರಣರಿಗೆ ತಿಳಿಸಿದರು ಇವರ ಮಾತನ್ನು ಅಂಗೀಕರಿಸಿದ ಶರಣರು ಈ ಅಕಾರ್ಯಕ್ಕಾಗಿ ಕುರುಬರನ್ನು ರಟ್ಟು ಮತದವರೆಂದು ಕರೆದು ಅವರು ಕಲ್ಯಾಣಪಟ್ಟಣದಿಂದ ಹೊರಗು ಎಂದು ಡಂಗೂರ ಸಾರಿಸುತ್ತಾರೆ. ಕಲ್ಯಾಣದಲ್ಲಿದ್ದ ಕುರುಬರೆಲ್ಲ ಪಟ್ಟಣವನ್ನು ಬಿಟ್ಟು ಒಂದು ಯೋಜನ ದೂರದಲ್ಲಿರುವ ಒಂದು ಅಡವಿಯಲ್ಲಿ ಊರುಕಟ್ಟಿಕೊಂಡು ವಾಸವಾಗಿರುತ್ತಾರೆ. ಹೀಗೆ ಕುರುಬರು ಕಲ್ಯಾಣ ಪಟ್ಟಣವನ್ನು ಬಿಟ್ಟು ಹನ್ನೆರಡು ವರ್ಷವಾಗಿರುತ್ತದೆ

ಹೀಗಿರಲು ಕುರುಬರಿಗೆ ಅರಿವುದೋರಿ ಅವರನ್ನು ಕುಲವಂತರನ್ನಾಗಿ ಮಾಡಬೇಕೆಂಬ ಇಚ್ಛೆಯಿಂದ ಸಿದ್ಧಶೆಟ್ಟಿಯು (ಪರಮೇಶ್ವರನು) ಆರುವಣಗನ ವೇಷಧರಿಸಿ ಕುರುಬರಿದ್ದ ಕೇರಿಗೆ ಬರುತ್ತಾನೆ. ಬಂದು ಅಲ್ಲಿ ಪಸರ ವಿಕ್ಕುತ್ತಾನೆ, ಇದನ್ನು ನೋಡಿದ ಕುರುಬಗೌಡನು ಸಿದ್ಧಶೆಟ್ಟಿಯಲ್ಲಿಗೆ ಬಂದು ಪರವಾದಿಗಳಿರುವ ಇಲ್ಲಿಗೆ ನೀವು ಬಂದು ಪಸರವಿಕ್ಕುವರೆ ಎಂದು ಕೇಳುತ್ತಾನೆ. ಅದಕ್ಕೆ ಸಿದ್ಧಶೆಟ್ಟಿಯು ನಿಮಗೆ ಈ ಸ್ಥಿತಿಯು ಬರಲು ಕಾರಣವಾದ ಹಿಂದಿನ ಕಥೆ ಏನೆಂದು ಪ್ರಶ್ನಿಸಲು "ಒಡೆಯನಿಲ್ಲವು ಸ್ವಾಮಿ, ಹಿಡಿವರೆ ಕೊನೆಯಿಲ್ಲ, ಪೊಡವಿ ಕೈಸೇರದಯ್ಯ" ಎಂದು ದುಃಖಿಸುತ್ತಾರೆ ಆಗ

ಸೆಟ್ಟಿಯು 'ನಿಮಗೆ ಒಡೆಯನುಂಟು, ನಿಮ್ಮ ಕುಲವನ್ನೆಲ್ಲ ಮಮತೆಯಿಂದ ಕೈಕೊಂಡು ನಿಮಗೆ ಎಣೆಯಿಲ್ಲವೆಂದೆನಿಸುವ ಒಬ್ಬ ಶರಣನುಂಟು'ಎಂದು ಹೇಳುತ್ತಾನೆ. ಮಾತನ್ನು ಕೇಳಿದ ಕುರುಬಗೌಡರೆಲ್ಲರೂ ಸಿದ್ಧಶೆಟ್ಟಿಯ ಪಾದಕ್ಕೆರಗುತ್ತಾರೆ. ಆಗ ಸಿದ್ಧಶೆಟ್ಟಿಯು "ಕಲ್ಯಾಣ ಪಟ್ಟಣಕ್ಕೆ ಯೋಜನೆ ದೂರದಲ್ಲಿ ಸರವೂರೆಂಬ ಊರಿದೆ, ಅಲ್ಲಿ ಶಾಂತಯ್ಯನೆಂಬ ಶರಣನಿದ್ದಾನೆ. ಅವನನ್ನು ಮರೆಹೊಕ್ಕರೆ ನೀವು ಪವಿತ್ರರಾಗುತ್ತೀರಿ. ಅವನನ್ನು ಗುರುವಾಗಿ ಸ್ವೀಕರಿಸಿದರೆ ನಿಮಗೆ ಕುಲವುಂಟಾಗುತ್ತದೆ"ಎಂದು ಹೇಳುತ್ತಾನೆ. ಅದರಂತೆ ಅಲ್ಲಿದ್ದ ಕುರುಬರೆಲ್ಲರೂ ಒಟ್ಟುಗೂಡಿಹೋಗಿ ಸರವೂರಿನಲ್ಲಿದ್ದ ಶಾಂತಯ್ಯನನ್ನು ಕಂಡು ಅಡಿಗೆರಗುತ್ತಾರೆ. ದೂರದಿಂದ ಬಂದವರ ಯೋಗಕ್ಷೇಮವನ್ನು ವಿಚಾರಿಸಿದ ಮೇಲೆ ಶಾಂತಯ್ಯನು ದುಃಖವನ್ನು ತಿಳಿಯುತ್ತಾನೆ. ಆಗ ಅವರು ತಾವು ಮಾಡಿದ ಅಕಾರ್ಯವನ್ನೂ ಅದರಿಂದ ಕಲ್ಯಾಣ ಪಟ್ಟಣದಿಂದ ಹೊರಗಾಗಿ ಹನ್ನೆರಡು ವರ್ಷಪರ್ಯಂತ ಗಟ್ಟು ಮತದವರೆಂದು ಬಾಳಿದ್ದನ್ನೂ ಹೇಳಿ ಒಬ್ಬ ಶರಣನಿಂದ ಈ ಊರಿನ ನೆಲೆಯನ್ನರಿತು ಅಲ್ಲಿಗೆ ಬಂದ ವಿಚಾರವನ್ನು ವಿಸ್ತರಿಸಿದರು. ಮತ್ತು ತಮ್ಮನ್ನು ಉದ್ಧರಿಸಬೇಕೆಂದು ಪ್ರಾರ್ಥಿಸಿ ತಮ್ಮಲ್ಲಿದ್ದುದನ್ನು ಶಾಂತಯ್ಯನಲ್ಲಿ ಅರ್ಪಿಸಿದರು.

ಹೀಗೆ ಶಾಂತಯ್ಯನು ಕುರುಬ ಗೌಡರೊಡನೆ ಮಾತನಾಡುತ್ತಿರುವಾಗ ಕುರಿ ಹಿಂಡಿನಿಂದ ಒಬ್ಬ ಕುರಿಗಾಹಿಯು ಬಂದು ಕುರಿಹಿಂಡಿನಲ್ಲಿದ್ದ ಕಿನ್ನರಬ್ರಹ್ಮಯ್ಯನ ತಗರು ಸತ್ತುಹೋಯಿತೆಂದು ವರದಿ ಮಾಡುತ್ತಾನೆ. ಇದನ್ನು ಕೇಳಿದ ಶಾಂತಯ್ಯನು ಆ ಮೇಷವನ್ನು ಕಲ್ಯಾಣ ಪಟ್ಟಣಕ್ಕೆ ತೆಗೆದುಕೊಂಡು ಹೋಗಬೇಕೆಂದು ಯೋಚಿಸುತ್ತಾನೆ ಪುಷ್ಪಕವೊಂದನ್ನು ರಚಿಸಿ ತಗರನ್ನು ಅದರಲ್ಲಿಟ್ಟು ವೈಭವದಿಂದ ಸಕಲವಾದ್ಯಗಳೊಡನೆ ಕಲ್ಯಾಣ ಪಟ್ಟಣಕ್ಕೆ ತರುತ್ತಾರೆ. ಕಲ್ಯಾಣ ಪಟ್ಟಣದಲ್ಲಿದ್ದ ಸಿದ್ಧಸೆಟ್ಟಿ ಮಲ್ಲಿಶೆಟ್ಟಿ ಮುಂತಾದ ಶರಣರು ಈ ಉತ್ಸವವನ್ನು ತಡೆಯುತ್ತಾರೆ. ಸತ್ತ ಮೇಷವನ್ನು ಪಟ್ಟಣದೊಳಕ್ಕೆ ತಂದದ್ದು ಮಹಾಪರಾಧವೆಂದು ಪ್ರತಿಭಟಿಸುತ್ತಾರೆ. ಅಲ್ಲದೆ ಅದನ್ನು ಬದುಕಿಸದಿದ್ದರೆ ಊರಿಗೆ ಹಾನಿಯುಂಟಾಗುವುದೆಂದು ನುಡಿವರು. ಈ ಮಾತನ್ನು ಕೇಳಿದ ಶಾಂತಯ್ಯನು "ಎನ್ನಯ್ಯ ಸಿದ್ಧರೇವಣ್ಣನರಿಕೆಯ ಚನ್ನಮೇಷನ ಪವಾಡವ ನಿರ್ಣಯಿಸದಿರೆ ನಿಮ್ಮ ಚರಣ ಸೇವಕನಲ್ಲ" ಎಂದು ಹೇಳುತ್ತಾನೆ. ಅಲ್ಲಿಂದ ಶಾಂತಯ್ಯನು ಉತ್ಸವವನ್ನು ತ್ರಿಪುರಾಂತಕ ದೇವಾಲಯಕ್ಕೆ ನಡೆಸಿಕೊಂಡು ಹೋಗಿ ಚಂದ್ರಶಾಲೆಯಲ್ಲಿ ಮೇಷನನ್ನು ಪ್ರತಿಷ್ಠಿಸಿ ಸಕಲ ಪುಷ್ಪಗಳಿಂದ ಅಲಂಕರಿಸಿ ವಿಭೂತಿಯನ್ನಿಡುತ್ತಾನೆ. ಅಲ್ಲಿಗೆ ಕಲ್ಯಾಣದರಸು ಬಿಜ್ಜಳನು ಮಂತ್ರಿ ಬಸವನೊಡನೆ ಬರುತ್ತಾನೆ. ಅಲ್ಲದೆ ಕಲ್ಯಾಣದಲ್ಲಿದ್ದ ಕಿನ್ನರಯ್ಯ, ಸೊನ್ನಲಿಗೆ ಸಿದ್ಧರಾಮಯ್ಯ, ಕಲಕೇತ ಬ್ರಹ್ಮಯ್ಯ ಚನ್ನಯ್ಯ ಹೊನ್ನಯ್ಯ ಒಕ್ಕಲಿಗ ಮುದ್ದಯ್ಯ, ಸುಲಿಯ ಚೌಡಯ್ಯ, ಗುಂಡುಬ್ರಹ್ಮಯ್ಯ, ಮೋಳಿಗೆ ಮಾರಯ್ಯ ಹಡಪದ ಕಂಪಣ್ಣ, ಮುಂತಾದ ಶರಣರು ಈ ಪವಾಡವನ್ನು ನೋಡಲು ತ್ರಿಪುರಾಂತಕನ ದೇವಾಲಯವನ್ನು ಸೇರುತ್ತಾರೆ.

**ಏಳನೆಯ ಸಂಧಿ :—**

ನೆರೆದ ಶರಣರ ಮುಂದೆ ಶಾಂತಯ್ಯನು ಪರಮೇಶ್ವರ
ನನ್ನು ಬಹುವಿಧವಾಗಿ ಪ್ರಾರ್ಥಿಸುತ್ತಾನೆ. ಕೂಡಿದ್ದ ಶರ
ಣರೆಲ್ಲರೂ ಒಬ್ಬರ ಮುಖವನ್ನೊಬ್ಬರು ನೋಡುತ್ತಿರಲ
ಅಲ್ಲಿದ್ದ ಕೊಂಡೆಯ ಮಂಚಣ್ಣನು ಮೇಷನನ್ನು ಬದುಕ
ಸುವ ಕಾರ್ಯ ಸಾರ್ಥಕವಾಗುವುದಿಲ್ಲವೆಂದು ನುಡಿಯು
ತ್ತಾನೆ. ಅವನ ಮಾತಿಗೆ ಬಿಜ್ಜಳನೂ ಕೂಡ ತಲೆದೂ
ಗುತ್ತಾನೆ. ಆಗ ಶರಣರೆಲ್ಲ ಬಸವನ ಕಡೆ ನೋಡ
ತ್ತಾರೆ. ಬಸವನು ಶರಣರನ್ನು ಕುರಿತು ನಿಮ್ಮಂತ
ಶರಣರ ಕರುಣೆ ಇದ್ದಲ್ಲಿ ಶಾಂತನು ತಗರನ್ನು ಮರು
ಪಡೆಯುತ್ತಾನೆ. "ಶಿಶುವಿಗೆ ಹೆತ್ತವರು ಹೆಸರಿಡಬೇ
ಲ್ಲದೆ ಮತ್ತಾರಿಂದಲೂ ಆ ಕೆಲಸ....ಅಂತೆಯೇ ಈ
ಪವಾಡವನ್ನು ಮೆರೆಯುವುದು ಶಾಂತನೊಬ್ಬನಿಂದಲ
ಸಾಧ್ಯ"ವೆಂದು ನುಡಿದು ಶಾಂತನನ್ನು ಹರಸಿ ಭಸಿತವ
ಡುತ್ತಾನೆ. ಶಾಂತಯ್ಯನು ಲಿಂಗವನ್ನು ನೆನೆದು ಮೇ
ನಿಗೆ ಭಸಿತವನ್ನಿಟ್ಟು ಪ್ರೈಡವಿ ತೀರ್ಥಪ್ರಸಾದಗಳನ
ತಳಿಯುತ್ತಾನೆ ಮಲಗಿದ್ದ ತಗರು ಘುಡುಘುಡಿಸು
ಮೇಲೆದ್ದು ಎಡಬಲಗಳನ್ನು ನೋಡುತ್ತಾ ಎದುರಿಗಿ
ವಜ್ರಕಂಬವನ್ನು ಹಾಯುತ್ತದೆ. ಶರಣರೆಲ್ಲ
ಆಶ್ಚರ್ಯಚಕಿತರಾಗುತ್ತಾರೆ. ಶಾಂತನ ಪವಾಡವನ

ಕೋಡಿದ ಬಿಜ್ಜಳನು ನಡುಗಿದನು. ಹೆಚ್ಚಿನ ಮಹಿಮೆ
ಯನ್ನು ಕಾಣದಾಡಿದೆನೆಂದು ಮನದಲ್ಲಿ ಹುಚ್ಚನಾಗು
ತ್ತಾನೆ. ಊರಿನ ಪ್ರಜೆಯೆಲ್ಲ ಶಾಂತಯ್ಯನನ್ನ ಹೊಗ
ಳುತ್ತದೆ. ಬಸವನು ಶಾಂತಯ್ಯನ ಭಕ್ತಿಗೆ ಮೆಚ್ಚಿ
ಬೇಕಾದುದನ್ನು ಬೇಡು ಎನ್ನುತ್ತಾನೆ ಆಗ ಶಾಂತ
ಯ್ಯನು ನಿಮ್ಮ ದಯೆಯಿಂದ ಯಾವುದಕ್ಕೂ ಕಡಿಮೆ
ಇಲ್ಲ. ರಟ್ಟಮತದವರೆಂದು ಕಲ್ಯಾಣಪಟ್ಟಣದಿಂದ
ದೂರದೂಡಲ್ಪಟ್ಟ ಕುರುಬರನ್ನು ಉದ್ಧರಿಸಬೇಕೆಂದು
ಬೇಡಿದನು. ಆಗ ಬಸವನು ಸಕಲ ಶುಭವಸ್ತುಗಳನ್ನು
ತರಿಸಿ ನೆರೆದಿದ್ದ ಕುರುಬಗೌಡರ ಸಮ್ಮುಖದಲ್ಲಿ ಶಾಂತ
ಯ್ಯನನ್ನು ಕುರುಬರಿಗೆ ಗುರುವಾಗಿರೆಂದು ಹರಸಿ ವಿಭೂ
ತಿಯನ್ನಿಟ್ಟನು. ಅನಂತರ ಶಾಂತಯ್ಯನು ಕ್ಷೀರಗುಲಕ್ಕೆ
(ಹಾಲುಮತಕ್ಕೆ) ಕುರುಹೊಂದನ್ನು ಕರುಣಿಸಬೇಕೆಂದು
ಪ್ರಾರ್ಥಿಸಿದನು. ಬಸವನು ಮೂರುಲೋಕಕ್ಕೆ ಪ್ರಸಿದ್ಧ
ವೆನಿಸಿದ "ಮೂರೇಣಿನ ಕಂತೆ"ಯ ಕುರುಹನ್ನು ಕುರು
ಬಕುಲಕ್ಕೆ ಕರುಣಿಸಿದನು. (ಮೂರೇಣಿನ ಕಂತೆ
ಎಂಬುದು ಈಗಲೂ ಕುರುಬಕುಲದವರಲ್ಲಿ ಕುರುಹಾಗಿ
ಪ್ರಚುರವಲ್ಲಿದೆ ಇದನ್ನು ಕುರಿಯ ಅಚ್ಚಕರಿಯ
ತುಪ್ಪಟದಿಂದ ತೆಗೆದ ದಾರದಿಂದ ನೆಯ್ದಿರುತ್ತಾರೆ.
ಇದೇ ಮೂರು ಏಣು (ಮೂಲೆ)ಗಳಿಂದ ಕೂಡಿರುತ್ತದೆ.
ಇದನ್ನು ಕುರುಬರ ಕುಲಗುರು ರೇವಣ್ಣಸಿದ್ಧೇಶ್ವರ
ಲಿಂಗದ ಅಡಿಗೆ ಹಾಸಲು ಉಪಯೋಗಿಸುತ್ತಾರೆ. ಈ
ಕಂತೆ ಪವಿತ್ರವಾದುದು) ಅಲ್ಲದ್ದ ಶರಣ ಕಲ್ಲಕೇತಯ್ಯನು
ಯಾರಾದರೂ ಕಾಣವೇದೀರಿ ಎಂದು ಬಸವನು ಶಾಂತ
ಯ್ಯನಿಗಿತ್ತ ಬಿರುದನ್ನ ಕಲ್ಯಾಣದಲ್ಲಿ ಸಾರಿ ಹೇಳಿ
ದನು. "ತಾನು ತಗರ ಪವಾಡ" ವನ್ನು ಮೆರೆದುದಕ್ಕೆ
ಗುರುತಾಗಿ ಶಾಂತಯ್ಯನು ತಗರಿನ ಎರಡು ಕೋಡು
ಗಳನ್ನು ತನ್ನ ಎರಡು ಕೈಗಳಿಂದ ಹಿಡಿದುಕೊಂಡು
ಮೃಪಾಲಯದ ವಜ್ರದ ಕಂಬಕ್ಕೆ ತಾಗಿಸುತ್ತಾನೆ.
ವಜ್ರದ ಕಂಬದಿಂದ ಹೇಮದ ಮಳೆ ಸುರಿಯುತ್ತದೆ.
ತಗರಿನ ಕೊಂಬುಗಳು ಸುತ್ತಿಕೊಳ್ಳುತ್ತವೆ. ಮತ್ತು
ಅದರ ಕೊಂಬುಗಳ ಮೇಲೆ ಶಾಂತಯ್ಯನ ಬೆರಳಿನ ಗುರುತುಗಳು ಬೀಳುತ್ತವೆ. ಹೀಗೆ ಶಾಂತಯ್ಯನು ಕಲ್ಯಾಣದಲ್ಲಿ ಮೆರೆದ ಪವಾಡವು ಎಲ್ಲ ಪವಾಡಗಳಿಗಿಂತಲೂ ಅಧಿಕವಾಯಿತೆಂದು ಜಲ್ಲ ಶರಣರು ನುಡಿದರು. ಕಲ್ಯಾಣದ ಬೀದಿಗಳಲ್ಲಿ ಶಾಂತಯ್ಯನ ಉತ್ಸವವನ್ನು ಮಾಡಿದರು. ಅಲ್ಲಿಂದ ಶಾಂತಯ್ಯನನ್ನು ಬಿಜ್ಜಳನು ಅರಮನೆಗೆ ಉತ್ಸವದಲ್ಲಿ ಬರಮಾಡಿಕೊಂಡು ಉಡುಗೊರೆಗಳನ್ನಿತ್ತು ಗೌರವಿಸುತ್ತಾನೆ.

**ಎಂಟನೆಯ ಸಂಧಿ :—**

ಶಾಂತಯ್ಯನು ಕಲ್ಯಾಣ ಪಟ್ಟಣದಿಂದ ಸರವೂರಿಗೆ ಶರಣರೊಡನೆ ಉತ್ಸವದಲ್ಲಿ ಹೊರಡುತ್ತಾನೆ. ಕಲ್ಯಾಣ ಪಟ್ಟಣದ ಕುರುಬರೆಲ್ಲರೂ ತಮ್ಮ ಬಂಧುಬಳಗಗಳೊಡನೆ ಶಾಂತಯ್ಯನ ಜೊತೆಯಲ್ಲಿ ಸರವೂರಿಗೆ ಹೊರಡುತ್ತಾರೆ. ಅವರೊಡನೆ ಬಸವನೂ ಹೊರಡುತ್ತಾನೆ. ಬಿರುದುಳ್ಳ ಮೇಷನ ಪವಾಡವನ್ನು ಗೆದ್ದು ಬಂದನೆಂಬ ಸುದ್ದಿಯನ್ನು ತಿಳಿದ ಶಾಂತಯ್ಯನ ಹೆಂಡತಿ ದೇವಮ್ಮನು ಅತಿಶಯವಾದ ಆನಂದದಿಂದ ಕೂಡಿದವಳಾಗಿ ಕಳಸ ಕನ್ನಡಿ ಹಿಡಿದು ಬಂದು ಪತಿಯನ್ನು ಸರವೂರಿನ ಸಖಿಯರೊಡನೆ ಸ್ವಾಗತಿಸುತ್ತಾಳೆ. ಪತಿಯೊಡನೆ ಬಂದ ಅಷ್ಟು ಜಂಗಮಕ್ಕೂ ಪಾದಾರ್ಚನೆಗೈದು ಭೋಜನಕ್ಕೆಡೆ ಮಾಡುತ್ತಾಳೆ. ಹಾಲುಮತದವರ ಹಾಲೋಕುಳಿಯಲ್ಲಿ ಸಂತರ್ಪಣೆ ನಡೆಯುತ್ತದೆ. ಶಾಂತಯ್ಯನು ದೇವಮ್ಮನೊಡನೆ ಬಂದಿದ್ದ ಅಷ್ಟು ಜನ ಶರಣರಿಗೂ ತನ್ನ ಶಿಷ್ಯ ಕುರುಬಗೌಡರುಗಳಿಗೂ ಬಸವನ ಸಮ್ಮುಖದಲ್ಲಿ ಉಚಿತವಾದ ಉಡುಗೊರೆಗಳನ್ನು ಅರ್ಪಿಸುತ್ತಾನೆ. ಬಸವನು ಶಾಂತಯ್ಯನನ್ನು ಹರಸಿ ವಿಭೂತಿಯನ್ನಿಟ್ಟು ಕ್ಷೀರಕುಲದವರಿಗೆ ನೀನು ಒಡೆಯನಾಗಿರು ಎಂದು ಹೇಳಿ ಕಲ್ಯಾಣ ಪಟ್ಟಣಕ್ಕೆ ತೆರಳುತ್ತಾನೆ.



# ಶ್ರೀ ಬಸವೇಶ್ವರರು ಮತ್ತು ಸಮಾಜ ಸುಧಾರಣೆ



ಜಾಗತಿಕ ಇತಿಹಾಸದತ್ತ ಒಂದು ಸಲ ದೃಷ್ಟಿಯನ್ನು ಬೀರಿದಾಗ, ನಮಗೆ ಒಂದು ಸಂಗತಿ ನಿಚ್ಚಳವಾಗಿ ಕಂಡು ಬರುತ್ತದೆ. ಮಾನವತೆಯು ಅಜ್ಞಾನ, ಅಹಂಕಾರ, ಅಲ್ಪತೆಗಳಿಗೆ ಒಳಗಾಗಿ, ಹಾದಿಯನ್ನು ತಪ್ಪುತ್ತಿರುವ ಸಂದರ್ಭಗಳಲ್ಲಿ ಕೆಲವು ಮಹಾತ್ಮರು ಜನಿಸಿ, ಮಾನವ ಕಲ್ಯಾಣದ ಹಾದಿಯನ್ನು ತೋರಿಸುತ್ತಾರೆ. ಅಂತಹ ಒಂದು ಸನ್ನಿವೇಶದಲ್ಲಿ ಬಸವಣ್ಣನವರು ಜನ್ಮ ತಳೆದರು. ವಿಶ್ವಧರ್ಮದ ತಿರುಳನ್ನು ತಮ್ಮ ಬಾಳಿನಲ್ಲಿ ಅಳವಡಿಸಿಕೊಂಡು, ಅದನ್ನು ಸರಳವಾಗಿ, ಪರಿಣಾಮಕಾರಿಯಾಗಿ ಜನತೆಗೆ ಬೋಧಿಸಿದರು. ಜನಮನದ ಅಚ್ಚುಮೆಚ್ಚಿನ ಮೂರ್ತಿಯಾಗಿ ನಿಂತುಕೊಂಡು ಅಮರರಾದರು.

ಈಗ ಜಗತ್ತಿನಲ್ಲಿ ಎಲ್ಲೆಡೆಗೆ ಕೇಳಿಬರುವ ಸ್ವಾತಂತ್ರ್ಯ, ಸಮತೆ, ಬಂಧುತ್ವಗಳ ಘೋಷಣೆಯನ್ನು ಬಸವಣ್ಣನವರು ಎಂಟುನೂರು ವರ್ಷಗಳ ಹಿಂದೆಯೇ ಮಾಡಿದರು. ಮತಾಚಾರಗಳ ಜಟಿಲತೆಯಲ್ಲಿ ಸಿಕ್ಕು ತೊಳಲಾಡುತ್ತಿದ್ದ ಮಾನವನಿಗೆ, ಭಕ್ತಿಮಾರ್ಗದ ಕೈದೀವಿಗೆಯನ್ನು ತೋರಿಸಿ ಮಾನವತೆಯ ಸ್ವಾತಂತ್ರ್ಯದ ಸುಲಭ ಮಾರ್ಗವನ್ನು ತೋರಿಸಿದರು. ಭಾವಶುದ್ಧಿಯಿಂದ ಕೂಡಿದ ಭಕ್ತಿಯ ಸಾಧನೆಯಿಂದ ಮಾನವನು ಎಲ್ಲ ಬಂಧನಗಳನ್ನು ಕಳಚಿ ನಿಲ್ಲಬಲ್ಲ ; ಎಂಬುವನ್ನು ತೋರಿಸಿಕೊಟ್ಟರು. ಜನ್ಮ, ವೃತ್ತಿ, ಸಂಸ್ಕಾರಗಳ ಮೂಲಕ ಮಾನವ ಮಾನವರಲ್ಲಿ ಮೇಲು ಕೀಳುಗಳನ್ನು ನಿರ್ಮಿಸಿದ ಅಂದಿನ ಸಾಮಾಜಿಕ ವೈಷಮ್ಯಗಳನ್ನು ತೊಡೆದು ಹಾಕಿದರು. ಸದ್ಭಕ್ತಿ ಸದಾಚಾರಗಳ ತಳಹದಿಯ ಮೇಲೆ ಸಮಾಜದಲ್ಲಿ ಸಮಾನತೆಯನ್ನು ರೂಢಿಗೊಳಿಸಿದರು. ಅದರಿಂದಾಗಿ ಜಾತಿಭೇದ ವೃತ್ತಿ ಭೇದಗಳ ವೈಷಮ್ಯ ಅಳಿಯುವಂತಾಯಿತು. ಶ್ರೀ ಬಸವೇಶ್ವರರು ಕ್ರಿ. ಶ. 1131 ರ ಅಕ್ಷಯ ತೃತೀಯೆಯ ದಿನ ಹುಟ್ಟಿದರು.

ಬಸವಣ್ಣನವರ ತಂದೆ ತಾಯಿ ಮಾದರಸ ಮಾ
ಲಾಂಬಿಕೆಯರಿಗೆ ಶಿವನ ಬಗ್ಗೆ ತುಂಬಾ ಶ್ರದ್ಧೆ. ಬಸವ
ನವರು ಗೃಹತ್ಯಾಗ ಮಾಡಿದ ಸ್ವಲ್ಪ ಕಾಲಾವಧಿಯಲ್ಲಿಯೆ
ಅವರಿಗೆ ತಂದೆ ತಾಯಿಗಳ ವಿಯೋಗವಾದುದು ಅವ
ಯಾವ ಬಂಧನಕ್ಕೂ ಯಾರ ಪ್ರಭಾವಕ್ಕೂ ಒಳಗಾಗ
ಸ್ವತಂತ್ರ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳಲು ಅವಕಾ
ಒದಗಿಸಿ ಕೊಟ್ಟಿತು. ಹೀಗಾಗಿ ಸಮಾಜದ ಪದರು ಪದ
ಗಳನ್ನು ಪರೀಕ್ಷಿಸುವ ಅವರ ಕೆಲಸ ಮುಂದುವರಿಯಿತ
ಸುತ್ತಣ ಜನರ ಸಂಬಂಧ ಧರ್ಮ ತತ್ತ್ವಗಳೇ ಅವ
ಹೆಚ್ಚು ವಿಚಿತ್ರವಾಗಿ ತೋರತೊಡಗಿದವು.

ಬಾಗೇವಾಡಿಯನ್ನು ತೊರೆದು "ಕಪ್ಪಡಿ ಸಂಗಮ"
ತೆರಳಿದರು. ಅಲ್ಲಿ ಅವರಿಗೆ ಈಶಾನ್ಯದೇವನ ಶಿಕ್ಷೆ, ಜಾ
ವೇದ ಮುನಿಯ ದೀಕ್ಷೆ, ಕೂಡಲ ಸಂಗನ ರಕ್ಷೆಗ
ಹೊಸ ಜನ್ಮ ನೀಡಿದವು.

ಬಸವಣ್ಣನವರಿಗೆ ಹೊಸ ಧರ್ಮದಲ್ಲಿ ಶ್ರ
ಮೂಡಿತು. ಸಂಗಮೇಶನಲ್ಲಿ ಭಕ್ತಿ ಭರಿತಗೊಳ್ಳುತ್ತಿ
ಅದರೊಂದಿಗೆ ಈಶಾನ್ಯದೇವರ ಸನ್ನಿಧಿಯಲ್ಲಿ ವ್ಯಾಸ
ದೀರ್ಘ ಚಿಂತನೆಯಾಗಿ ಮಾರ್ಪಟ್ಟಿತು ಈ ವ್ಯಾಸಂಗ
ಫಲವಾಗಿ ಅವರ ವ್ಯಕ್ತಿತ್ವಕ್ಕೆ ಸಮಷ್ಟಿರೂಪ ಮೂ
ಬರಹತ್ತಿತು.

ಕಲ್ಯಾಣದ ಚಾಲುಕ್ಯ ಅರಸರ ಶಕ್ತಿ ಕುಗ್ಗಿ ಕಲಚೂ
ಬಿಜ್ಜಳನು ರಾಜ್ಯಸೂತ್ರ ವಹಿಸಿದ ಕಾಲವದು. ಬಸವ
ನವರ ಸೋದರಮಾವ ಬಲದೇವ, ಬಿಜ್ಜಳನ ಮಂ
ಯಾಗಿದ್ದನು. ಬಲದೇವನ ಮಗಳಾದ ಗಂಗಾಂಬ
ಯನ್ನು ಮದುವೆಯಾದ ಬಸವಣ್ಣ ಕಲ್ಯಾಣಕ್ಕೆ ಬರುವ
ತಾಯಿತು. ಬಸವಣ್ಣನವರ ಪ್ರಭಾವೀ ವ್ಯಕ್ತಿತ್ವವನ
ಗುರುತಿಸಿದ ಬಿಜ್ಜಳ, ಅವರನ್ನು ತನ್ನ ಆಸ್ಥಾನಕ್ಕೆ ಬ

ಪಡೆದುಕೊಂಡನು. ತಮ್ಮ ಬುದ್ಧಿಮತ್ತೆಯಿಂದ ದಕ್ಷತೆಯಿಂದ ಪ್ರಭಾವಶಾಲಿ ವ್ಯಕ್ತಿತ್ವದಿಂದ ಬಸವಣ್ಣನವರು ರಾಜ—ಪ್ರಜೆಗಳ ಗೌರವವನ್ನು ಸಂಪಾದಿಸಿಕೊಂಡರು. ಬಲದೇವನ ಮರಣಾನಂತರ ಬಿಜ್ಜಳನು ಬಸವಣ್ಣನವರನ್ನು ಮಂತ್ರಿಯನ್ನಾಗಿ ನಿಯಮಿಸಿದನು. ಕಲ್ಯಾಣದಲ್ಲಿ ಬಸವಣ್ಣನವರು ಅನುಭವ ಮಂಟಪವನ್ನು ಸ್ಥಾಪಿಸಿ ತನ್ಮೂಲಕ ಜನಜಾಗೃತಿಯ ಪವಿತ್ರ ಕಾರ್ಯವನ್ನು ಕೈಗೊಂಡಿದ್ದರು. ಈ ಅನುಭವ ಮಂಟಪದ ಸ್ಥಾಪನೆಯಿಂದ ಅವರ ಹಿರಿಮೆ ದಿನದಿನಕ್ಕೂ ಹೆಚ್ಚಾಗತೊಡಗಿತು. ಸಂಪ್ರದಾಯ ವಾದಿಗಳು ಸಿಡಿದೆದ್ದರು. ಜಾತಿಮತ ಮೇಲು ಕೀಳು ಭಾವನೆಗಳನ್ನು ಬಸವಣ್ಣನವರು ತೊಡೆದುಹಾಕಲು ಪ್ರಯತ್ನಿಸಿದರು.

ರಾಜ್ಯದ ರಾಜಧಾನಿಯಾದ ಕಲ್ಯಾಣ ಈಗ ಬಸವಣ್ಣನವರ ಭಕ್ತಿ ಆಂದೋಲನಕ್ಕೆ ವಿಶಾಲಕ್ಷೇತ್ರನಾಗಿ ಪರಿಣಮಿಸಿತು. ರಾಜಕೀಯ ಕೌಟುಂಬಿಕ ಜೀವನದೊಂದಿಗೆ ಅವರ ವ್ಯಕ್ತಿತ್ವದ ಸ್ಥಾಯಿಯಾದ ಭಕ್ತಿಯ ಒದುಕೂ ಸರಿಮಿಗಿಲಾಗಿ ಪ್ರವರ್ಧಿಸುತ್ತ ಮುನ್ನಡೆಯಿತು. ಶರಣರ ಬಳಗ ಬೆಳೆದು ತತ್ತ್ವಚಿಂತನ, ಅನುಭಾವ ಮಂಥನಗಳು ಮೂಸ್ತಗೊಂಡವು. ಸಾಮ್ರಾಜ್ಯ ಸಿರಿಯನ್ನುಂಡ ಕಲ್ಯಾಣ ಈಗ ಅನುಭಾವ ಅಮೃತದ ರುಚಿ ನೋಡಲಾರಂಭಿಸಿತು. ಧ್ಯೇಯಪೂರ್ಣವಾಗಿ ಅವರು ನಡೆಸಿದ ಗೋಷ್ಠಿಗಳಿಗೆ ಒಂದು ಕ್ರಮ ಉಂಟಾಯಿತು. ಇದೇ ಶರಣರ ದೃಷ್ಟಿಯಲ್ಲಿ ಅನುಭವ ಮಂಟಪವೆಂಬ ಹೆಸರು ಪಡೆಯಿತು.

ಈ ಅನುಭವಮಂಟಪದಲ್ಲಿ ಗೋಷ್ಠಿ ಇನ್ನೂ ಮುಂದುವರಿದು ನಿತ್ಯ ನಿತ್ಯ ತತ್ತ್ವರತ್ನಗಳು ಹುಟ್ಟ ಹತ್ತಿದವು.

ಅನುಭವಮಂಟಪದ ಈ ಸಾಹಿತ್ಯ ತರಬೇತಿಯಿಂದ ನ್ಮ ವಾಣಿಗೆ ಒಂದು ಸಿದ್ಧಿ ಬರಲು ಶರಣರು ಸ್ವತಂತ್ರ ಾಗಿ ನಿಂತು, ವಚನಗಳನ್ನು ಬರೆಯುವ ಕಾರ್ಯದಲ್ಲಿ ರತರಾದರು. ಈ ವಚನಸಾಹಿತ್ಯ ವಿಶ್ವಸಾಹಿತ್ಯದ ಂದು ವಿಶಿಷ್ಟ ಅಂಗವಾಗಿ ನಿಂತಿದೆ.

ಈ ಅನುಭವ ಮಂಟಪದ ಶೂನ್ಯಸಿಂಹಾಸನವನ್ನು ಮ ಪ್ರಭು ಅಲಂಕರಿಸಿದರು. ಇವರಿಂದ ಬಸವಣ್ಣನವರ ಭಕ್ತಿ, ಚನ್ನಬಸವಣ್ಣನವರ ಜ್ಞಾನಗಳಿಗೆ, ಪ್ರಭುದೇವರ ವೈರಾಗ್ಯವೊಂದು ಜೊತೆಗೂಡಿ ಶರಣರ ಆಂದೋಲನಕ್ಕೆ ಪೂರ್ಣ ಸ್ವರೂಪ ಬಂದಿತು. ಪ್ರಭುವಿನ ಶೂನ್ಯ ಶಕ್ತಿಯ ವರ್ತುಲದಲ್ಲಿ ಶರಣ ಸಮೂಹ ಲಕ್ಷ ನಕ್ಷತ್ರವಾಗಿ ಥಳಥಳಿಸಿತು.

ದೇಶದ ಜನರೆಲ್ಲರೂ ಒಂದಿಲ್ಲೊಂದು ಉದ್ಯೋಗವನ್ನು ಮಾಡಲೇ ಬೇಕೆಂದು ಬಸವಣ್ಣ ಬೋಧಿಸಿದರು. ತಮ್ಮ ತಮ್ಮ ದುಡಿಮೆಯಿಂದಲೇ ತಮ್ಮ ತಮ್ಮ ಜೀವನವನ್ನು ಸಾಗಿಸಬೇಕು. ದುಡಿಮೆಯಲ್ಲಿ ಹಿರಿದು ಕಿರಿದು ಎನ್ನುವ ಭೇದ ಬೇಡವೆಂದರು ; ಕಮ್ಮಾರ ಕಬ್ಬಿಣದ ಕೆಲಸ ಮಾಡಲಿ. ಬಡಗಿ-ಬಡಗಿತನ ಮಾಡಲಿ, ರೈತ-ಭೂಮಿಯನ್ನು ಸಾಗು ಮಾಡಲಿ, ಚರ್ಮಕಾರ ಚಪ್ಪಲಿಯನ್ನೇ ಹೊಲಿಯಲಿ. ಅವರವರ ಕಾಯಕ ಅವರು ಮಾಡಲಿ. ಆದರೆ ಆ ಕಾಯಕದಲ್ಲಿ ಶಿವತ್ವವಿರಲಿ, ಶುಭತ್ವವಿರಲಿ, ಪರಸ್ಪರ ಸಹಕಾರವಿರಲಿ ಎಂದು ಅವರು ಬಯಸಿದರು. ಕಾಯಕದಲ್ಲಿಯ ಶಿವತ್ವ ಶುಭತ್ವ ಸಹಕಾರಗಳು ಸಮಾಜಕ್ಕೆ ಸ್ವಾಸ್ಥ್ಯ ತಂದು ಕೊಡಬಲ್ಲವು ಎಂಬುದನ್ನು ಬಸವಣ್ಣನವರು ಬೋಧಿಸಿದರು. ಅವರ ಈ ಕಾಯಕತತ್ತ್ವವು ಸಮಾಜಕ್ಕೆ ಆರ್ಥಿಕ ಭದ್ರತೆಯನ್ನು ತಂದುಕೊಟ್ಟಿತು.

ಜಾತಿಭೇದ ನಿವಾರಣೆ, ಅಸ್ಪೃಶ್ಯೋದ್ಧಾರ, ಮಹಿಳೆಯರ ಉನ್ನತಿ, ದುಡಿಮೆಯ ಸಾರ" ಎಂಬ ಆಧುನಿಕ ವಿಚಾರ ಪ್ರಣಾಲಿಯನ್ನು ಬಸವಣ್ಣನವರು ಹನ್ನೆರಡನೆಯ ಶತಮಾನದಲ್ಲಿಯೇ ಆಚರಣೆಗೆ ತಂದರು. ಜಾತ್ಯಂಧತೆಯಲ್ಲಿ ಮುಳುಗಿದ್ದ ಆಗಿನ ಸಮಾಜಕ್ಕೆ ಅಸ್ಪೃಶ್ಯತೆಯ ಅಸಹ್ಯತೆಯನ್ನು ಎತ್ತಿತೋರಿಸಿ ಅದನ್ನು ನಿವಾರಣೆ ಮಾಡುವುದರಲ್ಲಿ ಯಶಸ್ವಿಯಾದದ್ದು ಬಸವಣ್ಣನವರ ಸಾಹಸಗಳಲ್ಲಿ ದೊಡ್ಡ ಸಾಹಸವೆಂಬುದನ್ನು ಮರೆಯಲಾಗದು. ಸಾಹಿತ್ಯ ಕ್ಷೇತ್ರದಲ್ಲಿಯೂ ಬಸವಣ್ಣನವರು ಕ್ರಾಂತಿಕಾರರು. ಸಾಹಿತ್ಯವು ಪಂಡಿತರ ಸೊತ್ತಾಗಿ ಸಾಂಪ್ರದಾಯಿಕ ಬಂಧನಕ್ಕೊಳಗಾದರೆ, ಅದು ಸಾಮಾನ್ಯ ಜನತೆಗೆ ಪ್ರಯೋಜನಕಾರಿಯಾಗುವುದಿಲ್ಲ. ಜನತೆಯ ಹೃದಯವನ್ನು ಮುಟ್ಟಿ ಸುಲಭವಾದ ರೀತಿಯಲ್ಲಿ ಅವರ ಮನಬುದ್ಧಿಗಳನ್ನು ಸಂಸ್ಕರಿಸ

ಬಲ್ಲ ಸಾಹಿತ್ಯ ರಚನೆಗೆ ಬಸವಣ್ಣನವರು ಪ್ರೇರಕ ಶಕ್ತಿಯಾಗಿ ಪರಿಣಮಿಸಿದರು ಅವರ ಕಾಲದಲ್ಲಿ ಹಿರಿಯ ವಿಷಯಗಳನ್ನು ಜನತೆಯ ಭಾಷೆಯಲ್ಲಿ ಸರಳವಾಗಿ ಹೃದಯಂಗಮವಾಗಿ ನಿರೂಪಿಸುವ "ವಚನ" ಎಂಬ ಹೊಸ ಸಾಹಿತ್ಯ ಪ್ರಕಾರ ಬೆಳೆದು ಬಂದಿತು. ಇದರಿಂದಾಗಿ ಕನ್ನಡ ಸಾಹಿತ್ಯವಾಹಿನಿ ಹೊಸ ದಿಸೆಯಲ್ಲಿ ಪ್ರವಹಿಸ ತೊಡಗಿತು. ವಚನ ಸಾಹಿತ್ಯದೊಂದಿಗೆ ಹೊಸಯುಗ ಆರಂಭವಾಯಿತು. ನೂರಾರು ವಚನಕಾರರು ವಚನಗಳನ್ನು ರಚಿಸಿದರು. ಬಸವಣ್ಣನವರು ತಮ್ಮ ವಚನಗಳಲ್ಲಿ ಪ್ರಬಲವಾದ ಆತ್ಮಶೋಧನೆಯನ್ನು ನಡೆಸಿದ್ದಾರೆ. ಮೂಢ ರೂಢಿ ಅಜ್ಞಾನ ವೈಷಮ್ಯಗಳನ್ನು ತೀವ್ರವಾಗಿ ಖಂಡಿಸಿದ್ದಾರೆ. ಅಂತರಂಗದ ಶುದ್ಧಿಯನ್ನು ಬೋಧಿಸಿದ್ದಾರೆ. ಆತ್ಮಶ್ರದ್ಧೆಯನ್ನು ಪ್ರಚೋದಿಸಿದ್ದಾರೆ. ದೈವೀ ಕೃಪೆಯನ್ನು ಹಾರೈಸಿದ್ದಾರೆ. ಅವರ ಪೂರ್ತಿ ಸ್ವರೂಪವನ್ನು ಗ್ರಹಿಸಲು ಅವರ ವಚನಗಳು ಉತ್ತಮ ಸಾಧನವಾಗಿವೆ.

ಲೋಕದ ಡೊಂಕನ್ನು ತಿದ್ದಲು ಹೊರಡುವವರಿಗೆ ಬಸವಣ್ಣನವರು ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ, ಎಂದು ಹೇಳಿದರು. ಬಸವಣ್ಣನವರು ಮಾನವ ಸಮಾಜದ ಲೋಪ ದೋಷಗಳನ್ನು ಗುರುತಿಸಿ ಅದನ್ನು ಮೀರಿ ನಿಲುವ ನಿರ್ಧಾರವನ್ನು ಕೈಗೊಂಡರು. "ಕಾಯ ಗುಣಂಗಳ ಕಳೆದವರಿಗೆ ಶರಣೆಂದರು" ಕಾಯದ ಕಪಟ ಮನದ ವಿಕಾರಗಳನ್ನು ಕಳೆಮುಕೊಳ್ಳಲು, ಸಂಸಾರದಲ್ಲಿಯ ಎಡಹು ಗುಳಿಗಳನ್ನು ದಾಟಲು, ಕೂಡಲಸಂಗಮದೇವನ ಬಗೆಗೆ ಅನನ್ಯ ಭಕ್ತಿಯನ್ನು ಅಳವಡಿಸಿಕೊಂಡರು. ಅಂತೆಯೇ ಭಕ್ತಿ ಭಂಡಾರಿಯಾಗಿ ಬೆಳಗಿದರು.

ಬಸವಣ್ಣನವರ ಸಮಕಾಲೀನರಾದ ಅಲ್ಲಮ ಪ್ರಭುದೇವರು

"ಕಲ್ಯಾಣವೆಂಬ ಪ್ರಣತಿಯಲ್ಲಿ
ಭಕ್ತಿರಸವೆಂಬ ತೈಲವನೆರೆದು
ಆಚಾರವೆಂಬ ಬತ್ತಿಗೆ, ಬಸವಣ್ಣ
ನೆಂಬ ಜ್ಯೋತಿಯ ಮುಟ್ಟಿಸಲು
ತೊಳಗಿ ಬೆಳಗುತ್ತಿದ್ದಿತಯ್ಯಾ
ಶಿವನ ಪ್ರಕಾಶ" ಎಂದು ಹೇಳಿದ್ದಾರೆ.

ಬಸವಣ್ಣನವರ ಆತ್ಮವಿಶ್ವಾಸ ಅಚಲವಾದುದು. ಸದಾಚಾರದಲ್ಲಿ ತೊಡಗಿದ ಜೀವನಕ್ಕೆ ಭಯವೆಂಬುದಿಲ್ಲ. ಗಾಂಧೀಜೀ ಬಸವಣ್ಣನವರ ಈ ವಾಕ್ಯವನ್ನು ತಮ್ಮ ಜೀವನದಲ್ಲಿ ಅನುಷ್ಠಾನಕ್ಕೆ ತಂದರು. ಬಸವಣ್ಣನವರ ಈ ಆತ್ಮವಿಶ್ವಾಸಕ್ಕೆ ಅವರ ಈ ವಚನವೇ ಸಾಕ್ಷಿ:

ಆರು ಮುನಿದು ನಮ್ಮನೇನು ಮಾಡುವರು?
ಊರು ಮುನಿದು ನಮ್ಮನೆಂತು ಮಾಡುವುದು?
ನಮ್ಮ ಕುನ್ನಿಗೆ ಕೂಸ ಕೊಡಬೇಡ
ನಮ್ಮ ಸೊಣಗಂಗೆ ತಳಿಗೆಯನಿಕ್ಕಬೇಡ
ಆನೆಯ ಮೇಲೆ ಹೋಹನ ಶ್ವಾನ ಕಚ್ಚಬಲ್ಲುದೆ
ನಮಗೆ ನಮ್ಮ ಕೂಡಲ ಸಂಗಯ್ಯನುಳ್ಳನ್ನಕ್ಕ.

ಇಂತಹ ಆತ್ಮವಿಶ್ವಾಸವನ್ನು ತಾವು ಬೆಳೆಸಿಕೊಂಡರು ಸುತ್ತಣ ಜನತೆಯಲ್ಲಿ ಬೆಳೆಸಿದರು. ವ್ಯಕ್ತಿಗತ ಜೀವನ ಪರಿಶುದ್ಧಿಯನ್ನು ತಾವು ಸಾಧಿಸಿಕೊಂಡು ನಂತ ಉಳಿದವರಿಗೆ ಬೋಧಿಸಿದರು.

ತನುವಿನಲ್ಲಿ ಹುಸಿ ತುಂಬಿ ಮನದೊಳಗೆ ವಿಷ ತುಂಬಿದಾಗ ಹೃದಯಸ್ಥ ಪರಮಾತ್ಮನ ಸಾಕ್ಷಾತ್ಕಾ ಮಾಡಿಕೊಳ್ಳುವುದು ಸಾಧ್ಯವಿಲ್ಲ. ಇದನ್ನು ಬಸ ಣ್ಣನವರು ಅರ್ಥಪತ್ತಾದ ಹೋಲಿಕೆಯೊಂದಿಗೆ ನಿರೂ ಸಿದ್ದಾರೆ. ದೇವನೊಬ್ಬ ಎಂಬುದನ್ನು ಪರಿಣಾಮಕ ಯಾಗಿ

ದೇವನೊಬ್ಬ ನಾಮ ಹಲವು
ಪರಮ ಪತಿವ್ರತೆಗೆ ಗಂಡನೊಬ್ಬ
ಮತ್ತೊಂದಕ್ಕೆರಗಿದರೆ ಕಿವಿ
ಮೂಗು ಕೊಯ್ಯದೆ ಮಾಂಬನೆ?
ಹಲವು ದೈವದ ಎಂಜಲ ತಿಂಬ
ಮರನೇನೆಂಬೆ ಕೂಡಲ ಸಂಗಮ ದೇವಾ—
ಹೀಗೆ ನಿರೂಪಿಸಿದ್ದಾರೆ.

ಮತ ಪಂಥಗಳ ಸಂಕೀರ್ಣತೆಗೆ ಒಳಗಾಗಿ ಜ ತೊಳಲಾಡುತ್ತಿದ್ದಾಗ ಶೀಲ ಹಿಂದೆ ಉಳಿದು ಕುಲ ಮ ಬಂದಾಗ ಬಸವವಾಣಿ ಹೀಗೆ ಮೊಳಗಿತು

ಕೊಲುವವನೇ ಮಾದಿಗ
ಹೊಲಸ ತಿಂಬುವವನೇ ಹೊಲೆಯ
ಕುಲವೇನೋ ಆವಂದಿರ ಕುಲವೇನೋ?

ವಿಶ್ವಧರ್ಮದ ನೀತಿಯ ತಿರುಳು ಬಸವವಾಣಿಗಳಲ್ಲಿ ಸರಳವಾಗಿ ಸುಂದರವಾಗಿ ಮೂಡಿ ಬಂದಿದೆ.

ದಯೆ ಇಲ್ಲದ ಧರ್ಮವದೇವುದಯ್ಯ !
ದಯೆಯೇ ಬೇಕು ಸಕಲ ಪ್ರಾಣಿಗಳೆಲ್ಲರಲಿ
ದಯೆಯೇ ಧರ್ಮದ ಮೂಲವಯ್ಯ

ಎಂದು ಪ್ರಭಾವ ಪೂರ್ಣವಾಗಿ ಧರ್ಮದ ಮೂಲವನ್ನು ಜನತೆಗೆ ಬಿಂಬಿಸಿ ತೋರಿಸಿದ್ದಾರೆ.

ಬಸವಣ್ಣನವರ ವ್ಯಕ್ತಿತ್ವದಲ್ಲಿ ಬುದ್ಧನ ದಯೆ, ಮಹಾವೀರನ ಸರಳತೆ, ಕ್ರೈಸ್ತನ ಅನುಕಂಪ, ಮಹಮದ್ ಪೈಗಂಬರರ ಕೆಚ್ಚು, ಗಾಂಧೀಜಿಯ ಸತ್ಯ, ಅಹಿಂಸೆ, ನಿಷ್ಠೆ ಮೇಳವಿಸಿದೆ. ವಿಶ್ವದ ವಿಭೂತಿಗಳ ಸಾಲಿನಲ್ಲಿ ಬಸವಣ್ಣನವರ ಸ್ಥಾನ ಉನ್ನತವಾಗಿದೆ

### ಸಮಾಜ ಸುಧಾರಣೆ

ಸಮಾಜದ ಘಟಕಗಳಾದ ವ್ಯಕ್ತಿಗಳು ಸರ್ವವಿಧದಿಂದಲೂ ಶೈಕ್ಷಣಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ದೃಷ್ಟಿಯಿಂದ ಬೆಳೆದರೆ ಅದು ಸರ್ವಾಂಗ ಸುಂದರವಾಗುತ್ತದೆ. ಬಸವಣ್ಣನವರದು ಇಂತಹ ಸರ್ವಾಂಗ ಸುಂದರ ಸಮಾಜ ರಚನೆಯ ಯೋಜನೆಯಾಗಿತ್ತು.

ಬಸವೇಶ್ವರರ ದೃಷ್ಟಿಯಲ್ಲಿ ಸಮಾಜವೆಂದರೆ ಜಾತಿ, ಕುಲ, ಧರ್ಮಗಳಲ್ಲ. ಶಿವಭಕ್ತಿಯು "ಸರ್ವಸಮಾನತೆ" ಗೆ ದಾರಿಯೆಂದು ತಿಳಿದು ಶಿವನೊಲಿದವರಿಗೆ, ಶಿವನ ಒಲಿಸಲು ಬಂದ ಶಿವಭಕ್ತರಿಗೆ ಜಾತಿಗಳುಂಟೇ ಎಂದು ಜಾತಿಗಳನ್ನು ಕಿತ್ತೆಸೆದು ನೂತನ ಸಮಾಜವನ್ನು ರಚಿಸುವುದೇ ಅವರ ಗುರಿಯಾಗಿದ್ದಿತು.

ವಿಪ್ರ ಮೊದಲು ಅಂತ್ಯಜ ಕಡೆಯಾಗಿ
ಶಿವಭಕ್ತರನೊಂದೇ ಎಂಬೆ
ಹಾರುವ ಮೊದಲು ಶ್ವಪಚ ಕಡೆಯಾಗಿ
ಭವಿಯಾದವನೊಂದೇ ಎಂಬೆ.

ಎಂಬುದು ಅವರ ನಿಲವು. ಆದರೆ ಕುಲಮೂಲವಾಗಿದ್ದ ಅಂದಿನ ಸಮಾಜಗಳಲ್ಲಿ ಆ ಕುಲಗಳ ಆಧಿಕ್ಯವನ್ನು ಒಪ್ಪಲೇಬೇಕಾಗುತ್ತಿತ್ತು. ಅದರಿಂದಾಗಿ "ವಿಪ್ರ ಮೇಲು", "ಶ್ವಪಚ—ಕೀಳು" ಎಂಬ ಭಾವನೆ ಆಧಿಕವಾಗಿತ್ತು. ಅಂತಹ ಸಮಾಜದಲ್ಲಿ ವರ್ಣಭೇದ, ವೃತ್ತಿಭೇದ, ಲಿಂಗ ಭೇದಗಳನ್ನು ತೊಡೆದು ಹಾಕಿ ಶಿವಭಕ್ತಿ ಸಾಧನೆಯನ್ನು ನೆಲೆಗೊಳಿಸಲು ಅವರು ಶ್ರಮಿಸಿದರು.

ಸ್ತ್ರೀಪುರುಷರೆಲ್ಲರಲ್ಲಿಯೂ ಶಿವಾಂಶನಾದ "ಆತ್ಮ" ನಿರುವುದರಿಂದ ಆತ್ಮನಿಗೆ ಯಾವ ಚಿಹ್ನೆಗಳೂ ಇಲ್ಲದಿರುವುದರಿಂದ ಆತ್ಮವುಳ್ಳವರಲ್ಲಿ ಭೇದವನ್ನರಸಲಾಗದು. ಶಿವಭಕ್ತಿಯ ಸಮನ್ವಯ ಮಾರ್ಗಕ್ಕೆ ಯಾರು ಬೇಕಾದರೂ ಬಂದು ಸೇರಬಹುದು ಎಂಬುದನ್ನವರು ಅರಿವು ಮಾಡಿಕೊಟ್ಟರು.

"ಹೊಲೆಯ" ಎಂಬುದು ಒಂದು ಜಾತಿಯಲ್ಲ, ಅದೊಂದು ಮನೋಧರ್ಮ. ಅದು ಎಲ್ಲ ಸಮಾಜದಲ್ಲಿಯೂ ಕಂಡುಬರುವ ಕಲ್ಮಷ ಇಲ್ಲವೆ ಕಲ್ಪಿಷ ; ಅದು ಅಲ್ಲಿಯೇ ಇದ್ದರೂ ಕೊಳೆಯೇ. ಆದ್ದರಿಂದ ಅಂತಹ ಕೊಳೆ ಪರಿತ್ಯಾಜ್ಯವಾದುದು ಎಂಬುದು ಬಸವಣ್ಣನವರ ಅಭಿಪ್ರಾಯ. ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ

ಹೊರೆಯು ಹೊಲಬಿಗನಾದರೆ
ಆತನ ಹೊರೆಯಲ್ಲಿಪ್ಪುದು ಲೇಸುಕಂಡಯ್ಯ.

ಎಂದು ಆಡಿ ಹೊಲಬಿಗನ ಲೇಸಿನ ಜೀವನದೃಷ್ಟಿ ಯಾರಲ್ಲಿದೆಯೋ ಅವರೆಲ್ಲ ಪೂಜ್ಯರು; ಅವರ ಆಶ್ರಯದಲ್ಲಿ ಬೆಳೆಯುವುದು ಹಿತಕಾರಿ ಎಂಬ ಮಹೋನ್ನತ ಭಾವನೆಯನ್ನು ಪ್ರಚಾರ ಮಾಡಿದರು

ಹಿರಿಯರನ್ನು ಮೇಲುಮಾಡಿ, ಕಿರಿಯರನ್ನು ಕೀಳು ಮಾಡುವ ಪ್ರವೃತ್ತಿಯು ಎಂದಿನಿಂದಲೂ ನಡೆದೇ ಇದೆ. ಆದರೆ ಆ ಹಿರಿಯತನಕ್ಕೆ ಉತ್ತಮಗುಣವೇ ಕಾರಣವೆಂಬುದನ್ನು ಬಸವಣ್ಣನವರು ಸ್ಪಷ್ಟಪಡಿಸಿದರು.

ವ್ಯಕ್ತಿಗಳ ಜೀವನೋದ್ಧಾರವೇ ಮೂಲವಾದ ಉದ್ಯೋಗಗಳನ್ನು, ಎಲ್ಲವನ್ನು ಅಲ್ಲದಿದ್ದರೂ ಕೆಲವನ್ನಾದರೂ ಹೀನವೆಂದು ಪರಿಗಣಿಸುವ ಅನಿಷ್ಟ ಪರಂಪರೆಯು

ಅಂದು ಪ್ರಚಲಿತವಾಗಿದ್ದಿತು. ರಾಷ್ಟ್ರದ ಪ್ರಗತಿಗೇ ಕಾರಣವಾದ ಉದ್ಯೋಗಗಳ ಮಹಿಮೆಯನ್ನು ಎತ್ತಿ ತೋರಿಸುವುದು ಬಸವೇಶ್ವರರ ವಿಚಾರವಾಗಿದ್ದಿತು. ಉದ್ಯೋಗಗಳಲ್ಲಿ ಮೇಲು ಕೀಳು ಎಂಬ ವಿಚಾರವು ಸರಿಯಾದುದಲ್ಲವೆಂದು ತಿಳಿಸುವುದು ಬಸವಣ್ಣನವರ ಧ್ಯೇಯ.

ಸೆಟ್ಟಿಯೆಂದೆಂಬೆನೆ ಸಿರಿಯಾಳನ
ಮಡಿವಾಳನೆಂದೆಂಬೆನೆ ಮಾಚಯ್ಯನ
ಡೋಹಾರನೆಂದೆಂಬೆನೆ ಕಕ್ಕಯ್ಯನ
ಮಾದಾರನೆಂದೆಂಬೆನೆ ಚೆನ್ನಯ್ಯನ
ಆನು ಹಾರುವನೆಂದರೆ ಕೂಡಲ ಸಂಗಯ್ಯ
ನಗುವನಯ್ಯಾ

ಎಂದ ಬಸವಣ್ಣನವರು ಜನತೆಯು ಪ್ರಥಮತಃ ಅವರ ಉದ್ಯೋಗ, ಅವುಗಳಿಂದುದ್ಭವಿಸಿದ ಜಾತಿಗಳನ್ನು ಕಂಡು ಗೌರವಿಸುವ ಅನಿಷ್ಟ ಪದ್ಧತಿಯನ್ನು ಖಂಡಿಸಿ, ಆಯಾಯ ವ್ಯಕ್ತಿಗಳನ್ನು ವ್ಯಕ್ತಿಗಳ ಸಾಧನೆ, ವ್ಯಕ್ತಿಗಳ ಕೃತಿಗಳಿಂದ ಬೆಲೆಕಟ್ಟಬೇಕೆಂದು ತಿಳಿಸಿದರು.

ಕಾಶಿ ಕಮ್ಮಾರನಾದ, ಬೀಸಿ ಮಡಿವಳನಾದ
ಹಾಸನಿಕ್ಕಿ ಸಾಲಿಗನಾದ, ವೇದವನೋದಿ
ಹಾರುವನಾದ

ಎಂದು ಹೇಳುವಲ್ಲಿ ವೇದವನೋದುವುದು ಉದ್ಯೋಗವಾದಂತೆ, ಅದರಂತೆಯೇ ಇತರ ಉದ್ಯೋಗಗಳೂ ಮಾನ್ಯ ಎಂಬ ಅವರ ವಾದ ಹಿರಿದಾದುದು.

ದೇವನ ಒಲುಮೆಗೆ ಪಾತ್ರರಾಗಬೇಕಾದರೆ ವ್ಯಕ್ತಿಗಳು ಈ ಲೋಕದ ಬಾಳನ್ನು—ಬದುಕನ್ನು ಚೆನ್ನಾಗಿ ನಡೆಯಿಸಿಕೊಂಡು ಹೋಗಬೇಕು. ಅಂತಹ ಬದುಕಿಗೆ ನಮ್ಮ ಇಹದ ಬಾಳು ಹಸನಾದುದಾಗಿರಬೇಕು. "ಇಹ ಪರ" ದ ಬಾಳು ಪರಸ್ಪರ ಪೂರಕವಾಗಿವೆ. ಇಹದ ಬದುಕಿನ ನಿರ್ಣಯಕ್ಕೆ ಸಾಮಾಜಿಕವಾಗಿ ಮಾನವನು ಹೇಗೆ ವರ್ತಿಸುವನೆಂಬುದೇ ಮಾರ್ಗದರ್ಶಕ. ಅದ್ದರಿಂದ ಬಸವೇಶ್ವರರು—

ಪುಣ್ಯ ಪಾಪವೆಂಬುದು ತಮ್ಮಿಷ್ಟ ಕಂಡಿರೇ
ಅಯ್ಯಾ ಎಂದರೆ ಸ್ವರ್ಗ
ಎಲವೋ ಎಂದಡೆ ನರಕ.

ದೇವ — ಭಕ್ತ — ಜಯ — ಜೀಯಾ ಎಂಬ ನುಡಿಯೊಳಗೆ ಕೈಲಾಸವನೈದುವದು ಕೂಡಲ ಸಂಗಮದೇವಾ — ಎಂದರು.

ಕೈಲಾಸವನ್ನು ಪಡೆಯುವುದು, ಪುಣ್ಯಗಳಿಸುವುದು ಎಲ್ಲವೂ ಸಾಮಾಜಿಕ ವ್ಯವಹಾರದ ನೀತಿಯನ್ನೇ ಅವಲಂಬಿಸಿದೆ. ಸಮಾಜವನ್ನು ಸುಂದರವಾಗಿ ಮಾಡಿಕೊಳ್ಳಬಲ್ಲ ಶಕ್ತಿಯು ಮಾನವನ ರೀತಿ, ನಡೆಗಳನ್ನೇ ಅವಲಂಬಿಸಿದೆ. ಒಂದೆಡೆ ಅನಾಚಾರ ಮಾಡುವುದು, ಇನ್ನೊಂದೆಡೆ ಸದ್ವಿವೇಕದ ಮಾತನಾಡುವುದು ಯಾವರೀತಿಯಿಂದಲೂ ಹಿ... ವಲ್ಲವೆಂಬುದು ಬಸವೇಶ್ವರರ ಮಾತು. ಅದನ್ನು ಅವರ...

ಎನ್ನ ನಡೆಯೊಂದು ಪರಿ
ಎನ್ನ ನುಡಿಯೊಂದು ಪರಿ

ಎಂದಿದ್ದಾರೆ. ನಡೆಯಂತೆ ನುಡಿಯದಿರುವುದು ನಮ್ಮ ವ್ಯವಹಾರದ ಎಲ್ಲ ತೊಂದರೆಗಳಿಗೂ ಕಾರಣ. ನುಡಿದಂತೆ ನಡೆವ ಗುಣವೊಂದು ಬೆಳೆದು ಬಂದರೆ ನಮ್ಮ ಜೀವನದ ಬಡತನವೆಷ್ಟೋ ಮಟ್ಟಿಗೆ ನಿವಾರಣೆಯಾಗ... ಕಾರಣ ಅದರಿಂದ ದೇವನೊಲುಮೆಯು ಸಾಧ್ಯವೆಂಬು... ಅವರ ನಿಲವು.

### ಸಾಂಘಿಕ ಜೀವನದ ಮಹತ್ವ

ಬಸವೇಶ್ವರರು ಕೈಗೊಂಡ ಸಾಮಾಜಿಕ ಕ್ರಾಂತಿ... ಇನ್ನೊಂದು ಅಂಶವೆಂದರೆ ಸಾಂಘಿಕ ಜೀವನದ ಮಹ... ವನ್ನು ಎತ್ತಿ ತೋರಿಸಿರುವುದು ಬುದ್ಧಿಯಲ್ಲಿ, ಅನುಭ... ದಲ್ಲಿ, ಯೋಗದಲ್ಲಿ ಹಿರಿಯರಾದವರನ್ನೆಲ್ಲ ಒಂದೆಡೆ ... ಹಾಕಿ, ಅವರವರ ಬುದ್ಧಿಶಕ್ತಿಗನುಗುಣವಾಗಿ ಅವರ... ಕಾಯಕ ವಹಿಸಿಕೊಡಲಾಗಿತ್ತು. ವ್ಯಕ್ತಿಗಳ ಹಿರಿಮೆ... ಸಮಾಜಕ್ಕೆ ಹಿರಿಮೆಯನ್ನು ತಂದಿತು. ಹಿರಿಯವ್ಯಕ್ತಿ... ಆದರ್ಶವನ್ನು ಇತರ ವ್ಯಕ್ತಿಗಳು ಅರಿತುಕೊಳ್ಳುವು... ಅವಕಾಶವಾಯಿತು. ಅಂತಹ ಸಂಘಟನೆಗೆ ಕೇ... ಅವರು ಅನುಗೊಳಿಸಿದ್ದ ಅನುಭವ ಮಂಟಪ. ನಾ... ಜನ ವಿಚಾರವಂತರು ಒಂದೆಡೆ ಸೇರಿದರೆ ವಿವೇಚ...

ಕಿಡಿ ಉದಯಿಸುತ್ತದೆ. ಅಂತಹ ಸಾಂಘಿಕ ಜೀವನಗಳ ಛಾಯೆಯು ಶೂನ್ಯ ಸಂಪಾದನೆಯಲ್ಲಿ ಪಡಿಮೂಡಿದೆ. ಅಲ್ಲಿ ಶರಣರು, ಸಂಸಾರಿಗಳು, ರಾಜಕಾರಣಗಳು, ಮುಂತಾಗಿ ಸಮಾಜದ ಎಲ್ಲ ವರ್ಗದ ಜನರೂ ಕಲೆತು ಮಾತನಾಡು ತ್ತಿದ್ದರು. ಶಿವಶರಣರ ಮಾನಸಿಕ, ಬೌದ್ಧಿಕ ನೆಲೆಯನ್ನು ಗುರುತಿಸುವ ಜಾಣ್ಮೆ ಶ್ರೀ ಬಸವೇಶ್ವರರಿಗೆ ಅಧಿಕವಾಗಿದ್ದು ದರಿಂದ ಹಲವಾರು ಉದ್ಯೋಗದ ಜನವೆಲ್ಲ ಯಾವ ಅಂತ ಸ್ತುಗಳ ಅಹಂಕಾರವಿಲ್ಲದೆ ಕೂಡಿ ಬಾಳುವ ಸಮಾಜವನ್ನು ನಿರ್ಮಿಸಲು ಸಾಧ್ಯವಾಯಿತು.

ಹಿಂದುಳಿದವರ ಹಿತಚಿಂತನೆಯಂತೆ, ಬಸವೇಶ್ವರರು ಸ್ತ್ರೀಯರ ಉದ್ಧಾರದ ಬಗ್ಗೆಯೂ ಬಹುವಾಗಿ ಶ್ರಮಿ ಸಿದರು. ಸ್ತ್ರೀಯರಿಗೆ ಧಾರ್ಮಿಕ ಸ್ವಾತಂತ್ರ್ಯವೇ ಇಲ್ಲದೆ ಇದ್ದ ಕಾಲದಲ್ಲಿ ಬಸವೇಶ್ವರರು "ಲಿಂಗ" "ವಯಸ್ಸು" ಗಳ ಭೇದವಿಲ್ಲದೆ ನ್ಯಾಯವಾಗಿ ಸಲ್ಲಬೇಕಾದ ಗೌರವವನ್ನು ಸಲ್ಲಿಸಿದರು.

"ಪರವಧುವ ಮಹಾದೇವಿಯೆಂಬೆ
ಎನ್ನ ಹೆತ್ತ ತಾಯ್ಗಳೆಂಬೆ"

ಎಂದು ಹೇಳಿದ ಅವರು ಸ್ತ್ರೀ ದೇವಿಯೂ ಹೌದು, ಮಾತೆಯೂ ಹೌದು. ಅಂದಮೇಲೆ ಅವರಿಗೆ ಉತ್ತಮ ಸಂಸ್ಕಾರಗಳು ಬೇಡವೇ ?

ಪರಸ್ತ್ರೀ ಪರಧನವೆಂಬ ಜೂಜಿಂಗಂಜುವೆ
ಛಲಬೇಕು ಶರಣಂಗೆ ಪರಸತಿಯನೊಲ್ಲೆನೆಂಬ

ಎಂಬ ಛಲವನ್ನು ತಾಳಬೇಕೆಂದು ಬಸವೇಶ್ವರರು ಬೋಧಿಸಿದರು.

ಪರವಧುವ ನೋಡುವ ಸರಸಬೇಡ
ಕಂಗಳು ತಪ್ಪಿನೋಡಿದರೆ ಮಾರಿ

ಎಂದು ಪರಸ್ತ್ರೀ ವ್ಯಾಮೋಹವು ವ್ಯಕ್ತಿಗೂ ಸಮಾ ಜದ ನೆಮ್ಮದಿಗೂ ಹಾನಿ ಎಂಬುದನ್ನು ಎತ್ತಿ ತೋರಿಸಿ ದರು. ಅಂತಹ ಉತ್ತಮ ಅವಕಾಶವಿದ್ದುದರಿಂದಲೇ ಮಹಾ ದೇವಿಯಕ್ಕ ನಂತಹ ಸ್ತ್ರೀಯು ಅಧ್ಯಾತ್ಮದ ಉನ್ನತ ಹಂತವನ್ನೇರಲು ಸಾಧ್ಯವಾಯಿತು.

ಧಾರ್ಮಿಕ ವಿಧಿವಿಧಾನಗಳಲ್ಲಿ, ಸಾಮಾಜಿಕ ಕಾರ್ಯ ಕ್ಷೇತ್ರಗಳಲ್ಲಿ ಪುರುಷನೊಂದಿಗೆ ಯಾವ ರೀತಿಯಿಂದಲೂ ಸ್ತ್ರೀಯು ಕಡಿಮೆಯಿಲ್ಲವೆಂಬುದನ್ನು ಬಸವೇಶ್ವರರು ಒಪ್ಪಿ ಕೊಂಡುದು ಮಹತ್ವದ ಸಂಗತಿಯೇ ಆಗಿದೆ. ಆದುದರಿಂದ ಸಮಾಜದ ಒಂದು ಪ್ರಮುಖ ವ್ಯಕ್ತಿಯಾದ ಸ್ತ್ರೀಯು ಪುರುಷನಂತೆಯೇ ಆಚಾರ ವಿಚಾರಗಳನ್ನು ಪಡೆಯಬೇಕಾ ದುದು ಅವಶ್ಯಕವೆಂದು ಶಿವಶರಣರು ಒಪ್ಪಿಕೊಂಡರು.

ಭಿನ್ನ ಭಿನ್ನ ಸಮಾಜದವರು ವೀರಶೈವಕ್ಕೆ ಮತಾಂತರ ಹೊಂದಿದಮೇಲೆ ಅವರಲ್ಲಿ ಪೂರ್ವ ಮತದ ಸಂಸ್ಕಾರವು ಉಳಿಯಲೇ ಬಾರದೆಂಬುದು ಬಸವೇಶ್ವರರ ವಿಚಾರಸರಣಿ ಯಾಗಿದ್ದಿತು. ಶಿವನಿಗೆ ಯಾವ ಗೋತ್ರವೂ ಇಲ್ಲ. ಶಿವ ಭಕ್ತರಾದವರಿಗೇಕೆ ಈ ಪೂರ್ವದ ಗೋತ್ರ ಎಂಬ ಕಾರಣ ದಿಂದ ಮೂಲತಃ ಜಾತಿಯಿಂದ ಹೊಲೆಯನಾದ "ಹರ ಳಯ್ಯ" ನೂ ಮತ್ತು ಜಾತಿಯಿಂದ ವಿಪ್ರನಾದ ಮಧುವ ಯ್ಯನೂ ಶಿವಭಕ್ತರಾದ ಮೇಲೆ ಸಮಾನರು. ಅವರಿ ಬ್ಬರೂ ದೇಹ (ರಕ್ತ) ಸಂಬಂಧವನ್ನು ಬೆಳೆಸಿಕೊಳ್ಳುವ ಏರ್ಪಾಟು ಮಾಡಿದ್ದು ಶ್ರೀ ಬಸವೇಶ್ವರರ ಸಾಮಾಜಿಕ ಸುಧಾರಣೆಯಲ್ಲಿಯೇ ಅತ್ಯಂತ ಮಹತ್ವದ್ದು. ಉತ್ತಮ ಮತ್ತು ಅಧಮರೆಂದು ಪರಿಗಣಿಸಿದ ಇಬ್ಬರು ವ್ಯಕ್ತಿಗಳು ಶಿವಭಕ್ತಿಯ ಸಮಾನತೆಯ ಆಧಾರದ ಮೇಲೆ ಮತಾಂತರ ಹೊಂದಿ ತಮ್ಮ ಪೂರ್ವದ್ದನ್ನು ಮರೆತರು.

ಬಸವಣ್ಣನವರು ಕಾಲಕ್ಕೆ ಮತಾಂತರ ಹೊಂದಲು ಎಲ್ಲ ಕುಲಜಾತಿಯವರಿಗೂ ಅವಕಾಶವಿದ್ದಿತು. ಕೆಲವರು ಮತಾಂತರ ಹೊಂದಿದರೂ ತಮ್ಮ ಪೂರ್ವ ಕುಲಾಭಿಮಾನ ವನ್ನು ತೊರೆದಿರಲಿಲ್ಲ. ಅವರನ್ನು ಕಂಡ ಬಸವೇಶ್ವರರು.

ಭಕ್ತರ ಕಂಡರೆ ಬೋಳಪ್ಪಿರಯ್ಯ
ಸವಣರಕಂಡರೆ ಬತ್ತಲೆಯಪ್ಪಿರಯ್ಯ
ಹಾರುವರ ಕಂಡರೆ ಹರಿನಾಮ ವೆಂಬಿರಯ್ಯ
ಅವರವರ ಕಂಡರೆ ಅವರವರಂತೆ,
ಎಂದು ಖಂಡಿಸಿದರು.

ಯಾವುದಾದರೂ ಶುಭಕಾರ್ಯ ಮಾಡಲು ಶುಭದಿನ, ಶುಭವಾರ, ಶುಭನಕ್ಷತ್ರಗಳೇ ಆಗಬೇಕೆಂದು ಪುರೋ

ಹಿತರ ಬಳಿಗೆ ಓಡಿಹೋಗಿ ಮುಹೂರ್ತವನ್ನು ಕೇಳಿಕೊಂಡು ಬರುವವರನ್ನು ಕುರಿತು ಎಲ್ಲದಿನ, ಎಲ್ಲವಾರ, ಎಲ್ಲ ನಕ್ಷತ್ರಗಳೂ ಶುಭವೆಂದು ಹೇಳಿ, ಶಿವನಾಜ್ಞೆಯಿಂದ ನಡೆಯ ಬೇಕಾದುದನ್ನು ತಡೆಯುವವರಾರು? ಹಿರಿಯ ಮಹರ್ಷಿಗಳೇ ಸೇರಿ ಮುಹೂರ್ತವನ್ನು ನಿರ್ಧರಿಸಿ ಮದುವೆ ಮಾಡಿದ ರಾಮ, ನಳ, ಹರಿಶ್ಚಂದ್ರ ಇವರು ರಾಜ್ಯ ತ್ಯಾಗಮಾಡಬೇಕಾಯ್ತು. ದಾಂಪತ್ಯದ ವಿವಾಹವನ್ನು ದುಃಖವನ್ನು ಅನುಭವಿಸಬೇಕಾಯ್ತು ಎಂಬ ಅವರ ಮಾತು ಇಂದಿಗೂ ಮಹತ್ವವಾಗಿದೆ.

ಯಾರೇ ಇರಲಿ ಅವರ ಡಾಂಭಿಕ ಆಚಾರ—ವಿಚಾರ, ಪರರ ಸುಲಿಗೆಗಳನ್ನು ಮನವಾರೆ ತೆಗಳಿದರು. ಕುಲ ಮೂಲದಿಂದೊದಗುವ ಅಹಂಕಾರ, ಸಂಪತ್ತಿನಿಂದೊದಗುವ ಅಹಂಕಾರಗಳನ್ನು ತೆಗಳಿ ಶೀಲಕ್ಕೆ ಅತ್ಯಂತ ಬೆಲೆ ಕೊಟ್ಟರು ಬಸವಣ್ಣನವರು. ಉತ್ತಮ ಶೀಲ ಪಾಲನೆ, ಆಚಾರ ಪಾಲನೆಯನ್ನು ಪ್ರಶಂಸಿಸಿ, ತೋರಿಕೆಯ ಮಡಿಯನ್ನು ದೂರವಿರಿಸಿದರು. ಅಂಧಶ್ರದ್ಧೆಗೆ ಅವಕಾಶ ಕೊಡದಾದರು.

ಹೀಗೆ ಬಸವೇಶ್ವರರ ಸಾಮಾಜಿಕ ಸುಧಾರಣೆಗಳು ಬಹುಮುಖವಾಗಿ ಬೆಳೆದು ಕಾರ್ಯಾಚರಣೆಗೆ ಬಂದವು. ಅವುಗಳನ್ನು ಒಪ್ಪದ ಕೆಲವು ಜನಗಳಿಂದ ಕಾಲಕಾಲಕ್ಕೆ ವಿರೋಧವು ವ್ಯಕ್ತವಾಗುತ್ತಿದ್ದಿತು. ಕೆಲವೆಡೆ ಅವರ ಸುಧಾರಣೆಗಳು ತೀವ್ರಗಾಮಿಯಾಗಿದ್ದುದರಿಂದಲೇ ಅವರನ್ನು "ಕ್ರಾಂತಿಕಾರ" ರೆಂದು ಕರೆದಿರುವುದು ಸಮಂಜಸವಾಗಿದೆ.

**(ಮೈಸೂರು ಸರಕಾರದ ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯವರ ಕೃಪೆ)**

— O —

**ಈ ನಮ್ಮ ಹಿಂದಿನ ಕತೆ........**

ಶಾತವಾಹನರ ಕಾಲದಿಂದ ಮೈಸೂರು ಅರಸರ ಕಾಲದವರೆಗೆ ಕನ್ನಡನಾಡಿನಲ್ಲಿ ಕಾರ್ಷಾಪಣ, ನಿಷ್ಕ, ದ್ರಮ್ಮ, ಸುವರ್ಣ, ಪಣ, ವರಾಹ, ಪ್ರತಾಪ (ಅರ್ಧವರಾಹ) ಎಂಬ ಹೆಸರಿನ ನಾಣ್ಯಗಳು ಪ್ರಚಲಿತದ್ದುವು.

X X X

'ವರಾಹ' ಎಂಬ ಚಿನ್ನದ ನಾಣ್ಯ ಕರ್ನಾಟಕದ ಎಲ್ಲ ಭಾಗದಲ್ಲೂ ಪ್ರಚಲಿತದಲ್ಲಿತ್ತು. ಅದರ ಬೆಲೆ ೪ರೂ. ಅದರ ತೂಕ ಸರಾಸರಿ ೫೨.೭ ಗ್ರೇನ್. ಎಂದರೆ ಸುಮಾರು ೨೬ ಗುಂಜಿ. ಈಗಲೂ ಹಳ್ಳಿಗಳಲ್ಲಿ ವರಹ ಎಂದರೆ ೪ ರೂ.

X X X

ಗುಂಜಿಯೆಂದರೆ ಒಂದು 'ಗುಲಗಂಜಿ' ಅದೇ ಚಿನ್ನ ಬೆಳ್ಳಿಯ ತೂಕದ ಮೂಲ ವಸ್ತು—ಅನಂತರ 'ಮಾಸಿ' 'ತೊಲ' ಎಂಬುವು.

—ಆಧಾರದಿಂದ

**1936—38ರವರೆಗೆ ನಮ್ಮಲ್ಲಿ ಜೀವನಾವಶ್ಯಕ ವಸ್ತುಗಳ ಬೆಲೆ ಹೇಗಿತ್ತು ಗೊತ್ತೆ ?**

(ಸಾಮಾನ್ಯವಾಗಿ)

೩ರಿಂದ ೪ ರೂಪಾಯಿಗೆ ೧ ಚೀಲ ಬತ್ತ.
೮ ರಿಂದ ೧೦" ೧ ಚೀಲ ಅಕ್ಕಿ.
೩—೩ ೧/೨—೪ರೂಪಾಯಿಗೆ ೧ ಚೀಲ ಜೋಳ.
೨ ೧/೨—೩ ರೂಪಾಯಿಗೆ ೧ ಚೀಲ ರಾಗಿ.
೧ಆಣೆಗೆ ೨೦ತೊಲ ಅಡಿಕೆ.
೩ಕಾಸಿಗೆ ೨ ಸೇರು ಪುರಿ.
೩ಕಾಸಿಗೆ ೨೦೦ ವೀಳ್ಯದೆಲೆ.
೩ಕಾಸಿಗೆ ೨ ಸೇರು ಬೆಲ್ಲ.
೩ಕಾಸಿಗೆ ೨ ಸೇರು ಹುಣಿಸೆಹಣ್ಣು.
೯—೧೦ ರೂಪಾಯಿಗಳಿಗೆ ಒಂದು ಒಳ್ಳೆಯ ಹಸು.
೨೦—೨೫ ರೂಪಾಯಿಗೆ ವ್ಯವಸಾಯಯೋಗ್ಯ ಎತ್ತು
೨ಆಣೆಗೆ ೧ ಸೇರು ಶುದ್ಧ ಹಾಲು.
೨ಆಣೆಗೆ ೨೦ ತೊಲ ಬೆಣ್ಣೆ.

# ಔಷಧ ಸೇವನೆ ಹೊಸರೋಗಗಳನ್ನು ಕೊಂಡಂತೆಯೇ ?

ಎಚ್. ಹನುಮಂತರಾಯ.

ಪ್ರಾಕೃತಿಕ ಚಿಕಿತ್ಸೆಯು ಔಷಧ, ಚುಚ್ಚುಮದ್ದುಗಳ ಚಿಕಿತ್ಸೆಗಿಂತ ಶ್ರೇಷ್ಠವಾದುದೆಂದು ಹಲಕೆಲವು ತಜ್ಞರ ಅಭಿಪ್ರಾಯ. ರೋಗ ಬಂದ ಮೇಲೆ ಚಿಕಿತ್ಸೆಯಿಂದ ಗುಣಮುಖರಾಗಲು ಯತ್ನಿಸುವುದಕ್ಕಿಂತ ಬರದಂತೆಯೇ ನೋಡಿಕೊಳ್ಳುವುದು ಉತ್ತಮ. ಅನಿವಾರ್ಯ ಸಂದರ್ಭಗಳಲ್ಲಿ ಔಷಧದ ಪ್ರಯೋಜನ ಆದರೂ ಆದೀತು. ಈ ಬಗೆಗೆ ಪ್ರಕೃತ ಲೇಖಕರು ಹಲವಾರು ಆಧಾರಗಳ ಮೇಲೆ ಲೇಖನ ಬರೆದಿದ್ದಾರೆ--

—ಸಂ.

ಭಾಗ್ಯಗಳಲ್ಲೆಲ್ಲಾ ಆರೋಗ್ಯ ಭಾಗ್ಯವೇ ಭಾಗ್ಯ. ಈ ಭಾಗ್ಯವು ಯಾರಿಗೆ ಬೇಕು ? ಯಾರಿಗೆ ಬೇಡ ? ಅನಾಯಾಸವಾಗಿ ತಾನೇತಾನಾಗಿ ಬಯಸಿದ ಹಾಗೆ ಬರುವುದಾದರೆ ಎಲ್ಲರಿಗೂ ಬೇಕು. ಅದಕ್ಕಾಗಿ ಮೈ, ಮನ ದಣಿಯುವುದು ಬೇಡ.

"ಪುಣ್ಯಸ್ಯ ಫಲಮಿಚ್ಛಂತಿ ಪುಣ್ಯಂ ನೇಚ್ಛಂತಿ ಮಾನವಾ"
ಫಲಂನೇಚ್ಛಂತಿ ಪಾಪಸ್ಯ ಸರ್ವೇ ಪಾಪಾನಿಕುರ್ವ

ಪುಣ್ಯದ ಫಲ ಎಲ್ಲರಿಗೂ ಬೇಕು ; ಪುಣ್ಯ ಬೇಕಿಲ್ಲ. ಪಾಪದ ಫಲ ಬೇಕಿಲ್ಲ. ಆದರೆ ಎಲ್ಲರೂ ಪಾಪಕಾರ್ಯಗಳನ್ನೇ ಮಾಡುತ್ತಾರೆ. ಹಾಗೆಯೇ ಆರೋಗ್ಯ ಬೇಕು. ಆಚಾರ, ಶೀಲಗಳು ಬೇಕಿಲ್ಲ ಪ್ರಕೃತಿಯನ್ನು ಮೀರಿ ನಡೆಯಲು ತಯಾರಿರುತ್ತಾರೆ. ಅದರಿಂದ ದೊರೆಯುವ ಪ್ರತಿಫಲ ಬೇಕಿಲ್ಲ. ಜನ ತಿಳಿದುಕೊಂಡಿದ್ದಾರೆ. ಐಶ್ವರ್ಯ ಬೇಕು; ಹಣವೊಂದಿದ್ದರೆ ಏನನ್ನು ಬೇಕಾದರೂ ಪಡೆಯಬಹುದೆಂದು. ನಿಜವಾಗಿಯೂ ಹಣದಿಂದ ನಿಜವಾದ ಆರೋಗ್ಯವನ್ನು ಸಂಪಾದಿಸಲಾಗುವುದಿಲ್ಲ. ಆರೋಗ್ಯವಿದ್ದರೆ ಏನನ್ನು ಬೇಕಾದರೂ ಸಾಧಿಸಬಹುದು. ಎಷ್ಟು ಸಲ ಬೇಕಾದರೂ ಹಿಮಾಲಯ ಪರ್ವತವನ್ನು ಹತ್ತಬಹುದು, ಇಳಿಯಬಹುದು. ಆಕಾಶದಲ್ಲಿ ಪಕ್ಷಿಯಂತೆ ಹಾರಾಡಬಹುದು; ಬಯಸಿದಷ್ಟು ಐಶ್ವರ್ಯವನ್ನು ಗಳಿಸಬಹುದು; ಮೃತ್ಯುವನ್ನು ಭೀಷ್ಮಾದಿಗಳಂತೆ ಹತೋಟಿಯಲ್ಲಿಟ್ಟುಕೊಳ್ಳಬಹುದು. ಹಣವೇ ಸರ್ವ ಸಂಪದಕ್ಕೆ ಮೂಲ ಎನ್ನುವುದಾದರೆ ಕೆಳಗಿನ ವೈದ್ಯರ ಅಭಿಪ್ರಾಯದಿಂದ ಅದು ಹುಚ್ಚುತನವೆಂದು ತೋರುತ್ತದೆ.

ನಮ್ಮ ಪೂರ್ವಿಕರೂ ಸಹ ಇದೇ ಮಾತುಗಳನ್ನು ಹಾಡಿದ್ದಾರೆ. ರೋಗವನ್ನು ಸಂಪಾದಿಸಿಕೊಂಡು ವೈದ್ಯರಿಗೆ ಶರಣಾಗಬೇಡಿ ಅದರಿಂದ ಪ್ರಾಣವೂ ಹೋಗುತ್ತದೆ ಸಂಪತ್ತೂ ಹೋಗುತ್ತದೆ. ವೈದ್ಯರಾಜ ನಮಸ್ತುಭ್ಯಂ ಯಮರಾಜ ಸಹೋದರಃ ॥ ಯಮರಾಜಸ್ತು ಹರತಿ ಪ್ರಾಣಾನ್ ವೈದ್ಯರಾಜೋ ಧನಾನಿಚ॥ ಎಂದು ವೈದ್ಯರಾಜನಿಗೆನಮಸ್ಕಾರ ಹೊಡೆದಿರುವುದು ಕುಹಕವಲ್ಲ. ಈ ವೈದ್ಯರ ಅಭಿಪ್ರಾಯಗಳನ್ನು ಓದಿ ನೋಡಿದರೆ ಇವು ಸತ್ಯ ಎನ್ನಿಸದೆ ಇರದು.

ಡಾ॥ ಹೆಚ್. ಎಫ್. ಮಾಡ್‌ಲಾಕ್ಸ್—"ಪ್ರಕೃತಿಯ ನಿಯಮವನ್ನು ಮೀರಿ ನಡೆಯುವುದರಿಂದ ಮನುಷ್ಯನು ಯಾವ ಶಿಕ್ಷೆಯನ್ನು ಹೊಂದಬೇಕಾಗುತ್ತದೆಯೋ ಅದೇ ರೋಗವು"

ಡಾ॥ ರಾಬರ್ಟ್ ಸರ್‌ರವರು—"ರೋಗ ನಾಶಕ್ಕೆ ನಾವು ಈಗ ಔಷಧಿ ಕೊಡುತ್ತಿರುವಂತಹ ಹುಚ್ಚುತನವು ಪ್ರಪಂಚದಲ್ಲಿ ಇನ್ನಾವುದೂ ಇಲ್ಲ."

ಡಾ॥ ಟ್ರಾಲ್‌ರವರು–"ಔಷಧಿಯ ಸೇವನೆಯಿಂದಲೇ ಬೇರೆ ಬೇರೆ ರೋಗಗಳುಂಟಾಗುತ್ತವೆ. ಆದುದರಿಂದ ಔಷಧಿಯನ್ನು ಕೊಡುವುದು ಅನೇಕ ಹೊಸ ರೋಗಗಳನ್ನುಂಟು ಮಾಡುವಂತೆಯೇ ಸರಿ."

ಡಾ|| ಬೇಕರ್—"ಜ್ವರದಿಂದ ಎಷ್ಟು ಜನರು ಸಾಯತ್ತಾರೋ ಅದಕ್ಕಿಂತಲೂ ಎಷ್ಟೊ ಹೆಚ್ಚು ರೋಗಿಗಳು ಅವರ ರೋಗಕ್ಕೆ ಕೊಡುವ ಔಷಧಿಯಿಂದಲೇ ಮರಣ ಹೊಂದುತ್ತಾರೆ.

ಡಾ|| ಫೋಜವೆಲ್—"ಈಗಿರುವ ವೈದರೆಲ್ಲಾ ಇಲ್ಲದಂತಾದರೆ ಮನುಷ್ಯ ಜಾತಿಗೆ ಅತ್ಯಂತ ಪ್ರಯೋಜನವಾಗುವುದು."

ಡಾ|| ಫ್ರಾಂಕ್—"ವೈದಾಲಯಗಳ ಮೂಲಕ ಸಹಸ್ರಾವಧಿ ಜನಗಳ ಕೊಲೆಯಾಗುತ್ತಲಿದೆ."

ಡಾ|| ಮೆಸರ್ ಗುಡ್—"ಯುದ್ಧ, ಪ್ಲೇಗು ಮತ್ತು ಕ್ಷಾಮ ಇವುಗಳಿಂದ ಎಷ್ಟು ಜನರು ಮೃತಪಡುತ್ತಾರೆಯೋ ಅದಕ್ಕಿಂತಲೂ ಎಷ್ಟೋ ಪಟ್ಟು ಹೆಚ್ಚು ಜನಗಳನ್ನು ಔಷಧಿಯು ಕೊಲ್ಲುತ್ತಾಯಿದೆ."

ಡಾ|| ಎವ್ಸ್‌ರವರು—"ಔಷಧಿಯನ್ನು ತೆಗೆದುಕೊಂಡು ಗುಣ ಹೊಂದದೆ ಮೃತಪಟ್ಟ ರೋಗಿಗಳ ದೇಹವನ್ನು ಕೊಯ್ದು ಪರೀಕ್ಷಿಸಿ ಔಷಧಿಯಿಂದಾದ ನಾನಾ ಅನರ್ಥಗಳನ್ನು ನೋಡಿ ಅಂದಿನಿಂದ ಔಷಧ ಕೊಡುವುದನ್ನೇ ಬಿಟ್ಟು ಪ್ರಾಕೃತಿಕ ಚಿಕಿತ್ಸೆಯನ್ನು ಮಾಡಲುಪಕ್ರಮಿಸಿದೆನು ಈ ಚಿಕಿತ್ಸೆಯಿಂದ ಒಬ್ಬ ರೋಗಿಯೂ ಸಾಯಲಿಲ್ಲ"

18ನೆಯ ಶತಮಾನದಲ್ಲಿದ್ದ "ಹೋಮಿಯೋಪತಿ" ಜನಕರಾದ ಡಾ|| ಹಾನೆಮನ್ ಎಂ. ಡಿ. ಅವರು ತಾವು ಚಿಕಿತ್ಸೆ ಮಾಡಿದ ವ್ಯಕ್ತಿಗಳು ಕೆಲವು ದಿನಗಳ ಮೇಲೆ ಬೇರೊಂದು ಉಪದ್ರವಗಳಿಗೆ ತುತ್ತಾಗುತ್ತಿದ್ದುದನ್ನು ಕಂಡು ಆ ಪದ್ಧತಿಯನ್ನು ಬಿಟ್ಟು ಬೇರೆ ಪದ್ಧತಿಯನ್ನು ಕಂಡು ಹಿಡಿದರು. ತನ್ಮೂಲಕ ಜಗದ್ವಿಖ್ಯಾತರಾದರು. ಡಾ|| ಎವ್ಸ್ ಮೊದಲಾದವರು ಎಲ್ಲ ವೈದ್ಯಕ್ರಮವನ್ನೂ ತ್ಯಜಿಸಿ ಪ್ರಾಕೃತಿಕ ಚಿಕಿತ್ಸಾಕ್ರಮವನ್ನು ಅನುಸರಿಸಿದರು. ಗಾಂಧೀಜಿಯವರೂ ಪ್ರಕೃತಿಚಿಕಿತ್ಸೆಯನ್ನೇ ಹೆಚ್ಚಾಗಿ ಮಾಡಿಕೊಳ್ಳುತ್ತಿದ್ದರೆಂದು ಓದಿದ್ದೇವೆ.

ಮೇಲ್ಕಂಡ ಅಭಿಪ್ರಾಯಗಳನ್ನೂ ನಮ್ಮ ಅನುಭವ-ಗಳನ್ನು ಮೆಲುಕು ಹಾಕಿ ನೋಡಿದರೆ ಬಡತನ ಬಂದರೂ ಬರಲಿ ರೋಗ ಮಾತ್ರ ಬರುವುದು ಬೇಡ ಅನಿಸುತ್ತದೆ ನಿಯಮವನ್ನು ಮೀರಿ ಅದಕ್ಕೆ ವಿರುದ್ಧವಾಗಿ ನಡೆದು ಭಯ-ಕರ ರೋಗಳಿಗೆ ತುತ್ತಾಗಿ ನಾವು ವ್ಯಥೆಪಡುವುದಲ್ಲದೆ ಮ-ಮಕ್ಕಳಿಗೂ ರೋಗ ಬರಿಸುವದಕ್ಕಿಂತ ಮತ್ತು ಗಳಿಸಿ-ಹಣವನ್ನೆಲ್ಲಾ ಪ್ರಾಣದ ಮೇಲಣ ಆಸೆಯಿಂದ ವೈದ್ಯರಿ-ಕೊಟ್ಟು ಪ್ರಾಣದ ಜೊತೆಗೆ ಹಣವನ್ನೂ ಕಳೆದುಕೊಂಡ-ಆಶ್ರಿತರನ್ನು ಕಡುಕಷ್ಟದಲ್ಲಿ ಮುಳುಗಿಸುವುದಕ್ಕಿಂ-ಆರೋಗ್ಯವನ್ನು ಕಾಪಾಡಿಕೊಂಡು ಬರುವುದೇ ಒಂದ-ಸ್ವರ್ಗ.

ಈ ಅಭಿಪ್ರಾಯವನ್ನು ಮನಗಂಡ ನಮ್ಮ ಪೂರ್ವಿಕರ-ಒಬ್ಬನಾದ ವಾಗ್ಭಟನು ಮನುಷ್ಯನು ಸದಾ ಕಾ-ಆರೋಗ್ಯದಿಂದಿರ ಬೇಕಾದರೆ ಮಾಡಬೇಕಾದ ನಿಯ-ಗಳನ್ನು ಸುಂದರವಾಗಿ ಚಿತ್ರಿಸಿದ್ದಾನೆ. ಇದರಿಂದ ಒಂ-ಕಾಸೂ ಖರ್ಚಾಗುವುದಿಲ್ಲ. ಆದಾಯ ಹೆಚ್ಚುವು-ಜೊತೆಗೆ ಭೀಮಕಾಯರಾಗಬಹುದು.

"ನಿತ್ಯಂ ಹಿತಾಹಾರ ವಿಹಾರ ಸೇವೀ ಸಮೀಕ್ಷ್ಯಕಾ-
ವಿಷಯೇಷ್ವಸಕ್ತಃ । ದಾತಾಸಮಃ ಸತ್ಯಪರಃ ಕ್ಷಮ-
ವಾನಾಪ್ತೋಪ ಸೇವೀಚ ಭವತ್ಯರೋಗಃ|| —

ಯಾರು ಹಿತವಾದ ಮಿತವಾದ ಆಹಾರ ವಿಹಾರಗಳ-ಳ್ಳವರೋ ಯಾರು ವಿಚಾರ ಪರರೋ ಯಾರು ವಿಷ-ಸುಖಗಳಿಂದ ಅಲಿಪ್ತರೋ ಯಾರು ದಾನಧರ್ಮಗ-ಆಸಕ್ತರೋ ಯಾರು ಸತ್ಯಸಂಧರೋ, ಯಾರು ಕ್ಷಮ-ಗುಣವುಳ್ಳವರೋ ಯಾರು ಆಪ್ತೇಷ್ಟರ ಹಿತಚಿಂತಕರ-ಅಂತಹವರು ನಿರೋಗಿಗಳಾಗಿ ಬಾಳಬಲ್ಲರು.

ಈ ಕ್ರಮದಿಂದ ದೇಹ ದೃಢಗೊಂಡು, ದುಡಿಮೆ ಹ-ಸುಖಸಂಪತ್ತುಗಳು ವೃದ್ಧಿಯಾಗುವುದರಲ್ಲಿ ಸಂಶಯವಿಲ್ಲ

# ಕ್ರಾಂತಿ ವೀರ ಬಸವಣ್ಣ

ಜಯ ಕಲ್ಯಾಣದ ಕ್ರಾಂತಿಯ ವೀರ
ಜಯ ಜಯ ಮಹಿಮಾಕರ ಬಸವೇಶ್ವರ ॥ ಪ ॥

೧

ವೀರಶೈವ ಸಮಯಾಂಬುಧಿ ಸೋಮ
ಸಾರತರದ ತವ ಮಂಗಳ ನಾಮ
ಸೂರಿಜನಂಗಳ ಮನಕತಿ ಪ್ರೇಮ
ಕಾರಣ ಪುರುಷೋತ್ತಮ ಗುಣಧಾಮ

೨

ಕನ್ನಡ ನಾಡಿನ ನವದಿನ ಮಣಿಯೆ
ಕನ್ನಡ ನಾಡಿನ ಭಾಗ್ಯದ ಕಣಿಯೆ
ಕನ್ನಡ ನುಡಿಯುದ್ಧರಿಸಿದ ದಣಿಯೆ
ಕನ್ನಡ ಕವಿ ಜನಗಳ ಕಣ್ಮಣಿಯೆ

೩

ಕನ್ನಡ ಜನಪದದೇಕೀಕರಣ
ಕನ್ನಡ ಮಾತೆಯ ಕೀರ್ತಿಯಗಾನ
ಕನ್ನಡ ಜನ ನಾವೆಂಬುವ ಜ್ಞಾನ
ನಿನ್ನಿಂದಾದುದು ಪರಶಿವ ಶರಣ

೪

ಪರಮ ರಾಜಕಾರಣ ಪಟುವಾಗಿ
ನೆರೆಸಮಾಜದ ಸುಧಾರಕನಾಗಿ
ಪರಿಪರಿ ಕಾಯಕಗಳ ನೆಲೆ ನಾಗಿ
ಉರುತರದಾ ಸತ್ಯಾಗ್ರಹಿಯಾಗಿ
ನರನಿಗೆ ನರ, ಗುರುವಿಗೆ ಗುರುವಾಗಿ
ಮೆರೆದೆಯಲ್ತೆ ನಾಡಿನ ಸಲುವಾಗಿ

೫

ಕುಮತಂಗಳ ದರ್ಪವ ಕತ್ತರಿಸಿ
ಸಮತಾವಾದದ ಮಂತ್ರವ ಜಪಿಸಿ
ಮಮತೆಯಿಂದ ಪತಿತರನುದ್ಧರಿಸಿ
ವಿಮಲ ಯಶವ ಪೊಂದಿದೆಯವತರಿಸಿ

೬

ಭಾರತದಲಿ ಪುನರಪಿ ಅವತರಿಸು
ಭಾರತ ಮಾತೆಯ ಪುತ್ರರ ಹರಸು
ಭಾರತದಾ ಸ್ವಾತಂತ್ರ್ಯವ ಹರಸು
ಭಾರತವನು ಭೂಸ್ವರ್ಗವ ಗೈಸು

—ಪಂಡಿತ ಹೆಚ್. ಎಂ. ರಾಮಾರಾಧ್ಯ

# ವೀರಶೈವ ಸಾಹಿತ್ಯದ ನಿರ್ಮಾಣ ಮಹಾಮೇರು (ಪಾಲ್ಕುರಿಕೆ ಸೋಮನಾಥ)

ಕನ್ನಡ ಮತ್ತು ತೆಲುಗು ಭಾಷೆಗಳೆರಡರಲ್ಲಿ ಉದ್ದಾಮ ಪಾಂಡಿತ್ಯ ಪ್ರತಿಭೆಗಳನ್ನೊಳಗೊಂಡು ವೀರಶೈವ ಸಾಹಿತ್ಯ ಗ್ರಂಥನಿರ್ಮಾಣವನ್ನೂ ಎರಡೂ ಭಾಷೆಗಳಲ್ಲಿ ಮಾಡಿ ವೀರಶೈವ ಪ್ರಪಂಚದಿಂದ ವಿಶೇಷಮನ್ನಣೆ ಪಡೆದ ಕವಿಯೆಂದರೆ ಪಾಲ್ಕುರಿಕೆ ಸೋಮನಾಥನು ಕ್ರಿ.ಶ.೧೧೯೫ರ ಕಾಲದಲ್ಲಿ ಈತನು ಜೀವಿಸಿದ್ದನೆಂಬ ಬಗ್ಗೆ ಅನೇಕ ವಿದ್ವಾಂಸರು ತರ್ಕಿಸಿದ್ದಾರೆ. ಈತನು ಗೋದಾವರಿ ಜಿಲ್ಲೆಯಲ್ಲಿರುವ ಪಾಲ್ಕುರಿಕೆಯವನೆಂದೂ, ತುಮಕೂರು ಜಿಲ್ಲೆಯಲ್ಲಿರುವ ಹಾಲುಕುರಿಕೆಯವನೆಂದೂ ಹೇಳುವ ವಿದ್ವಾಂಸರನೇಕರ ಅಭಿಪ್ರಾಯವಲ್ಲ ಒಮ್ಮತ ತಪ್ಪಿದೆ. ಆದರೂ ತುಮಕೂರು ಜಿಲ್ಲೆಯಲ್ಲಿರುವ 'ಹಾಲುಕುರಿಕೆ' ಎಂಬ ಗ್ರಾಮವೇ ಸೋಮನಾಥನ ಊರಾಗಿತ್ತೆಂದು ಈಗ ಸಿಕ್ಕಿರುವ ಅನೇಕ ಆಧಾರಗಳಮೇಲಿಂದ ನಿರ್ಧರಿಸಲಾಗಿದೆ. ಈಗ್ರಾಮವು ಕರ್ನಾಟಕಕ್ಕೂ ಆಂಧ್ರಕ್ಕೂ ಮೇರೆಯಾಗಿರುವ ಸ್ಥಳದಲ್ಲಿದೆ. ಇಲ್ಲಿ ಸೋಮನಾಥನ ದೇವಾಲಯವೂ ಉಂಟು. ಪಾಲ್ಕುರಿಕೆ ಇದ್ದ ಪ್ರದೇಶವು ವೀರಶೈವೇತಿಹಾಸದಲ್ಲಿ ಯಾವಾಗಲೂ ಪ್ರಸಿದ್ಧವಾಗಿದೆ, ಈ ಪ್ರದೇಶದಲ್ಲಿ ಆಂಧ್ರದ ಸುಪ್ರಸಿದ್ಧ ಕವಿ ವೇಮನಾರಾಧ್ಯ, ಕವಿತೆ ತಿಮ್ಮವ್ವೆ, ಬಿಜ್ಜಾವರದಮ್ಮವ್ವೆ ಮೊದಲಾದವರು ಪ್ರಸಿದ್ಧರಾಗಿದ್ದಾರೆ. ಇವರೆಲ್ಲ ಬಸವೇಶ್ವರನ ಸಮಕಾಲೀನರು. ಸೋಮನಾಥನುಉದಯವಾಗುವ ಕಾಲದಲ್ಲಿ ಈ ಭಾಗವು ಗಣಪುರ ಎಂಬ ಗ್ರಾಮದ ಅರಸನ ಅಧೀನದಲ್ಲಿತ್ತು. ಈ ಅರಸನ ಹೆಸರು ಜಗದೇಕಮಲ್ಲ ಎಂದು ಈ ಗಣಪುರವೆಂಬುದು ಯಾವುದೆಂಬ ಬಗ್ಗೆ ತಿಳಿದುಬಂದಿಲ್ಲ.

## ಕವಿಯ ತಂದೆ ತಾಯಿ ಬಾಲ್ಯ

ಪಾಲ್ಕುರಿಕೆ ಗ್ರಾಮದಲ್ಲಿ ಕ್ರಿ.ಶ.೧೧೯೦ರ ಸುಮಾರಿನಲ್ಲಿ ವಾಸಿಸುತ್ತಿದ್ದ ರಾಮದೇವಯ್ಯ ಮಹಾದೇವಿಯಮ್ಮ ಎಂಬ ಪುಣ್ಯದಂಪತಿಗಳ ಗರ್ಭದಲ್ಲಿ ಸೋಮನಾಥನು ಹುಟ್ಟಿದನು. ಅವರು ಸೋಮನಾಥ ಲಿಂಗನ ದಯೆಯಿಂದ ಈ ಪುತ್ರನನ್ನು ಪಡೆದದ್ದರಿಂದ ಇವನಿ[ಗೆ] ಸೋಮನಾಥನೆಂದೇ ಹೆಸರಿಟ್ಟರು. ಇದೇ ಊರಿನಲ್ಲಿ ಇವನಿಗಿಂತ ಹಿಂದೆ ವೇಮನಾರಾಧ್ಯನು ವಾಸಿಸುತ್ತಿದ್ದ ಪ್ರಸಿದ್ಧ ಶಿವಾನುಭವಿಯೂ ಕವಿಯು ಎನಿಸಿದ್ದಾನೆ. ವೇಮನಾರಾಧ್ಯನ ಮೊಮ್ಮಗನೂ ಶಿವಾನುಭವಿಯೂ ಆದ ಚತುರ್ಮುಖ ಬಸವ ಅಥವ ಬಸವೇಶನೆಂಬುವನ[ು] ಸೋಮನಾಥನಿಗೆ ವೀರಶೈವ ದೀಕ್ಷೆಯನ್ನಿತ್ತನು. ಮತ್ತು ಗುರುವೂ ಆದನು. ಇವನ ನಿರ್ದೇಶನದಲ್ಲಿ ಶೈವಾಗಮಗಳು, ಚತುರ್ವೇದಗಳು ಉಪನಿಷತ್ತುಗಳೇ ಮೊದಲಾ[ದ] ಶಾಸ್ತ್ರಾಭ್ಯಾಸಗಳನ್ನು ಅಭ್ಯಾಸ ಮಾಡಿ ಸೋಮನಾಥನ[ು] ಮಹಾ ವಿದ್ವಾಂಸನೆನಿಸಿದನು. ಇದೂ ಇಲ್ಲವೆ ಈ ಕಾ[ಲ]ದಲ್ಲಿ ಶಿವಾನುಭವಿಯೆನಿಸಿದ್ದ ಕಟ್ಟಕೂರಿನ ಮೋ[ತಿ] ದೇವಯ್ಯನೆಂಬುವನಿಂದ ವೀರಶೈವಾ ಚರಣೆಯನ್ನು ಸೋಮನಾಥನು ತಿಳಿಸಿದನು. ಕೆಲವು ಗ್ರಂಥಗಳ[ು] ಮೋತಿ ದೇವಯ್ಯನೇ ಸೋಮನಾಥನಿಗೆ ವೀರಶೈವದೀ[ಕ್ಷೆ] ಕೊಟ್ಟನೆಂದು ಹೇಳಿದೆ. ಈತನನ್ನು ಭೃಂಗಿಯ ಅವತಾ[ರ]ವೆಂದೇ ಇತ್ತೀಚಿನ ಗ್ರಂಥಗಳು ಗೌರವಿಸಿ ಹೊಗಳಿ[ವೆ]. ಈತನಿಗೆ ತತ್ತ್ವವಿದ್ಯಾಕಲಾಪ, ಕವಿತಾಸಾರ, ಅ[...] ದೈವಕೋಲಾಹಲ, ಭೃಂಗೀಶ್ವರವತಾರ ಮುಂತಾ[ದ] ಬಿರುದುಗಳಿವೆ. ಸಾಹಿತ್ಯ,ಸಂಗೀತ,ವ್ಯಾಕರಣ,ಅಲಂಕಾ[ರ] ಛಂದಶ್ಶಾಸ್ತ್ರಗಳಲ್ಲಿಯೂ ಅದ್ಭುತ ಪಾಂಡಿತ್ಯವನ್ನು ಬಾ[ಲ್ಯ]ದಲ್ಲಿಯೇ ಸಂಪಾದಿಸಿದ ಈ ಕವಿ ಅನೇಕ ಗ್ರಂಥಗಳನ[್ನು] ರಚಿಸಿದನು. ಕನ್ನಡ, ತೆಲುಗು, ಸಂಸ್ಕೃತ ಭಾಷೆಗಳ[ಲ್ಲಿ] ವಿಶೇಷ ಪಾಂಡಿತ್ಯ ಪಡೆದ ಈ ಕವಿಯು ಮರಾಠಿ ಭಾಷೆ[ಯ] ಪರಿಚಯವನ್ನು ಪಡೆದಿದ್ದನೆಂದು ಗೊತ್ತಾಗಿದೆ.

## ಗ್ರಂಥಗಳು ಮತ್ತು ವೈಶಿಷ್ಟ್ಯ

೧೧೯೦-೯೫ರ ಸುಮಾರಿನಲ್ಲಿ ಕರ್ನಾಕಟವಲ್ಲಿ ಜೈ[ನ] ವೈಷ್ಣವ ಸಮಾಜಗಳು ಮಹತ್ತರವಾಗಿದ್ದವು, ಅ[...]

ದ್ಧರೂ, ಯೋಗಾಭ್ಯಾಸಿಗಳೂ, ಅವಧೂತರೂ ಚ್ಚಾಗಿ ವಾಸನಾಗಿದ್ದರು. ಜೀವ ಜಗತ್ತು ಈಶ್ವರರ ಗೆಗೆ ಧರ್ಮ ಸಿದ್ಧಾಂತಗಳ ಬಗೆಗೆ ಚರ್ಚೆಗಳು ನಡೆಯು ಲೇ ಇದ್ದವು. ಸೋಮನಾರಾಧ್ಯರು ಇವರೆಲ್ಲ ವೀರಶೈವ ಂತತತ್ತ್ವಗಳ ಬಗೆಗೆ ಚರ್ಚೆ ಮಾಡಿ ಸಿದ್ಧಾಂತಗಳನ್ನು ಥಾಪಿಸುತ್ತಾ ಸೋಲಿಸಿ ಸ್ವಧರ್ಮೋತ್ಕರ್ಷ ಮಾಡಿದ ಂಬ ಬಗ್ಗೆ ಅವನ ಗ್ರಂಥಗಳಿಂದಲೇ ಹಲವಾರು ಆಧಾರ ಳು ಸಿಗುತ್ತವೆ. ತ್ರಿಭಾಷಾ ಪ್ರಭುತ್ವವನ್ನೂ, ಶಾಸ್ತ್ರ ಂಡಿತ್ಯವನ್ನೂ ಸಂಪಾದಿಸಿದ್ದ ಈ ಕವಿಯು ತಮಿಳು, ನ್ನಡ, ಸಂಸ್ಕೃತ ಈ ಮೂರು ಭಾಷೆಗಳಲ್ಲಿಯೂ ಗ್ರಂಥ ಚನೆ ಮಾಡಿದ್ದಾನೆ. ಅವು ಈಗಲೂ ಪಂಡಿತಮಾನ್ಯ ಂಥಗಳೆನ್ನಿಸಿವೆ.

ಈ ಕವಿಯು ತೆಲುಗಿನಲ್ಲಿ ಬಸವಪುರಾಣಮು, ಆರಾಧ್ಯ ರಿತ್ರಮು, ಅನುಭವಸಾರಮು, ಚೆನ್ನಮಲ್ಲಸೀಸಮುಲು, ಷಾಧಿಪ ಶತಕಮು, ನಮಸ್ಕಾರ ಗದ್ಯಮು ಎಂಬ ಂಥಗಳನ್ನೂ, ಕನ್ನಡದಲ್ಲಿ ಗಣಸಹಸ್ರ ನಾಮಾವಳಿ, ಗುರು ರಗಳೆ, ಚೆನ್ನಬಸವರಗಳೆ, ಶರಣಾ ಬಸವರಗಳೆ, ರಾಂಕನ ಗದ್ಯ ಮೊದಲಾದ ಗ್ರಂಥಗಳನ್ನೂ; ಸಂಸ್ಕೃತ ಬಸವರಾಜೀಯಂ, ರುದ್ರಭಾಷ್ಯಂ, ಬಸವೋದಾಹ ಂ, ಗಂಗೋದಯ ಕಾವ್ಯಂ, ವೀರಶೈವಾಚಾರಶಿಖಾ ಣಿ, ಚತುರ್ವೇದ ಸಾರಸಂಗ್ರಹಂ ಮೊದಲಾದ ಗ್ರಂಥ ನ್ನು ರಚಿಸಿದ್ದಾನೆ.

ಕನ್ನಡ ಭಾಷೆಯಲ್ಲಿ ಹರಿಹರ ರಾಘವಾಂಕರು ಮಾಡಿದ ಂತಿಯನ್ನು ತೆಲುಗು ಭಾಷೆಯಲ್ಲಿ ಪಾಲ್ಕುರಿಕೆ ಸೋಮ ಥ ಮತ್ತು ಮಲ್ಲಿಕಾರ್ಜುನ ಪಂಡಿತಾರಾಧ್ಯರು ನಡೆಸಿ ಂದುವರಿಸಿದರೆನ್ನಬಹುದು. ಕಾವ್ಯದಲ್ಲಿ ಬಳಸಿರುವ ದಸ್ಸು, ವಿಷಯಸ್ವೀಕಾರ ದೃಷ್ಟಿಯಿಂದ ಆಂಧ್ರ ಹಿತ್ಯಕ್ಕೆ ಈ ಕವಿಗಳಿಬ್ಬರೂ ಮಾರ್ಗದರ್ಶಕರಾಗಿದ್ದಾ ಬಹುದು.

ಂಧ್ರದೇಶದಲ್ಲಿ ಬಸವೇಶ್ವರರ ತತ್ತ್ವಪ್ರಸಾರ ಮಾಡಿದ ರ್ ಬಹು ಮಟ್ಟಿಗೆ ಪಾಲ್ಕುರಿಕೆ ಸೋಮನಾಥನಿಗೇ ಸಲು. ಈತನ ಗ್ರಂಥಗಳಲ್ಲಿ ಬಸವೇಶ್ವರನಿಗೆ ಅಂಕಿತ ಡಿದ ಗ್ರಂಥಗಳೇ ವಿಶೇಷ. ಆಂಧ್ರ ಭಾಷೆಯಲ್ಲಿ ಈ ಕವಿ ಬರೆದ ಬಸವಪುರಾಣವೇ ಭೀಮಕವಿಯ ಕನ್ನಡ ಬಸವ ಪುರಾಣಕ್ಕೆ ಮೂಲ. ಇದಲ್ಲದೆ ತಮಿಳು ಬಸವಪುರಾಣ ಕಂಚಿಶಂಕರಾರಾಧ್ಯನ ಸಂಸ್ಕೃತ ಬಸವೇಶವಿಜಯ ಷಡಕ್ಷರಿಯ ಕನ್ನಡ ವೃಷಭೇಂದ್ರ ವಿಜಯ, ತೆಲುಗು ಭಾಷೆಯ ಪಿಡುಪರ್ತಿ ಬಸವಕವಿಚಂಪೂ ಇವೆಲ್ಲಕ್ಕೂ ಸಾಮಗ್ರಿಯನ್ನು ಒದಗಿಸಿದುದು ಸೋಮನಾಥನ ತೆಲುಗು ಬಸವಪುರಾಣವೇ ಆಗಿದೆ. ಗುರುರಾಜನ ಸಂಸ್ಕೃತ ಪಂಡಿತಾರಾಧ್ಯ ಚರಿತೆ, ನೀಲಕಂಠಾರಾಧ್ಯನ ಕನ್ನಡ ಆರಾಧ್ಯ ಚರಿತೆಗಳಿಗೆ ಮೂಲ ಸೋಮನಾಥನ ತೆಲುಗು ಪಂಡಿತಾರಾಧ್ಯ ಚರಿತವೇ ಆಗಿದೆ. ಈತನು ಬರೆದಿರುವ ಬಸವರಾಜೀಯಂ ಎಂಬ ವೀರಶೈವ ತತ್ತ್ವಪ್ರತಿಪಾದಕ ಮಹಾಗ್ರಂಥವು ಬಹುಮಹತ್ವದ್ದು. ಇದಕ್ಕೆ ಸೋಮನಾಥ ಭಾಷ್ಯಂ ಎಂದೂ ಕರೆಯುವುದುಂಟು.

ಒಂದುವೇಳೆ ಪಾಲ್ಕುರಿಕೆ ಸೋಮನಾಥನು ಮೇಲ್ಕಂಡ ಗ್ರಂಥಗಳನ್ನು ರಚಿಸದೆ ಹೋಗಿದ್ದರೆ ವೀರಶೈವೇತಿಹಾಸ ದಲ್ಲಿ ಈಗಿನಷ್ಟು ಬೆಳಕು ಉಂಟಾಗುತ್ತಿತ್ತೊ ಇಲ್ಲವೋ ಹೇಳುವುದಕ್ಕಾಗುವುದಿಲ್ಲ. ಈ ಕವಿಯ ಅದ್ಭುತವಾದ ಈ ಕ್ರಾಂತಿಯ ಫಲವಾಗಿಕನ್ನಡ ತೆಲುಗು ಸಂಸ್ಕೃತಗಳಲ್ಲಿ ಅನೇಕ ಗ್ರಂಥಗಳನ್ನು ಇತರ ಕವಿಗಳು ಬರೆದರು. ಗಣ ಸಹಸ್ರವೆಂಬ ಗ್ರಂಥದಲ್ಲಿ ಶೈವಮತದಲ್ಲಿ ಉಚ್ಚಸ್ಥಾನ ವನ್ನು ಹೊಂದಿದ ಒಂದು ಸಾವಿರ ಜನರ ಹೆಸರುಗಳಿವೆ. ಅವರು ಯಾರು ಯಾರೆಂದರೆ—೫೯೪ ಪ್ರಮಥಗಣರು, ೧೭೧ ರುದ್ರಗಣರು, ೨೮ಜನಯೋಗಾಚಾರ್ಯರು, ೯೨ಜನ ಪುರಾತನರು, ೨೭೩ಜನ ಶಿವಶರಣರು ಇದ್ದಾರೆ. ಇವರೆಲ್ಲ ವೀರಶೈವಕ್ಕೆ ಪ್ರತ್ಯಕ್ಷ ಪರೋಕ್ಷವಾಗಿ ಸಂಬಂಧಿಸಿದವರು. ಇವರಲ್ಲಿ ೧೯ಜನ ಷೋಡಶರು, ೧೩ಜನ ತೇರಸರು, ೧೦ ಜನ ಶರಣರು, ಮತ್ತು ೩೪ಜನರು ಅಮರಗಣರು ಎಂದು ವರ್ಗೀಕರಣಮಾಡಿ ಹೇಳಿದ್ದಾನೆ. ಪಂಡಿತಾರಾಧ್ಯ ಚರಿತ್ರೆ, ಬಸವಪುರಾಣಗಳಲ್ಲಿ ಉಲ್ಲೇಖವಾದ ಶಿವಶರಣರ ಹೆಸರು ಗಳು ಈ ಗಣಸಹಸ್ರದಲ್ಲಿ ಬಂದಿವೆ. ಆದರೆ ಪಂಡಿತಾ ರಾಧ್ಯ ಚರಿತ್ರೆ, ಬಸವ ಪುರಾಣಗಳಲ್ಲಿ ಶಿವಶರಣರು ಮಾಡಿದ ಪವಾಡಗಳ ವಿಸ್ತಾರವಾದ ವರ್ಣನೆಗಳು ಇವೆ. ಈ ಚರಿತ್ರೆಗಳ ಮೇಲಿಂದ ವೀರಶೈವ ಸಮಾಜದ ಪೂರ್ವೇ ತಿಹಾಸದ ಮೇಲೆ ಮಹತ್ವದ ಪ್ರಕಾಶವು ಬಿದ್ದಿದೆ. ಪಾಲ್ಕುರಿಕೆ ಸೋಮನಾಥನು ಬಸವೇಶ್ವರನ ತರುವಾಯ

೬೦-೭೦ ವರ್ಷಗಳ ನಂತರ ಅಂದರೆ ಕ್ರಿ. ಶ. ೧೨೦೦ ಸುಮಾರಿನಲ್ಲಿ ಪ್ರಸಿದ್ಧನಾಗಿ ಕ್ರಾಂತಿಮಾಡಿ ಕೀರ್ತಿಶೇಷ ನಾಗಿದ್ದನು. ಇವನು ಸಂಗ್ರಹಿಸಿದ ಚರಿತ್ರೆಗಳು ಐತಿ ಹಾಸಿಕ ದೃಷ್ಟಿಯಿಂದ ಬಹಳ ಪ್ರಸಿದ್ಧ ಮತ್ತು ಮಹತ್ವ ದವುಗಳಾಗಿವೆ.

## ಕವಿಯ ಕ್ರಾಂತಿಯ ಮಹತ್ವ

ಬಸವೇಶ್ವರನು ಐಕ್ಯನಾದ ಕೆಲವೇ ವರ್ಷಗಳಲ್ಲಿ ಸೋಮನಾಥನು ಉದ್ಭವಿಸಿ ಕರ್ನಾಟಕಾಂಧ್ರ ದೇಶಗ ಳನ್ನು ಸಂಚರಿಸಿ ಮಹತ್ವದ ವಿಷಯಗಳನ್ನು ಸಂಗ್ರಹಿಸಿ ಅವನ್ನೆಲ್ಲ ಗ್ರಂಥರೂಪಕ್ಕೆ ಇಳಿಸಿ ಶಾಶ್ವತ ಸಾಮಗ್ರಿಗಳ ನ್ನಾಗಿ ಮಾಡಿದನೆನ್ನಲು ಅಡ್ಡಿಯಿಲ್ಲ. ವೀರಶೈವ ಧರ್ಮಕ್ಕಾಗಿ ಪ್ರಯತ್ನಿಸಿದ ಮಹಾನುಭಾವರು ಯಾರು ಯಾರು ಅವರು ಎಲ್ಲಿರುವರು ಎಲ್ಲಿ ಇದ್ದರು ಎಂಬುದನ್ನು ಸಂಶೋಧಿಸಲು ಪ್ರಯತ್ನಿಸಿ ಆ ಕಾರ್ಯದಲ್ಲಿ ಬಹುಶಃ ಸೋಮನಾಥನು ಯಶಸ್ಸು ಗಳಿಸಿದನು. ಅವನು ಉಲ್ಲೇಖಿಸಿದ ೨೩೪ ಜನ ಶಿವಶರಣರು ಬಹುಮಹತ್ವದ ಕಾರ್ಯ ಮಾಡಿದವರು. ಅವರಲ್ಲಿ ಬಹುಜನರು ವಿಜಾಪುರ, ಕಲಬುರ್ಗಿ ಉತ್ತರ ಆಂಧ್ರ ದೇಶದವರಾಗಿದ್ದಾರೆ. ಗಣ ಸಹಸ್ರದಲ್ಲಿ ಬರುವ ಶಿವಶರಣರ ಗ್ರಾಮಗಳು ಯಾವು ವೆಂದರೆ ಮುಸುಟಿ, ವಿಜಾಪುರ, ಕೆಂಭಾವಿ, ಜಟ್ಟೂರು, ಹೊಟ್ಟಲಕೆರೆ, ಮುಂದನೂರು, ಬಾಹೂರು, ನಾವದಿಗೆ, ಕೋವೂರು, ಸಗರ, ಕೆರವೂರು, ಹಿರೂರು, ಕುಮ ಕುಂಟೆ, ಹಾವಿನಾಳು, ಇಳಿಹಾಳು, ಏಲೇಶ್ವರ, ಇಂಡಿ, ವನಿಪುರ, ಇಂಗಳಿಗೆ, ಗಂಗಾಪುರ, ಸರವೂರು, ನಿಂಬಾಣಿ, ಕೊಲ್ಲಿಪಾಕಿ, ನಿಲವಿಗೆ, ರೇಗೂರು, ಮೊರಟ, ಅಮರಗೊಂಡ, ನೆಲೆಗೊಂಡ, ಉಡುತಡಿ, ಕದಿರೆ ಮುಂತಾದುವುಗಳು. ಈ ಗ್ರಾಮಗಳನ್ನು ಸುತ್ತಿ ಅಲ್ಲಿ ಸುತ್ತಮುತ್ತ ಪ್ರಚಾರದಲ್ಲಿರುವ ಶಿವಶರಣರ ಚರಿತ್ರೆಗಳನ್ನು ಸೋಮನಾಥನು ಸಂಗ್ರಹಿಸಿರಬೇಕೆಂದು ತರ್ಕಿಸಲು ಬರುವಂತಿದೆ. ಈ ಪ್ರವಾಸ ಕಾಲದಲ್ಲಿಯೇ ಇವನು ಮರಾಠಿ ಭಾಷೆಯ ಪರಿಚಯವನ್ನು ಪಡೆದ ನೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಇವನು ರಚಿಸಿದ ವೃಷಾಧಿಪಶತಕದಲ್ಲಿ ಬಸವಣ್ಣನನ್ನು ಸಂಸ್ಕೃತ, ಕನ್ನಡ, ತೆಲುಗು, ಮರಾಠಿ ಈ ನಾಲ್ಕು ಭಾಷೆಗಳಲ್ಲಿ ಸ್ತೋತ್ರ ಮಾಡಿದ್ದಾನೆ.

ಇಷ್ಟೆಲ್ಲ ಶಾಸ್ತ್ರ ಪಾಂಡಿತ್ಯವನ್ನು ಲೋಕಾನುಭವವನ್ನು ಭಾಷಾಪ್ರಭುತ್ವವನ್ನು ಸಂಪಾದಿಸಿದ ಈ ಕವಿಯು ಒಟ್ಟು ೨೩ ಗ್ರಂಥಗಳನ್ನು ರಚಿಸಿ ಕೀರ್ತಿಶೇಷ ನಾಗಿದ್ದಾನೆ. ಆದ್ದರಿಂದಲೇ ವೀರಶೈವ ಪ್ರಪಂಚ ಇ[illegible] ನನ್ನು ಬೃಂಗಿಯ ಸಾಕ್ಷಾತ್ ಅವತಾರವೆಂದು ಕರೆ[illegible] ದ್ದಾರೆ. ಪರಮೇಶ್ವರನೇ ಇವನಿಗೆ ಪ್ರತ್ಯಕ್ಷನಾಗಿ ನೀನ[illegible] ಕೈಲಾಸಕ್ಕೆ ಬರಬೇಕೆಂದು ಕೇಳಿದನೆಂದೂ ಅದಕ[illegible] ಸೋಮನಾಥನು ಒಪ್ಪದೆ ಪುನೀತವಾದ ಈ ಭೂಮಿಯ[illegible] ಲ್ಲಿಯೇ ಕ್ರಿಯಾಸಮಾಧಿಯನ್ನು ಹೊಂದುವೆನೆಂದು ಹೇಳಿ ಬೆಂಗಳೂರು ಜಿಲ್ಲಾ ಕಲ್ಲೆಯದ ಬೆಟ್ಟದಲ್ಲಿ ಲಿಂಗ[illegible] ಕ್ಯನಾದನು. ಇಂದಿಗೂ ಈ ಬೆಟ್ಟದಲ್ಲಿ ವೀರಶೈವರು ಪ್ರತಿವರ್ಷ ಸೋಮನಾಥನ ಹೆಸರಿನಲ್ಲಿ ಗಣ ಪರ್ವವನ್ನು ಮಾಡುತ್ತಾರೆ. ಪಾಲ್ಕುರಿಕೆ ಸೋಮನಾಥನು ಇ[illegible] ಲಿಂಗೈಕ್ಯನಾಗಲು ಕಾರಣವನ್ನು ಪಾಲ್ಕುರಿಕೆ ಸೋಮೇ[illegible] ಶ್ವರನ ಪುರಾಣದಲ್ಲಿ ಹೀಗೆ ಹೇಳಿದೆ—"ಈ ಬೆಟ್ಟದಲ್ಲಿ[illegible] ಗವಿಯೊಂದರಲ್ಲಿ ವಾಸವಾಗಿದ್ದ ಮಹಾಶಿವಶರಣೆ ಸ[illegible] ಶೀಲೆ ಚೆನ್ನಮ್ಮನೆಂಬುವರ ದರ್ಶನಕ್ಕೆ ಸೋಮನಾಥ[illegible] ಬಂದು ಅವಳ ದರ್ಶನ ಪಡೆದು ಇಲ್ಲಿಯೇ ಕ್ರಿ[illegible] ಸಮಾಧಿಯನ್ನು ಹೊಂದಿದನು."

## ಸಾಹಿತ್ಯ ಪ್ರಪಂಚದಲ್ಲಿ ಕವಿಯ ಸ್ಥಾನ

ವೀರಶೈವ ಪ್ರಪಂಚದ ಮಹಾಕವಿಯಾದುದರ[illegible] ಇವನ ಮೇಲೆಯೇ ಬಂದು ಪುರಾಣವು ವೀರಶ[illegible] ಸಾಹಿತ್ಯದಲ್ಲಿ ಹುಟ್ಟಿ ಇವನನ್ನು ಹರಿಹರ, ರಾಘವಾ[illegible] ಕೆರೆಯ ಪದ್ಮರಸರ ಸಾಲಿನಲ್ಲಿ ಪುರಾಣ ಪುರು[illegible] ಮಟ್ಟಕ್ಕೇರಿಸಿದೆ.—

ಈ ಕವಿಯು ವೀರಶೈವದಲ್ಲಿ ಪ್ರಸಿದ್ಧವಿರುವ ೬೪ [illegible] ಗಳನ್ನು ಕಟ್ಟುನಿಟ್ಟಾಗಿ ಆಚರಿಸಿದವನೆಂದು ಕೀ[illegible] ನಾಗಿದ್ದಾನೆ. ವೀರಶೈವ ಗ್ರಂಥಕಾರರಲ್ಲಿ ಕವಿ ಉ[illegible] ಸ್ಥಾನವನ್ನು ಹೊಂದಿದ್ದಾನೆ. ಆದರೆ ಇವನಿಗೂ ಅಂ[illegible] ಇತರ ವಿದ್ವಾಂಸರಿಗೂ ಕೆಲವು ವ್ಯತ್ಯಾಸ ಕಂಡು[illegible] ತ್ತವೆ. ಇವನು ರಚಿಸಿದ ಗ್ರಂಥಪ್ರಪಂಚ ಮ[illegible] ಬರುವ ವೀರಶೈವ ಗ್ರಂಥ ನಿರ್ಮಾಣಕಾರರಿಗೆ ಸಾ[illegible] ಗಳಾಗಿವೆ. ಐತಿಹಾಸಿಕ ದಾಖಲೆಗಳನ್ನು ಪೌರಾ[illegible] ದೃಷ್ಟಿಯಿಂದ ಗ್ರಂಥಸ್ಥವಾಗುವಂತೆ ಮಾಡಿದ [illegible]

ೋಮನಾಥನಿಗೆ ಸಲ್ಲಬೇಕು. ಈ ಕಾರ್ಯವನ್ನು ಮುಂದ
ೕಕ ವೀರಶೈವ ಕವಿಗಳು ಉಪಯೋಗಿಸಿಕೊಂಡಿದ್ದಾರೆ.
ಟ್ಟಿನಲ್ಲಿ ದೊಡ್ಡ ಕವಿ, ಪ್ರತಿಭಾವಂತ, ಪಂಡಿತ, ಕ್ರಾಂತಿ
ಾರಕ ಇತ್ಯಾದಿಯಾಗಿ ಕವಿಯ ವಿಷಯವಾಗಿ ಹೇಳ
ಹುದು. ಬಸವಣ್ಣನವರ ಜೀವಿತ ನಿರೂಪಣೆಗಾಗಿ
ವಿಯು ತನ್ನ ಸಮಗ್ರ ಪಾಂಡಿತ್ಯವನ್ನು ವಿನಿಯೋಗಿಸಿ
ಸವಣ್ಣನ ಬಗೆಗೆ ಅಪಾರ ವಿಷಯ ಸಂಗ್ರಹ ಮಾಡಿ

ವೀರಶೈವ ಪ್ರಪಂಚಕ್ಕೇ ಮಾದರಿಯ ಕವಿಯಾಗಿದ್ದಾನೆ. ಆದರೆ ಪವಾಡಗಳಿಗೆ ಕವಿ ಹೆಚ್ಚಿನ ಮಹತ್ವವನ್ನು ಎಲ್ಲ ಕಡೆಗೂ ಕೊಟ್ಟು ಬರೆದಿರುವುದು ಅವನ ಶೈಲಿಯ ಮುಖ್ಯ ಲಕ್ಷಣ. ತಾನು ಆಚರಿಸುತ್ತಿದ್ದ ೬೪ ಶೀಲತತ್ತ್ವಗಳನ್ನು ಕಾವ್ಯದಲ್ಲಿ ಪ್ರತಿಬಿಂಬಿಸುವಂತೆ ಮಾಡಿದ್ದಾನೆ,

—ಸಂ.

---

**ಇದು ತಿಳಿದಿರಬೇಕಾದ ಅಂಶ :—**

**ನಮ್ಮ ಪ್ರಾಚೀನ ತೂಕದ ಕ್ರಮ ಹೇಗಿತ್ತು ?**

ಹತ್ತಣ= ೧ ಗದ್ಯಾಣ
ಗದ್ಯಾಣ= ೧ ಕರ್ಷ
೪ ಕರ್ಷ= ೧ ಹಲ
೨೦ ಹಲ= ೧ ಬೆಸಿಗೆ.
೫ ಬೆಸಿಗೆ= ೧ ತೊಲ
೨೦ ತೊಲ =೧ ಭಾರ.
೧೦ ಭಾರ= ೧ ಅಚಿತ

ಕರ್ಪೂರಾದಿ ವಸ್ತುಗಳನ್ನು ಈ ತೂಕದ ಕಟ್ಟಳೆ
ಳಿಂದ ತೂಗುತ್ತಿದ್ದರಂತೆ.

—ವಿವೇಕ ಚಿಂತಾಮಣಿ.

○ ○ ○

**ತುಮಕೂರು ಜಿಲ್ಲೆಯಲ್ಲಿ ಆಗಿಹೋದ ದಾರ್ಶ
ಕರು, ಮತ್ತು ಕವೀಶ್ವರರು, ಯೋಗಿವರೇ
ೖರು—.**

(1) ೧೨ನೆಯ ಶತಮಾನದಲ್ಲಿ ಅಮರಗೊಂಡದ ಮಲ್ಲಿ
ಾರ್ಜುನನು ಪ್ರಸಿದ್ಧ ವಚನಕಾರನೆನಿಸಿದ್ದಾನೆ.

(2) ಗುಬ್ಬಿಯ ಮಲ್ಲಣ್ಣನೆಂಬ ಕವಿ ಗಣಭಾಷಿತರತ್ನ
ಾಲೆಯೆಂಬ ವಚನಸಂಕಲನಗ್ರಂಥ ರಚಿಸಿದ್ದಾನೆ, ಈತನು 'ವಾತುಲಾಗಮ'ಕ್ಕೆ ವ್ಯಾಖ್ಯಾನ ಬರೆದಿದ್ದಾನೆ. ಕಾಲ. ಕ್ರಿ.ಶ.ಸು. 1475.

(3) ಗುಬ್ಬಿಯ ಮಲ್ಲಣ್ಣನ ಮೊಮ್ಮಗ ಮಲ್ಲಣಾರ್ಯನು (ಕ್ರಿ.ಶ.ಸು ೧೫೧೩) ವೀರಶೈವ ಮಹಾಪುರಾಣವನ್ನೂ ಭಾವಚಿಂತಾರತ್ನ ಎಂಬ ಕಾವ್ಯವನ್ನೂ ಬರೆದಿದ್ದಾನೆ.

(4) ಕ್ರಿ.ಶ ೧೫೬೧ರಲ್ಲಿದ್ದ ಶಾಂತೇಶಕವಿ (ಮಲ್ಲಣಾರ್ಯರ ಮಗ)ಯು 'ತೋಂಟದ ಸಿದ್ಧೇಶ್ವರ ಪುರಾಣ' ಬರೆದಿದ್ದಾನೆ.

(5) ಕ್ರಿ.ಶ.ಸು ೧೫೬೧ರಲ್ಲಿದ್ದ ನಿಟ್ಟೂರು ನಂಜಯ್ಯ "ವೇದಾಂತಸಾರ ವೀರಶೈವ ಚಿಂತಾಮಣಿ"ಯೆಂಬ ಗ್ರಂಥವನ್ನು ಸಂಸ್ಕೃತದಲ್ಲಿ ಬರೆದಿದ್ದಾನೆ. ಮತ್ತು ಕೇಶಿರಾಜ (ಕ್ರಿ.ಶ ೧೨೬೦)ನ 'ಶಬ್ದಮಣಿದರ್ಪಣ'ವೆಂಬ ಕನ್ನಡ ವ್ಯಾಕರಣ ಗ್ರಂಥಕ್ಕೆ ಟೀಕೆ ಬರೆದಿದ್ದಾನೆ.

(6) ತೋಂಟದ ಸಿದ್ಧಲಿಂಗೇಶ್ವರರ ಗುರುಗಳಾದ ಹರದನಹಳ್ಳಿಯ ಶೂನ್ಯಪೀಠಾಧಿಪತಿ ಗೋಸಲ ಚೆನ್ನಬಸವೇಶ್ವರರು 'ಕ್ಷೇತ್ರಜ್ಞ ಸುಮನೋಜ್ಞವಾದ' ಎಂಬ ಗ್ರಂಥ ರಚಿಸಿದ್ದಾರೆ. ಈಗ ಇವರ ಗದ್ದುಗೆ ಗುಬ್ಬಿಯಲ್ಲದೆ. ಕಾಲ.ಕ್ರಿ.ಶ.ಸು. ೧೪೫೦.

(7) ಗೂಳೂರಿನ ಸಿದ್ಧವೀರಣಾರ್ಯರೆಂಬುವರು ಪ್ರಭುದೇವರ ಶೂನ್ಯಸಂಪಾದನೆಯೆಂಬ ಗ್ರಂಥ ರಚಿಸಿದ್ದಾರೆ. ಇವರ ಕಾಲ ಕ್ರಿ.ಶ.ಸು ೧೬೦೦. ಇವರು ಸಂಸ್ಕೃತದಲಿ "ಅನಾದಿ ವೀರಶೈವಾಚಾರ ಸಂಗ್ರಹ"ವೆಂಬ ಗ್ರಂಥವನ್ನೂ ರಚಿಸಿದಂತೆ ತಿಳಿಯುಬರುವುದು.

# ಸುಟ್ಟು ಬೂದಿಯಾಗುತ್ತಿರುವ ಸಂಪತ್ತು

ಹೆಚ್. ಹನುಮಂತರಾವ್.

ಪ್ರಕೃತಿಯಲ್ಲಿ ಒಂದು ವ್ಯವಸ್ಥೆಯಿದೆ ; ನಿಯಮವಿದೆ. ಪ್ರಕೃತಿ ಭೂತವಾದ ದೇಹ ಪಾಲನೆಗೂ ನಿಯಮವಿದೆ. ರಾಜಶಾಸನಗಳನ್ನು ಮಿಕ್ಕಿ ನಡೆದವರಿಗೆ ಶಿಕ್ಷೆಯು ಹೇಗೆ ಅನಿವಾರ್ಯವೋ ಹಾಗೆಯೇ ಪ್ರಕೃತಿ ನಿಯಮಗಳನ್ನು ಮಿಕ್ಕಿ ನಡೆದವರಿಗೂ ಶಿಕ್ಷೆ ಅನಿವಾರ್ಯ, ರಾಜ ಶಾಸನದಿಂದ ಜಾರಿದರೂ ಪ್ರಕೃತಿ ಶಾಸನದಿಂದ ಜಾರಲಾಗುವುದಿಲ್ಲ.

ವಿಲಾಸಿಗಳಾದ ಅನೇಕ ಜನರು ವಿಷಯ ಸುಖಗಳನ್ನೇ ನಿಜವಾದ ಸುಖಗಳೆಂದು ಭ್ರಮಿಸಿ ಅನೇಕ ದುಶ್ಚಟಗಳಿಗೆ ಬಲಿಯಾಗಿ ವರ್ಣಾತೀತವಾದ ರೋಗಯಾತನೆಗೆ ಆಗರರಾಗುತ್ತಾರೆ. ಮತ್ತು ಬಿತ್ತುತ್ತಾರೆ, ಇಂತಹ ದುಶ್ಚಟಗಳಲ್ಲಿ ಹೊಗೆಸೊಪ್ಪು (ತಂಬಾಕು) ಸೇವನೆಯು ಒಂದು. ಇಂದು ಜಗತ್ತಿನಲ್ಲಿ ಅದರಲ್ಲೂ ನಮ್ಮ ದೇಶದಲ್ಲಿ ತಂಬಾಕು ಪ್ರಿಯರ ಸಂಖ್ಯೆ ಅಧಿಕಗೊಳ್ಳುತ್ತಿದೆ. 'ಕಾಫಿ' 'ಟೀ'ಗಳು ಹೇಗೆ ಪಾಶ್ಚಾತ್ಯರಿಂದ ಕೊಡಲ್ಪಟ್ಟು ಸರ್ವವ್ಯಾಪಿಯಾಗಿದೆಯೋ ಹಾಗೆ ತಂಬಾಕು ಕೂಡ ಮ್ಲೇಚ್ಛರಿಂದ ಬಂದ ಕೊಡುಗೆ ಎಂದು ಹೇಳಬಹುದು. ನಮ್ಮ ಪ್ರಾಚೀನ ಗ್ರಂಥಗಳಲ್ಲಿ ತಂಬಾಕಿನ ಉಲ್ಲೇಖವಿದ್ದಂತೆ ಕಂಡು ಬಂದಿಲ್ಲ. ಮದುವೆ, ಮುಂಜಿ, ಸಂಘ ಸಂಸ್ಥೆ, ಆತಿಥ್ಯ ಇತ್ಯಾದಿ ಕಡೆಗಳಲ್ಲಿ ನಡೆಯುವ ಉಪಚಾರಗಳ ಸ್ಥಾನದಲ್ಲಿ ಬೀಡಿ ಸಿಗರೇಟುಗಳು ಆದೇಶಿತವಾಗುತ್ತಿವೆ ; ಆಗಿವೆ ಎಂದರೆ ತಪ್ಪಿಲ್ಲ. 1966ರ ಮಧ್ಯಭಾಗದಲ್ಲಿ ಪ್ರಪಂಚದ ಜನಸಂಖ್ಯೆ 3353 ದಶಲಕ್ಷ. ಇದೇ ವರ್ಷ ಪ್ರಪಂಚದಲ್ಲಿ ತಯಾರಾಗಿ ಸೇದಲಾದ ಸಿಗರೇಟುಗಳ ಸಂಖ್ಯೆ 2382 ಸಾವಿರ ದಶಲಕ್ಷ ಅಂದರೆ ತಲೆ 1 ಕ್ಕೆ 700 ಸಿಗರೇಟಿಗೂ ಹೆಚ್ಚು ಆ ವರ್ಷ ಭಸ್ಮವಾಯಿತು. ಇದರಲ್ಲಿ ಭಾರತ ಮತ್ತಿತರ ಕಡೆಗಳಲ್ಲಿ ತಯಾರಾಗುವ ಬೀಡಿಗಳು ಸೇರಿಲ್ಲ.

1966 ನೆಯ ಇಸವಿಯಲ್ಲಿ ವಿಶ್ವದಲ್ಲೇ ಅತ್ಯಧಿಕ ಸಿಗರೇಟುಗಳು ಉತ್ಪಾದಿಸಿದ ಅಮೇರಿಕ ; ರಷ್ಯವು ಎ... ಡನೆಯದು ; ಜಪಾನ್ ಮೂರನೆಯದು ; ಬ್ರಿಟನ್ ನಾ... ನೆಯದು, ಮತ್ತು ಪಶ್ಚಿಮ ಜರ್ಮನಿಯು ಐದನೇ ಸ್ಥಾನವನ್ನು ಗಳಿಸಿತು. ಭಾರತದಲ್ಲಿ ಬೀಡಿಯ ತಯ... ರಿಕೆ ಬಹುಶಃ ಮೇಲಿನ ಅಂಕೆ-ಸಂಖ್ಯೆಗಳನ್ನೆಲ್ಲಾ ಮಿ... ಸಿದೆಯೆಂದು ಊಹಿಸಬಹುದು. ಅದೆಲ್ಲವೂ ಭಾರತದ... ಪ್ರತಿದಿನ ನಷ್ಟವಾಗುತ್ತಿರುವ ಸಂಪತ್ತೆಂದು ಹೇ... ವಿಧಿಯಿಲ್ಲ.

ಹೊಗೆ ಸೊಪ್ಪಿನ ಪ್ರತಿ ನೂರು (100) ಔನ್ಸ್‌ಗಳ... ಸುಮಾರು ಎರಡು ಔನ್ಸ್‌ಗಳಷ್ಟು ನಿಕೋಟಿನ್ ಎಂ... ಭಯಂಕರವಾದ ವಿಷವಿರುತ್ತದೆ. 'ನಿಕೋಟಿನ್' 'ಆ... ನಿಕ್' ಗಿಂತಲೂ ಹೆಚ್ಚು ಸಾಮರ್ಥ್ಯವುಳ್ಳ ವಿಷ, ಅ... ಒಂದು ಹನಿಯನ್ನು ಇಲಿಯ ಚರ್ಮದ ಮೇಲೆ ಹಾ... ದರೆ ಆ ಇಲಿ ತಕ್ಷಣವೇ ಸಾಯುವುದಂತೆ. ನಾ... ಅಥವಾ ಬೆಕ್ಕಿನ ನಾಲಗೆಯ ಮೇಲೆ ಎರಡು ಹನಿಯ... ಹಾಕಿದರೆ ಅವು ಕೂಡ ತಕ್ಷಣ ಸಾಯುವುವು. ಚೀನಿಯ... ಆತ್ಮಹತ್ಯೆ ಮಾಡಿಕೊಳ್ಳಬೇಕಾದರೆ ತಮ್ಮ ಹುಕ್ಕಾ... ರುವ ನಿಕೋಟಿನ್ ಎಂಬ ವಿಷ ಮಿಶ್ರಿತ ನೀರನ್ನು ಕ... ಯುತ್ತಾರಂತೆ. ಅಭ್ಯಾಸಿಗಳು ಪ್ರಾರಂಭದ ದಿನಗ... ತಲೆ ಸುತ್ತುವುದು, ವಾಂತಿಯಾಗುವುದು, ಅ... ಹೃದಯ ಕ್ರಿಯೆ ಇತ್ಯಾದಿಗಳನ್ನು ಅನುಭವಿಸಲೇ ಬೇ... ಗುತ್ತದೆ. ಇಂತಹ ಒಬ್ಬ ಮಿತ್ರನನ್ನು ಒಮ್ಮೆ ನಾ... ಕಲ್ಯಾಣಿಯವರೆಗೂ ಹೊತ್ತು ಶೈತ್ಯೋಪಚಾರ ಮಾ... ಬೇಕಾಯಿತು. ಆದರೂ ಅತ ಕಲಿತೇ ಕಲಿತ.

ಜಗತ್ಪ್ರಸಿದ್ಧ ಡಾಕ್ಟರ್ ಮತ್ತು ವಿವೇಚನಾಜೀವಿ... ಅಭಿಪ್ರಾಯ ಈ ರೀತಿಯಿದೆ.

"ತಂಬಾಕು ಸಂಸ್ಕಾರ ಹೊಂದುವುದರಿಂದ ಮ... ಕೊಂಚಮಟ್ಟಿಗೆ ಸುಟ್ಟು ಹೋಗುವುದರಿಂದ ಅ...

ತೀಕ್ಷ್ಣತೆಯು ಕಡಿಮೆಯಾಗುತ್ತದೆ. ಅದರಿಂದ ತಂಬಾಕು ಪ್ರಿಯರು ಸಾಯುವುದಿಲ್ಲ. ಸಾವಿನ ಹಿಂಸೆಗಳನ್ನು ತಿನ್ನುತ್ತಾರೆ"

"ಹೊಗೆಸೊಪ್ಪನ್ನು ವಿಶೇಷವಾಗಿ ಉಪಯೋಗಿಸುವವರಿಗೆ ಗುಂಡಿಗೆಯ ರೋಗ ಉಂಟಾಗುತ್ತದೆ"

"ತಂಬಾಕು ಪ್ರಿಯರಿಗೆ ಯಶಸ್ವೀ ಶಸ್ತ್ರಚಿಕಿತ್ಸೆ ಮಾಡುವುದು ಕಷ್ಟ."

"ನಶ್ಯವನ್ನು ಸೇವಿಸುವುದು ದೃಷ್ಟಿಯನ್ನು ಕಳೆದುಕೊಳ್ಳುವುದರ ಜೊತೆಗೆ ಗ್ರಹಣ ಶಕ್ತಿಯನ್ನು ಕಳೆದುಕೊಂಡಂತೆ."

ಡಾ|| ಎ. ಫಿಶರ್. ಪಿಹೆಚ್‌ಡಿ ಹೀಗೆ ಹೇಳುತ್ತಾರೆ.

"ತಂಬಾಕು ಸೇದುವುದರಿಂದ ದೇಹಕ್ಕೂ ಮನಸ್ಸಿಗೂ ಅನೇಕ ಅಪಾಯುಗಳು ಸಂಭವಿಸುತ್ತವೆಂದು ನಾನು ಅನೇಕ ವಿದ್ಯಾರ್ಥಿಗಳನ್ನು ಪರೀಕ್ಷಿಸಿ ನಿರ್ಧರಿಸಿದ್ದೇನೆ. ಮೆದುಳಿನ ಉತ್ಸಾಹ ಶಕ್ತಿಯೂ ಕ್ಷೀಣಿಸುತ್ತದೆ. ಆರೋಗ್ಯವು ಚೆನ್ನಾಗಿರಬೇಕೆಂದು ಬಯಸುವವರು ತಂಬಾಕು ಸೇದುವುದನ್ನು ಅವಶ್ಯವಾಗಿ ಬಿಡಬೇಕು."

ಡಾ|| ಸ್ಟನಲೆಹಾಲ್. ಪಿಹೆಚ್‌ಡಿ, ಎಲ್.ಎಲ್.ಡಿ ಇವರು "ಬೀಡಿ ಅಥವಾ ಸಿಗರೇಟುಗಳನ್ನು ಸೇದುವುದರಿಂದ ತರುಣರಿಗೆ ಖಂಡಿತವಾಗಿಯೂ ಅಹಿತವಾಗುತ್ತದೆ."

ಮಿ|| ಚಾರ್ಲಿಸ್ ಇಲಿಯಟ್ –" ತಂಬಾಕಿನಲ್ಲಿರುವ ವಿಷವು ದೇಹಕ್ಕೆ ಅಪಾಯ ಮಾಡುವುದಿಲ್ಲವೆಂಬುದು ನಿರರ್ಥಕವಾದುದೆ ಸರಿ. ವಿದ್ಯಾರ್ಥಿಗಳಿಗೂ ವಿದ್ವಾಂಸರಿಗೂ ಮತ್ತು ಕೈ ಕಸಬಿನವರಿಗೂ ತಂಬಾಕಿನಿಂದ ಅನರ್ಥ ಸಂಭವಿಸದ ಇರುವುದಿಲ್ಲ."

ಡಾ|| ಯುರ್ನ್ ಎಂ.ಡಿ. ಮೆಡಿಕಲ್ ಡೈರೆಕ್ಟರ್ ಅವರು– "ಮದ್ಯವನ್ನು ನಾನೆಷ್ಟು ನಿಷೇಧಿಸುತ್ತೇನೆಯೋ ತಂಬಾಕನ್ನು ಅದಕ್ಕಿಂತಲೂ ಹೆಚ್ಚು ನಿಷೇಧಿಸುತ್ತೇನೆ"

ಟಾಲ್‌ಸ್ಟಾಯ್ ಅವರು—"ತಂಬಾಕು ಸೂಕ್ಷ್ಮರೂಪದಿಂದಲೇ ಘನತರವಾದ ಅಪಾಯವನ್ನುಂಟು ಮಾಡುತ್ತದೆ. ಇದು ಅನೇಕ ವಿಷಯಗಳಲ್ಲಿ ಮದ್ಯಕಿಂತಲೂ ಅಹಿತಕರವಾದದ್ದಾಗಿದೆ."

ಕ್ಷಣಿಕ ಸುಖವನ್ನಿತ್ತು ಪರಿಣಾಮಿಕವಾಗಿ ಅಹಿತಕಾರಿಯಾದ ಪಾನಗಳಲ್ಲಿ ತಂಬಾಕು ಅಗ್ರಸ್ಥಾನವನ್ನು ಪಡೆದಿದೆ. ಮಾನವನು ಆರ್ಥಿಕವಾಗಿ ದೈಹಿಕವಾಗಿ ಮತ್ತು ಮಾನಸಿಕವಾಗಿ ಸುಭದ್ರತೆಯನ್ನು ಹೊಂದಬೇಕಾದರೆ ತಂಬಾಕು ಮೊದಲಾದ ದುಶ್ಚಟಗಳಿಂದ ದೂರವಿರಬೇಕೆಂದು ಒಮ್ಮೆ ಹೇಳಬೇಕಾದ್ದಿಲ್ಲ.

---

**ಭಾರತೀಯರ ಗಣಿತ ಸಂಜ್ಞೆಗಳು ೩೭ ಸ್ಥಾನಗಳವರೆಗೆ ಇತ್ತು.**

ಏಕಂ, ದಶಂ, ಶತಂ, ಸಾವಿರ, ದಶಸಾವಿರ, ಲಕ್ಷ, ದಶಲಕ್ಷ, ಕೋಟಿ, ದಶಕೋಟಿ, ಶತಕೋಟಿ, ಅರ್ಬುದ, ನ್ಯರ್ಬುದ, ಖರ್ವ, ಮಹಾಖರ್ವ, ಪದ್ಮ, ಮಹಾಪದ್ಮ, ಕ್ಷೋಣಿ, ಮಹಾಕ್ಷೋಣಿ, ಶಂಖ, ಮಹಾಶಂಖ, ಕ್ಷಿತಿ, ಮಹಾಕ್ಷಿತಿ, ಕ್ಷೋಭ, ಮಹಾಕ್ಷೋಭ, ನಿಧಿ, ಮಹಾನಿಧಿ, ಸಾಗರ, ಮಹಾಸಾಗರ, ಹರಿ, ಮಹಾಹರಿ, ಶಂಖೆ, ಮಹಾಶಂಖೆ, ಫಣಿ, ಮಹಾಫಣಿ, ಕ್ರಮ, ಮಹಾಕ್ರಮ, ಇವೇ ಆ ೩೭ ಸ್ಥಾನಗಳು.

—ವಿವೇಕ ಚಿಂತಾಮಣಿ.

# ವೇದದಲ್ಲಿ ಸೃಷ್ಟಿನಿರೂಪಣೆ

ಮೂಲ ಲೇಖಕರು :—ಬಿಂದಿಗನವಿಲೆ ನಾರಾಯಣ ಐಯ್ಯಂಗಾರ್ ಅವರು (1898 A.D)

ಅನುವಾದ: ಸಾ. ಭಾ. ಚಂದ್ರಶೇಖರಾಚಾರ್ಯರು, ಮಂಡ್ಯ ಇವರಿಂದ

("ಸಿದ್ಧಗಂಗಾ" 1967 ರ 4ನೆಯ ಸಂಚಿಕೆಯಿಂದ ಮುಂದುವರಿದುದು)

ಋಗ್ವೇದ ದಶಮ ಮಂಡಲದ 71 ನೆಯ ಸೂಕ್ತವು ವಾಕ್ಕಿನ ಪ್ರಶಂಸೆಯೇ ಆಗಿದೆ. ಇದರ ದೇವತೆಯು ಜ್ಞಾನವೆಂದು ಅನುಕ್ರಮಣಿಯು ಹೇಳುತ್ತದೆ. ಇದರಿಂದ ಅನುಕ್ರಮಣಿಯ ಕಾಲದಲ್ಲೂ ವಾಕ್ ಎಂದರೆ ಜ್ಞಾನವೇ ಎಂದು ತಿಳಿಯಲ್ಪಡುತ್ತಿತ್ತೆಂದು ಸೂಚಿತವಾಗುತ್ತದೆ.

ಅಪ್ರಾಮಾಣಿಕನಿಗೂ, ಸತ್ಯವನ್ನು ತಿಳಿದಂಥ ಸ್ನೇಹಿತನನ್ನು ತ್ಯಾಜ್ಯಮಾಡುವವನಿಗೂ ವಾಕ್ಕಿನಲ್ಲಿ ಭಾಗವು ಸಿಗದು ಎಂದು ಆ ಸೂಕ್ತದ ಆರನೇ ಮಂತ್ರವು ಹೇಳುತ್ತದೆ :—

ಯಸ್ತಿ ತ್ಯಾಜಸಚಿವಿರಂ ಸಖಾಯಾ ನತಸ್ಯವಾಚ್ಯಪಿ ಭಾಗೋ ಅಸ್ತಿ ।

ಯದೀಂಶೃಣೋತ್ಯಲಕಂ ನ ಹಿ ಪ್ರವೇದ ಸುಕೃತಸ್ಯಪಂಥಾಂ ||೬||"

ಎಂಟನೇ ಮಂತ್ರದ ಅರ್ಥವಾದರೂ ಹೀಗಿರುತ್ತದೆ :—

"ಹೃದಯವು ರೂಪಿಸಿದ ಭಾವನೆಗಳಿಂದ ಪ್ರೇರಿತರಾಗಿ ಪರಸ್ಪರ ಸ್ನೇಹದಿಂದ ಕೂಡಿದ ಬ್ರಾಹ್ಮಣರು ಯಜ್ಞಮಾಡುತ್ತಾರೆ. ತಮ್ಮ ತಮ್ಮ ಸಾಧನೆಗಳಿಂದ ಹಾಗೆ ಮಾಡದೆ, ಎಲ್ಲೋ ಅಲೆದುಕೊಂಡು, ಆದರೂ ಬ್ರಾಹ್ಮಣರೆಂದು ಕರೆಸಿಕೊಳ್ಳಲಾಶಿಸುವರು. ಅವರಿಂದ ಎಷ್ಟೋ ದೂರ ಬಿಡಲ್ಪಡುತ್ತಾರೆ."

ಇಲ್ಲಿ "ಸಖಾಯಃ" ಎಂಬರೆ ತಮ್ಮ ವಾಗ್ವಿದ್ಯೆಯನ್ನು ಬೋಧಿಸಿ, ಇತರರನ್ನು ತನ್ನಂತೆಯೇ ಪ್ರೀತಿಸುವುದನ್ನು ಕಲಿತು, ಅದರಿಂದ ಹೃತ್ಪೂರ್ವಕವಾಗಿ ನಿಜವಾದ ಯಜ್ಞವನ್ನು ನೆರವೇರಿಸುವ ಸ್ನೇಹಿತರು ಎಂದರ್ಥ. ನಾಮಧಾರೀ ಬ್ರಾಹ್ಮಣರಾದ ಇತರರು ತಪ್ಪುದಾರಿಯಲ್ಲಿ ಅಲೆಯುವರು.

ಆಧ್ಯಾತ್ಮಜ್ಞಾನೋತ್ಪತ್ತಿಯನ್ನು ಹೇಳುವ"ಜಾತವಿದ್ಯೆ" ಯನ್ನು ಬ್ರಹ್ಮ(ಋತ್ವಿಕ್)ನು ಹೇಳುವನೆಂದು ಮೇಲ್ಕಂಡ ಸೂಕ್ತದ ಹನ್ನೊಂದನೆಯ ಮಂತ್ರವು ಹೇಳುತ್ತದೆ.

ಋಗ್ವೇದದ ದಶಮ ಮಂಡಲದ 125ನೇ ಇನ್ನೊಂದು ಸೂಕ್ತವು ವಾಗ್ವಿಷಯಕವಾದುದು. ಅದರಲ್ಲಿ ಕವಿಯು, ವಾಕ್ಕು ತನ್ನನ್ನೇ ತಾನು ಹೊಗಳಿಕೊಳ್ಳುವಂತೆ ಚಿತ್ರಿಸಿದ್ದಾನೆ. ಅದರ ಐದನೇ ಮಂತ್ರವು ಹೀಗೆ ಹೇಳುತ್ತದೆ:-

"ಅಹಮೇವಸ್ವಯಮಿದಂ ವದಾಮಿ. ಜುಷ್ಟಂ ದೇವೇಭಿರುತಮಾನುಷೇಭಿಃ।

ಯಂಕಾಮಯೇ ತಂ ತಮುಗ್ರಂ ಕೃಣೋಮಿ, ತಂಬ್ರಹ್ಮಾಣಂ, ತಂ ಋಷಿಂ, ತಂ ಸುಮೇಧಾಂ॥"

"ದೇವತೆಗಳೂ, ಮನುಷ್ಯರೂ, ಸಮಾನವಾಗಿ ಸ್ವಾಗತಿಸುವ ಶಬ್ದವನ್ನು ನಾನೇ ಜಗತ್ತಿಗೆ ಘೋಷಿಸುತ್ತಿದ್ದೇನೆ. ನನ್ನ ಪ್ರೀತಿಯ ಯಾರ ಮೇಲಿದೆಯೋ ಅಂಥವನನ್ನು ನಾನು ಮೇಧಾವಂತನನ್ನಾಗಿಯೂ,ಋಷಿಯನ್ನಾಗಿಯೂ, ಬ್ರಾಹ್ಮಣನನ್ನಾಗಿಯೂ ಮಾಡುತ್ತೇನೆ"

ಮುಂದಿನ ಮಂತ್ರದಲ್ಲಿ ಆಕೆಯು ಹೀಗೆ ಹೇಳುತ್ತಾಳೆ:-

"ಅಹಂ ರುದ್ರಾಯ ಧನುರಾತನೋಮಿ ಬ್ರಹ್ಮದ್ವಿಷೇ ಶರವೇ ಹಂತವಾ ಉ॥"

ಯಾವನು ಭಕ್ತಿಯನ್ನು ದ್ವೇಷಿಸುವನೋ, ಅವ
ಗಲುನಂತೆ ರುದ್ರನು ಬಾಣ ಪ್ರಯೋಗಮಾಡು
ವನಿಗೆ ನಾನು ಬಿಲ್ಲನ್ನು ಬಗ್ಗಿಸಿ ಸಹಾಯಮಾಡು

ನ್ನಿಲ್ಲಾ ವಿದ್ಯೆಯಲ್ಲದೆ ಮತ್ತಾರು ಮಾಡಬಲ್ಲರು ?
ಳುತ್ತಾಳೆ:—

ಂದ್ಯಾವಾ ಪೃಥಿವೀ ಆವಿವೇಶ"(ಮಂತ್ರ 6)
ಭೂ-ಸ್ವರ್ಗಗಳನ್ನು ವ್ಯಾಪಿಸಿದ್ದೇನೆ. ಪ್ರವೇಶಿಸಿ,
ು ಯೋಗ್ಯವಾಗಿರುವ ಅನೇಕ ಮನೆಗಳನ್ನುಳ್ಳ,
ಥಳಗಳಲ್ಲಿ ದೇವತೆಗಳಿಂದ ಪ್ರತಿಷ್ಠಾಪಿಸಲ್ಪಟ್ಟಿರುವ
ನು"

ಮತ್ತು 8ನೇ ಮಂತ್ರಗಳಲ್ಲಿ—

ರೋದಿವಾ ಪರಏನಾ ಪೃಥಿವ್ಯೈತಾವತೀ
ಹಿನಾ ಸಂಬಭೂವ"

ವಾದ ಈ ಭೂ-ಸ್ವರ್ಗಗಳಾಚೆ ನಾನು ಪ್ರಭಾ
ಡಿ ಅತ್ಯಂತ ಬಲಿಷ್ಠಳಾಗಿರುವೆ."

ಯೂ ವ್ಯಾಪಿಸಿ, ಎಲ್ಲ ಹೃದಯಗಳಲ್ಲಿಯೂ
ೇವರಲ್ಲದೆ, ಈ ರಾಣಿಯು ಇನ್ನಾರಾಗಿರಲು

7ರಲ್ಲಿ ಹೇಳುತ್ತಾಳೆ:—"ಅಹಂಸುವೇತರಂ
ರ್ಧನ್ ಮಮ ಯೋನಿ ರಪ್ಸ್ವಂತಃ ಸಮುದ್ರೇ"
ಶಿಖರಾಗ್ರದಲ್ಲಿ ನಾನು ಆ ತಂದೆಯನ್ನು
."

ಗರ್ಭದಿಂದ ಅವನ ಸ್ವಂತ ಮಗನನ್ನೇ
ದ ಎಂಬೀ 'ಪ್ರತಿಮೆ'ಯಿಂದ ತಂದೆ-ಪ್ರಜಾ
ಜ್ಞಾನಿಯ ಪರಮೋಚ್ಚ ಧ್ಯೇಯವಾಗಿತ್ತು
ದರ ಅರ್ಥ ಎಂದು ನಾವು ಇದನ್ನು ವರ್ಣಿ
ಅಡ್ಡಿಯೂ ಇಲ್ಲ.

ನ ಮತ್ತೊಂದು ರೂಪವೇ ಪುತ್ರನೆಂಬುದು
ಬ್ರಾಹ್ಮಣದ ಹರಿಶ್ಚಂದ್ರೋಪಾಖ್ಯಾನದಲ್ಲಿ

ಗಂಡನು ಹೆಂಡತಿಯ ಹೊಟ್ಟೆಯಲ್ಲಿ ಮಗನಾಗಿ ಹುಟ್ಟು ತ್ತಾನೆ, ಆದ್ದರಿಂದ ಹೆಂಡತಿಯು 'ಜಾಯಾ' ಎನ್ನಿಸಿ ಕೊಳ್ಳುತ್ತಾಳೆ ಎಂದು ಹೇಳಲ್ಪಟ್ಟಿದೆ.

> ತತ್ ಜಾಯಾ ಜಾಯಾಭವತಿ ಯತ್ ಅಸ್ಯಾಂ
> ಜಾಯತೇ ಪುನಃ"

ಇಂತಹ ಸರ್ವಾಂತರ್ಯಾಮಿ ಯಾದ ಭಗವಂತನು ವಿಶ್ವದ ಶಿಖರಾಗ್ರದಲ್ಲಿ ಇರಲಾರನೇ ?

"ಪ್ರಜಾಪತಿ" ಎಂಬ ಹೆಸರಿನಿಂದಲೇ ಸೂಚಿತವಾಗುವ ಪ್ರಜಾಪತಿಯ ಪುತ್ರೀ-ಪತಿತ್ವದ ಒಗಟೆಯು ಈ ರೀತಿಯ ದೆಂದು ಕಾಣಬರುತ್ತದೆ. ಒಂದು ಶಬ್ದವು ನಾನಾರ್ಥ ಗಳಿಗೆಡೆ ಗೊಡುವುದಾದಾಗ ವಿವಿಧಕವಿಗಳು ವಿವಿಧರೀತಿ ಯಲ್ಲಿ ಅದರ ವ್ಯಾಖ್ಯಾನಕ್ಕೆ ತೊಡಗುವರು. ನಾವೆಲ್ಲರೂ ಅವನ ಪ್ರಜರು—ಮಕ್ಕಳು; ನಾವು ಪ್ರಜಾ ಎಂಬ ಶಬ್ದದ ಲಿಂಗಕ್ಕನುಸಾರವಾಗಿ ಹೆಂಗಸರಾದರೆ ನಾವು ಅವನನ್ನು ಪತಿಯನ್ನಾಗಿ ಪ್ರೀತಿಸುತ್ತೇವೆ. ಹೀಗೆ ಅವನು ಶಬ್ದಶಃ ಪ್ರಜಾ-ಪತಿಯಾಗುತ್ತಾನೆ.

"ಅವರು ಗಂಡಸರೆಂದು ಹೇಳಿಕೊಂಡರೂ ನಿಜವಾಗಿ ಅವರು ಹೆಂಗಸರೇ. ಇದನ್ನು ತಿಳಿದವನೇ ಪಂಡಿತನು" ಎಂದು ಹೇಳುವ ಋಗ್ವೇದದ I-164 – 16ನೇ ಮಂತ್ರ ದಲ್ಲಿ ಬರುವ "ಸ್ತ್ರಿಯಃಸತಿಃ" ಎಂಬ ಸಮಸ್ಯಾತ್ಮಕ ಮಂತ್ರಕ್ಕೂ ಬಹಳ ಮಟ್ಟಿಗೆ ಇದೇ ಅರ್ಥವಿರಬೇಕು.

"ಪುತ್ರೀ—ಪತಿ" ಎಂದರೆ ತನ್ನ ಪುತ್ರಿಯ ಗಂಡನಾಗ ಬಹುದು. ಅಥವ ಇನ್ನೊಬ್ಬರ ಮಗಳ ಗಂಡನಾಗ ಬಹುದು. ಮೊದಲನೇ ಅರ್ಥವಾದರೆ ಮೇಲೆ ಹೇಳಿದಂತೆ ಎರಡು ವಿಧವಾದ ಒಗಟೆಗಳು ಹುಟ್ಟಿಕೊಳ್ಳುತ್ತವೆ. ಎರ ಡನೇ ಅರ್ಥವಾದರೆ ಜ್ಞಾನಿಯು ಬೇರೆಯವನಾದರೂ ದೇವರಿಗೆ ಸಮಾನನಾಗುತ್ತಾನೆ. ಅವನ ಸ್ವಂತವಿದ್ಯಾ, ಶ್ರದ್ಧಾ, ಭಕ್ತಿ—ಈ ಎಲ್ಲಕ್ಕೂ ಒಂದೇ ಅರ್ಥ—ಅವನ ಆಧ್ಯಾತ್ಮಿಕ ಪುತ್ರಿಯಾಗುತ್ತಾಳೆ. ವಿದ್ಯೆಯು ದೇವರ ಮೇಲಿನ ಪರಮ ಪ್ರೇಮವನ್ನು ಬೋಧಿಸುವುದಲ್ಲವೇ ? ಜ್ಞಾನಿಯು ದೇವರಿಗೆ ಅವಳನ್ನು ಮದುವೆ ಮಾಡುತ್ತಾನೆ, ಮತ್ತು ಅವನನ್ನು ತನ್ನ ಅಳಿಯನನ್ನಾಗಿ ಮಾಡಿಕೊಳ್ಳು ತ್ತಾನೆ. ದೇವರನ್ನು ಅಳಿಯನನ್ನಾಗಿ ಮಾಡಿಕೊಳ್ಳುವ

ಭಾವವು ಕೆಲವು ಪೌರಾಣಿಕ ಕಥೆಗಳಲ್ಲಿ ಚಿತ್ರಿತವಾಗಿರುತ್ತದೆ.

ಹೀಗೆ ವಾಕ್ ಅಥವಾ ಮಾತು ಮನಸ್ಸಿನ ಮಗಳು ಅಥವಾ ಹೆಂಡತಿ ಅಥವಾ ಎರಡೂ—

"ತನೂನಪಾತ್" ಅಗ್ನಿಯ ಜ್ಞಾನವಾದ ತನೂನ ಪಾತ್ರವು ಮನಸ್ಸಾದ ಪ್ರಜಾಪತಿಯಲ್ಲಿ ಇರುತ್ತದೆ ಎಂಬ ತೈತ್ತಿರೀಯ ಸಂಹಿತೆಯ III, 1, 2, 2 ರಲ್ಲಿ ಹೇಳಲ್ಪಡುವ ಮನಸ್ಸು ಪ್ರಜಾಪತಿಯೆಂದು ಅರ್ಥವಾಗುತ್ತದೆ. ಅದೇ ತೈ. ಸಂ. V, 1,3,3, ಹೀಗೆ ಹೇಳುತ್ತದೆ :— ಮನಸ್ಸು ಯಾವುದನ್ನು ಹಿಂಬಾಲಿಸುತ್ತದೋ ಅದನ್ನು ಅವನು ಮಾತಿನಿಂದ ವ್ಯಕ್ತ ಪಡಿಸುತಾನೆ (ಯತ್ ಪುರುಷೋಮನಸಾಭಿ ಗಚ್ಛತಿ, ತದ್ ವಾಚಾವದತಿ) ಒಬ್ಬ ಕವಿಯು ಮಾತು ಮನಸ್ಸಿನ ಹೆಂಡತಿ ಅಥವಾ ಮಗಳು ಎಂದು ಹೇಳಿದರೆ, ಇನ್ನೊಬ್ಬನು ತನಗೆ ತಿಳಿದಂತೆ ಇನ್ನೊಂದು ವಿಧವಾಗಿ ಹೇಳಲು ಯಾವ ಅಡ್ಡಿಯೂ ಇರುವುದಿಲ್ಲ.

ಎಲ್ಲ ದೇವತೆಗಳಿಗೆ ಕೊಡುವಂತೆ ಪ್ರಜಾಪತಿಗೂ ಹವಿರ್ಭಾಗವನ್ನು ಕೊಡುವಾಗ, ಉಕ್ತವಾದ ಮಂತ್ರಗಳನ್ನೂ ಗಟ್ಟಿಯಾಗಿ ಬಾಯಿಂದ ಹೇಳದೆ, ಮನಸ್ಸಿನಲ್ಲಿ ಹೇಳಿಕೊಂಡು ಮೌನವಾಗಿ ಅರ್ಪಿಸಲ್ಪಡುವುದರಿಂದ ಈ ಕೆಳಗೆ ಹೇಳುವಂಥ ಕಥೆಯು ಹುಟ್ಟಿರುವಂತೆ ಕಾಣುತ್ತದೆ—

"ನಾನು ಮಾತ್ರ ಹವಿಸ್ಸನ್ನು ದೇವತೆಗಳಿಗೆ ಅರ್ಪಿಸಬಲ್ಲೆ" ಎಂದು ಹೇಳುತ್ತಾ ಮಾತು ಮತ್ತು ಮನಸ್ಸು ಪರಸ್ಪರ ಸ್ಪರ್ಧಿಸುವಂತೆ ತೀರ್ಮಾನಕ್ಕಾಗಿ ಪ್ರಜಾಪತಿಯನ್ನು ಸಮೀಪಿಸಿದುವು ಅವನು ವಾಕ್ಕಿಗೆ ಹೇಳಿದನು :— ನೀನು ಮನಸ್ಸಿನ ದೂತಿ ಏಕೆಂದರೆ ಮನಸ್ಸು ಏನನ್ನು ಭಾವಿಸುತ್ತದೆಯೋ ನೀನು ಅದನ್ನು ಮಾತುಗಳಿಂದ ಹೊರಗೆಡಹುತ್ತಿಯೇ". ಅದಕ್ಕೆ ವಾಕ್ ಎಂದಿತು :— ಹಾಗಾದರೆ ಅವರು (ಯಜ್ಞಕರ್ತೃಗಳು) ನಿನಗೆ ಮಾತುಗಳಿಂದ ಹವಿಸ್ಸನ್ನು ಕೊಡುವುದೇ ಬೇಡ' ಆದ್ದರಿಂದ ಪ್ರಜಾಪತಿಗೆ ಮನಸ್ಸಿನಿಂದಲೇ ಹವಿಸ್ಸಮರ್ಪಣೆ. ಒಂದು ರೀತಿಯಲ್ಲಿ ಮನಸ್ಸೇ ಪ್ರಜಾಪತಿಯು (ತೈ.ಸಂ. II, 5, 11.4ss)· ಭೃಗುವು ಬ್ರಹ್ಮ ಅಥವಾ ಪ್ರಜಾಪತಿಗೆ ನನಗೆ ಪೂಜೆ ಸಲ್ಲುವ ಯಾವ ರೂಪವೂ ಇಲ್ಲದೇ ಹೋಗಲಿ ಎಂದು ಶಪಿಸಿದನೆಂಬ ಪೌರಾಣಿಕ ಕಥೆ ಇದೇ ಆಧಾರವಾಗಿರಬಹುದು. ಇದೆಲ್ಲವೂ ಹೆ ಪ್ರಜಾಪತಿಯು ಮನಸ್ಸಾಗಿ ಭಾವಿಸಲ್ಪಟ್ಟನೆಂಬುದ ವಿವರಿಸುತ್ತದೆ.

ವೈದಿಕ ಸಾಹಿತ್ಯವು ಎಲ್ಲೆಲ್ಲಿ ಸೃಷ್ಟಿಯ ವಿಷಯವ ಹೇಳುತ್ತದೋ ಅಲ್ಲೆಲ್ಲಾ ವಾಕ್ಕಿನ ಮುಖಾಂತರವೇ ಸೃಷ್ಟಿಯುಂಟಾಯಿತು ಎಂಬ ಭಾವವನ್ನು ಒ ಒಂದು ರೂಪದಲ್ಲಿ ಹೇಳಿರುತ್ತದೆ. ಪ್ರಜಾಪತಿ ತನ್ನ ಮಗಳನ್ನೇ ಪ್ರೀತಿಸಿದನೆಂದು ಐತರೇ ಬ್ರಾಹ್ಮಣದಲ್ಲಿ ಹೇಳುತ್ತದೆ. ಅಲ್ಲಿ ಇನ್ನೂ ಕ ಹೊಸ ಒಗಟೆಗಳು ಬರುತ್ತವೆ ಅವನ್ನು ದಂತೆಲ್ಲಾ ಪ್ರಜಾಪತಿಯ ನಿಷ್ಕಳಂಕ ಸ್ವಭಾವವು ವಾಗುತ್ತದೆ.

ದೇವರೆಂಬುವನು ಒಬ್ಬನೇ, ಅವನೇ ಇವೆಲ ಎಲ್ಲಾ ಜೀವಿಗಳೂ—ಆದನು. ಅವೆಲ್ಲದರಲ್ಲಿ ನಾನಾ ಪ್ರಕಾರದಲ್ಲಿ ಇರುತ್ತಾನೆ. ಎಲ್ಲದರಲ್ಲಿ ಇರುವವನು ಅವನೊಬ್ಬನೇ, ಅದರಲ್ಲಿ ಭೇದವಿಲ್ಲ ತೆಯಿಲ್ಲ. ಇದರ ಉದ್ದೇಶವು ಎಲ್ಲ ಜೀವಿಗ ತನ್ನಂತೆ ಭಾವಿಸುವುದಾಗಬೇಕು ಎಂದು ಋ ಹೇಳಿದ್ದರೆ, ಅದನ್ನೇ ಉಪನಿಷತ್ತುಗಳು ಆತ್ಮ ಅದ್ವಿತೀಯನೆಂದೂ, ಅವನೇ ಇದೆಲ್ಲವೂ ಆ ಹೇಳಿರುತ್ತವೆ.

ಆತ್ಮನೆಂಬ ಶಬ್ದವು ಹೊಸದಲ್ಲ. ಮನುಷ್ಯನ ತತ್ತ್ವವೆಂಬರ್ಥದಲ್ಲಿ ಅದು ಋಗ್ವೇದದಲ್ಲಿ ಬಂದಿ ಉಪನಿಷತ್ತುಗಳು ಈ ಎಲ್ಲರನ್ನೂ ಪ್ರೀತಿಸುವ ನಿಜವಾದ ಜೀವನ ಎಂದು ಬೋಧಿಸಬೇಕಾಗಿ ಈ ಹಳೆಯ ಆತ್ಮ ಶಬ್ದವನ್ನೇ ಅದನ್ನೂ ಕೂಡ ಸಲು ಉಪಯೋಗಿಸಿಕೊಂಡಿವೆ.

ನಮ್ಮ ವೈಯ್ಯಾಕರಣರು ಆತ್ಮ ಶಬ್ದವು ಎಂಬ ಪ್ರತ್ಯಯದಿಂದೊಡಗೂಡಿದ ಆತ್ = ಚಲಿಸು ಎಂಬ ಧಾತುವಿನಿಂದ ಹುಟ್ಟಿದೆಯೆ ಸ್ಥಾವರವಾಗಿ ಬೆಳೆದಿರುವ ಕಲ್ಲು ಮುಂತಾದವು ತದ್ವಿರುದ್ಧವಾಗಿ ಜೀವ ಎಂದರೆ ಚಲಿಸತಕ್ಕುದು

ಾಗುತ್ತದೆ. ಋಗ್ವೇದದಲ್ಲಿ, ಜೀವಕ್ಕೆ ಆತ್ಮ್ಶಬ್ದದ ಜೊತೆಗೆ 'ತ್ಮ್'ಎಂಬ ಶಬ್ದವನ್ನೂ ಪ್ರಯೋಗಿಸಲಾಗಿದೆ. ಾಣಿನಿ 6, 4, 14ರ ಪ್ರಕಾರ ವೇದದಲ್ಲಿ ಆತ್ಮಶಬ್ದವನ್ನು ತೃತೀಯಾರ್ಥದಲ್ಲಿ ಉಪಯೋಗಿಸಿದಾಗ ಆತ್ಮಶಬ್ದದೊಳ ದ 'ಆ'ವನ್ನು ಬಿಟ್ಟಿರುತ್ತಾರೆ. ಆದರೆ ಒಬ್ಬ ವಾರ್ತಿಕ ಾರನು ಹೇಳುವಂತೆ 'ಆ'ಉಪಸರ್ಗವನ್ನು ಇತರ ವಿಭಕ್ತಿ ಗಳಲ್ಲೂ ಬಿಟ್ಟಿರುತ್ತಾರೆ. ವಾಸ್ತವವಾಗಿ ಋಗ್ವೇದದಲ್ಲಿ ತ್ಮನ್' ಶಬ್ದವನ್ನು ತೃತೀಯಾವಿಭಕ್ತಿಯಲ್ಲೇ ಅಲ್ಲ' ತೀಯಾ ಸಪ್ತಮೀ ವಿಭಕ್ತಿಗಳಲ್ಲೂ ಉಪಯೋಗಿಸಿರು ತ್ತಾರೆ. (ಪ್ರೊ॥ಮ್ಯಾಕ್ಸ್‌ಮುಲ್ಲರ್ ಅವರ ಋಗ್ವೇದದ ಕಾರಾನು ಕ್ರಮಣಿಕೆಯನ್ನು ನೋಡಿ) ಆತ್ಮಶಬ್ದವು 'ಆ' ಪ್ರತ್ಯಯದಿಂದೊಡಗೂಡಿ ತ ಅಥವಾ ತನ್ =ವಿಸ್ತರಿಸು, ಪ್ರಸರಿಸು, ಎಂಬ ಧಾತುವಿನಿಂದ ಹುಟ್ಟಿರಲೂ ಸಾಧ್ಯ. ಗ ಆತ್ಮಶಬ್ದಕ್ಕೆ ವಿಶಾಲಗೊಂಡುದು ಅಥವಾ ವ್ಯಾಪಕ ಾದುದು (ಆ =ಸಮಂತಾತ್)ಎಂದು ಅರ್ಥವಾಗುತ್ತದೆ. ಜೀವವು ಶರೀರವೆಲ್ಲವನ್ನೂ ವ್ಯಾಪಿಸಿರುತ್ತದೆ. ಉಪನಿಷತ್ತು ಳ ಅನಂತ ಆತ್ಮವು ಸರ್ವತ್ರ ವ್ಯಾಪಕವಾದುದು.

ಉಪನಿಷತ್ತುಗಳು ಉಪಯೋಗಿಸಿರುವ ಮತ್ತೊಂದು ಬ್ದವೆಂದರೆ—ನಪುಂಸಕ ಲಿಂಗದ 'ಬ್ರಹ್ಮ'ಎಂಬ ಪದ. ಈ ಪದವೂ ಕೂಡ ಋಗ್ವೇದದಲ್ಲಿ ಬಹುವಾಗಿಬಂದಿದೆ. ಇದರ ಅರ್ಥ 'ಶಬ್ದ' ಅಥವಾ 'ಗೀತೆ' ಎಂದಾಗುತ್ತದೆ. ಬೃಂಹ್ =ಧ್ವನಿಮಾಡು ಎಂಬ ಧಾತುವಿನಿಂದ ಈ ಶಬ್ದವು ಹುಟ್ಟಿರುವಂತೆ ಕಾಣುತ್ತದೆ. ಶಬ್ದವನ್ನು ಬೃಹತ್, ಬೃಹತೀ ಎಂತಲೂ ನಿರ್ದೇಶಿಸಿದ್ದಾರೆ. ಬೃಹ್= ಹರಿ, ಹೊರ ಹೊರಡು, ಬೆಳೆ, ಎಂಬ ಧಾತುವಿನಿಂದ ಇವುಗಳ ಉತ್ಪತ್ತಿ. ಆದ್ದರಿಂದ ಬೃಹಸ್ಪತಿ ಅಥವಾ ಬ್ರಹ್ಮಣಸ್ಪತಿ ಎಂದರೆ ಶಬ್ದಾಧಿಪತಿ (ಮಾತುಗಳ ಒಡೆಯ) ಎಂದರ್ಥ ವಾಗುತ್ತದೆ. ಇದು ಬೃಹದಾರಣ್ಯಕ 1-3-20ರಲ್ಲಿ ಸ್ಪಷ್ಟ ವಾಗಿ ವಿವರಿಸಲ್ಪಟ್ಟಿದೆ. ಮಾತು ಮನಸ್ಸಿನ ವ್ಯಕ್ತಸ್ವರೂಪ ಆದ್ದರಿಂದ ಬ್ರಹ್ಮನೆಂಬ ಹೆಸರು ದೇವರಿಗೆ ಸೃಷ್ಟಿಕರ್ತ ನೆಂಬುದಾಗಿ ಅನ್ವಯಿಸಲ್ಪಟ್ಟಾಗ, ರೂಪ ರಚನಾತ್ಮಕ ಶಬ್ದಗಳ ರೂಪದಲ್ಲಿ ಮನಸ್ಸು ವ್ಯಕ್ತವಾಗಿದೆ, ಎಂಬ ಅರ್ಥ ದಲ್ಲಿ ಪ್ರಯೋಗಿಸಲ್ಪಟ್ಟಿರಬೇಕು.

ಬ್ರಹ್ಮ್ ಎಂದರೆ ಋತ್ವಿಕ್ ಎಂತಲೂ ಅರ್ಥವಾಗು ತ್ತದೆ. ಹಾಗೆಯೇ ಪುರೋಹಿತ ವರ್ಗಕ್ಕೂ ಈ ಮಾತು ಸಾಮೂಹಿಕವಾಗಿ ಉಪಯೋಗಿಸಲ್ಪಟ್ಟಿದೆ. ಹಾಗೆಯೇ ಕ್ಷತ್ರಂ ಎಂಬ ನಪುಂಸಕಲಿಂಗಶಬ್ದವು ಯೋಧವರ್ಗಕ್ಕೆ ಉಪಯೋಗಿಸಿರುವ ಸಾಮೂಹಿಕನಾಮ. ಅನೇಕ ಸಂದ ರ್ಭಗಳಲ್ಲಿ ತೈತ್ತಿರೀಯ ಸಂಹಿತೆಯಲ್ಲಿ ಬೃಹಸ್ಪತಿಯನ್ನು ಬ್ರಹ್ಮ್(ನಪುಂ) ಎಂತಲೇ ಕರೆದಿದ್ದಾರೆ. ಇದರ ಅರ್ಥ ಇವನು ದೇವತೆಗಳ ಪುರೋಹಿತನೆಂದು–ಉದಾಹರಣೆಗೆ ಈ ಕೆಳಗಿನವುಗಳನ್ನು ನೋಡಿ:—"ಬ್ರಹ್ಮಾವೈ ದೇವಾನಾಂ ಬೃಹಸ್ಪತಿಃ"(II,2,9,1, ಮತ್ತು III,1,1,4,)

"ಇಂದ್ರೋ ವೈರಾಜನ್ಯೋ, ಬೃಹಸ್ಪತಿ ಬ್ರಹ್ಮಾ" (II,4,13,8) ಇತ್ಯಾದಿ,

—ಮುಂದುವರಿಯುವುದು

---

(ಪು. 39 ರಿಂದ ಮುಂದುವರಿದುದು)

(೮) ಗೂಳೂರಿನ ಸಿದ್ಧವೀರಣಾರ್ಯರ ಸಂಪ್ರದಾಯ ಕ್ಕೆ ಸೇರಿದ ಪರ್ವತೇಶ(ಕ್ರಿ.ಶ. ಸು ೧೭೫೦) ನೆಂಬುವನು 'ಚತುರಾಚಾರ್ಯಪುರಾಣ' ವೆಂಬ ಗ್ರಂಥ ಬರೆದಿದ್ದಾನೆ.

(9) ವಿರಕ್ತ ತೋಂಟದಾರ್ಯ (ಕ್ರಿ.ಶ. ಸು. ೧೫೬೦) ಸಿದ್ದೇಶ್ವರಪುರಾಣ, ಪಾಲ್ಕುರಿಕೆ 'ಸೋಮೇಶ್ವರ ಪುರಾಣ,' 'ನಿರಂಜನ ಶತಕ' ಗಳೆಂಬ ಗ್ರಂಥ ರಚಿಸಿದ್ದಾನೆ.

(10) ಎಡೆಯೂರಿನಲ್ಲಿ ಐಕ್ಯರಾಗಿರುವ ಹರದನಹಳ್ಳಿ ಶೂನ್ಯಪೀಠಾಧಿಪತಿ ನಿರಂಜನ ಜಗದ್ಗುರು ತೋಂಟದ ಸಿದ್ಧಲಿಂಗಯತಿಗಳು 'ಷಟ್ಸ್ಥಲ ಜ್ಞಾನಾಮೃತಸಾರ'ವೆಂಬ ಗ್ರಂಥವನ್ನು ಬರೆದಿದ್ದಾರೆ. ಇವರ ಕಾಲ ಕ್ರಿ.ಶ ೧೪೭೦.

(11) ಚೇರಮಾಂಕ ನೆಂಬ ಕವಿ ಚೇರಮಕಾರ್ಯ ವನ್ನು ಬರೆದಿದ್ದಾನೆ ಈತನ ಕಾಲ ಕ್ರಿ.ಶ. ಸು ೧೫೨೬. ಇವನು ತುಮಕೂರು ಜಿಲ್ಲೆಯವನೇ ಆಗಿದ್ದಾನೆ.

(ಪುಟ 48ಕ್ಕೆ ಮುಂದುವರಿದಿದೆ,)

# "ಸತ್ಯಾನ್ವೇಷಣೆ"—ಲೋಕೋದ್ಧಾರ ಪಥ: ಸತ್ಯದ ಒಲವು

ಜಿ. ವಿ. ನಾರಾಯಣಮೂರ್ತಿ

ಸತ್ಯದ ಶುದ್ಧ ಮತ್ತು ಸೌಂದರ್ಯದ ಬಗೆಗೆ ಜಗತ್ತಿನ ಅನೇಕ ದಾರ್ಶನಿಕರ ಅಭಿಪ್ರಾಯವನ್ನಿಲ್ಲಿ ಕ್ರೋಢೀಕರಿಸಿ ಪ್ರಕೃತ ಲೇಖಕರು ಆಧುನಿಕ ವಿಜ್ಞಾನ ಪ್ರಪಂಚ ಸತ್ಯದೊಡನೆ ಹೇಗೆ ಓತಪ್ರೋತಗೊಂಡರೆ ಜಗದುದ್ಧಾರವಾದೀತೆಂಬುದನ್ನು ತೋರಿಸಿದ್ದಾರೆ. "ಸತ್ಯಾನ್ನಾಸ್ತಿ ಪರೋಧರ್ಮಃ" "ಸತ್ಯಮೇವ ಜಯತೇ ನಾನೃತಂ" ಇತ್ಯಾದಿ ಮಾತುಗಳನ್ನು ಎಂದಿನಿಂದಲೂ ಭಾರತೀಯರು ಹೇಳುತ್ತಲೇ ಬಂದಿದ್ದಾರೆ. ಅದು ಕೇವಲ ವಾಙ್ಮಯವಾಗದೆ ಕ್ರಿಯಾಚಾರಕ್ಕೆ ಬರಲೆಂಬುದೇ ಪ್ರಕೃತ ಲೇಖಕರ ಕಳಕಳಿಯ ಅಭಿಪ್ರಾಯವಾಗಿದೆ.

—ಸಂ

ಮಹಾತ್ಮಾ ಗಾಂಧೀಜೀ ತಮ್ಮ ಬಾಳನ್ನು 'ಸತ್ಯಾನ್ವೇಷಣೆ'ಗೆ ಮೀಸಲಿಟ್ಟರು. ಅವರ ಸಕಲ ಕರ್ಮಗಳೂ ಸತ್ಯದ ಬೆಳಕಿನಲ್ಲಿ, ಸತ್ಯದ ಗುರಿ ಸಾಧನೆಗೆ ಸಾಗಿದವು. 'ಸತ್ಯ ಶೋಧನೆ' 'ಸತ್ಯ ಸಾಕ್ಷಾತ್ಕಾರ' ಇವು ಅವರ ನಿತ್ಯ ನಿರಂತರ ವ್ರತವಾಗಿದ್ದವು ಆಧುನಿಕ ಕಾಲದಲ್ಲಿ ಸತ್ಯದ ಪ್ರಭೆಯನ್ನೂ, ಸತ್ವವನ್ನೂ ಪ್ರಕಾಶಗೊಳಿಸಿದ ಅದ್ವಿತೀಯ ಮಹನೀಯರವರು.

ವೈದಿಕ ದೃಷ್ಟಾರ ಋಷಿ ಯಾವ ಸಮೀಚೀನ ಸಮಯದಲ್ಲಿ 'ಅಸತೋ ಮಾ ಸದ್ಗಮಯ' ಅಸತ್ಯದಿಂದ ಸತ್ಯದ ಕಡೆಗೆ ನಡೆಸು) ಎಂದು ಪ್ರಾರ್ಥನೆ ಸಲ್ಲಿಸಿದನೋ ಅಂದಿನಿಂದ ಸತ್ಯದ ಒಲವು ಮಾನವನ ಅಂತಃಕರಣವನ್ನು ಸೆರೆ ಹಿಡಿದಿದೆ. ಸತ್ಯದ ವಿವಿಧ ಪ್ರಕಾರಗಳ ಬಗೆಗೆ ಅನ್ವೇಷಣೆ ನಡೆಸಿ, ಅದರ ರೂಪು ರೇಖೆಗಳನ್ನೂ ಹೀಗೆಂದು ಕಂಡು, ಅನುಭವಿಸಿ ಉದ್ಗರಿಸಿದ ಮಹಾನುಭಾವರಿಗೆ ಕಡಿಮೆಯಿಲ್ಲ. ಭಾರತ ಸತ್ಯಾನ್ವೇಷಣೆಯ ನೆಲೆವೀಡು.

## ಪ್ರವಾದಿಗಳ ನುಡಿ

**ಸತ್ಯಾನ್ವೇಷಣೆ ಅತ್ಯಾಹತ** :—ಬುದ್ಧ ಭಗವಾನ್ ಸತ್ಯವನ್ನು ಕುರಿತು ನುಡಿದ ಈ ಮಾತು, ಜಗತ್ತಿಗೆ ತಾರಕೋಪದೇಶದಂತಿದೆ ಸತ್ಯವನ್ನು ಕಂಡವನು ಸುಖಿ. ಸತ್ಯವೋ ಮಹತ್ತರವಾದುದು; ಕೆಡುಕಿನಿಂದ ದೂರವಾಗಲು ಸತ್ಯವೊಂದೇ ಸಾಧನ. ಜಗತ್ತಿನಲ್ಲಿ ಸತ್ಯವನ್ನು ಬಿಟ್ಟರೆ ಬೇರೆ ಇನ್ನೊಂದು ರಕ್ಷಕ ಶಕ್ತಿಯಿಲ್ಲ" ಜೀಸಸ್ ಸುತ್ತಿನಂಥ ಮಾತನ್ನು ಆಡಿದ್ದಾನೆ. "ನೀನು ಸತ್ಯವನ್ನು ಅರಿಯಬೇಕು, ಅದೇ ನಿನಗೆ ಮುಕ್ತಿದಾಯಕ".

ಜಗತ್ತಿನ ಎಲ್ಲ ಧರ್ಮಗಳೂ ಪ್ರವಾದಿಗಳೂ ಸತ್ಯದ ಹಿರಿಮೆಯನ್ನು ಸಾರಿದ್ದಾರೆ. ಸತ್ಯ ಸಾಕ್ಷಾತ್ಕಾರ ಹೊಂದಿದವನು ಮುಕ್ತಜೀವಿ, ಸ್ವರಾಟ್, ಆನಂದಮಯಿ ಎಂದು ಘೋಷಿಸಿದ್ದಾರೆ. ಹೀಗೆಯೇ ಎಲ್ಲ ದೇಶಗಳ ಎಲ್ಲ ಕಾಲಗಳ ವಿಚಾರವಂತರು, ತತ್ತ್ವಜ್ಞಾನಿಗಳು, ವಿಜ್ಞಾನಿಗಳು ಸತ್ಯದ ಅರಿವು ಪರಮ ಅರಿವೆಂದರಿತು, ಜ್ಞಾನದ ಪರಾಕಾಷ್ಠವೆಂದು ಗೋಪುರ ಹತ್ತಿ ಸಾರಿದ್ದಾರೆ; ಅಂತೆಯೇ ಅವರ ಅನ್ವೇಷಣೆಯ ಪಥ ಹಿಡಿದು ಬದುಕಿನ ಸಾವಿನ ಬವಣೆಗಳನ್ನು ತೃಣೀಕರಿಸಿದ್ದಾರೆ. ನೋವು, ದುಃಖ, ಸಾವು ಯಾವುದೂ ಅವರಿಗೆ ಗಣನೆಗೆ ಬಾರದುದಾಗಿದೆ. ಈ ಪಥದಲ್ಲಿ ಅಂಥವರು ಇಂಥವರು ಎಂಬ ವ್ಯತ್ಯಾಸವಿಲ್ಲ. ಜನಕನಂಥ ರಾಜರಿದ್ದಾರೆ; ಧ್ರುವನಂಥ ಬಾಲಕರಿದ್ದಾರೆ; ಮೈತ್ರೇಯಿಯಂಥ ಮಹಿಳೆಯರಿದ್ದಾರೆ; ಸಾಕ್ರಟೀಸನಂಥ ವಿಚಾರಪಟುಗಳಿದ್ದಾರೆ; ಗೆಲಿಲಿಯೋ ಮತ್ತು ನ್ಯೂಟನ್ನರಂಥ ವಿಜ್ಞಾನಿಗಳಿದ್ದಾರೆ; ಹೆಚ್ಚೇನು, ಮಾನವನ ಮನಸ್ಸು, ಪರಸತ್ಯದ ಅಮಲನ್ನು ಹೊಂದಿ ಎಲ್ಲೆಲ್ಲಿ ಕಾರ್ಯೋನ್ಮುಖವಾಗಿದೆಯೋ ಅಲ್ಲೆಲ್ಲ ಸತ್ಯದ ಸಾಕ್ಷಾತ್ಕಾರಕ್ಕೆ ಲಗುಬಗೆಯ ಕ್ರಿಯೆ ಸಾಗಿದೆ. ಹೀಗೆ, ವೈದಿಕ ಋಷಿ ಕಂಡ ಸತ್ಯ,ಬುದ್ಧ ಕಂಡ ಸತ್ಯ. ಜೀಸಸ್,

ಮೊಹಮ್ಮದ್ ಮೊದಲಾದ ಪ್ರವಾದಿಗಳು ಕಂಡ ಸತ್ಯ, ಸಂತ-ಸಾಧುಗಳು ಕಂಡ ಸತ್ಯ, ವಿಚಾರವಂತರು ಕಂಡ ಸತ್ಯ ವಿಶ್ವವ್ಯಾಪಕ : ಕಾಲ-ದೇಶ ಅಬಾಧಿತ ಸತ್ಯ ವಾದರೆ, ಆ ಆ ಪ್ರಮುಖರ ಪಂಥವನ್ನು ಅನುಸರಿಸಿದರು. ಕಾಣಲಪೇಕ್ಷಿಸಿ, ಅನುಷ್ಠಿಸುವ ಸತ್ಯ ಪರಿಮಿತ ವ್ಯಾಪ್ತಿ ಯುಳ್ಳದ್ದಾಗಿ, ' ನಾನ್ಯದಸ್ತೀತಿ ವಾದಿನಃ ' ಎಂಬಂತೆ (ಇದನ್ನು ಬಿಟ್ಟರೆ ಬೇರೆ ಸತ್ಯವಿಲ್ಲ)'ವಾದ'ಕ್ಕೆ ಎಡೆಗೊಟ್ಟು ಸತ್ಯಾನ್ವೇಷಣೆ-ನಿಷ್ಠುರತೆಗೆ ಉಗ್ರತೆಗೆ, ಅಂಧಭಾವಕ್ಕೆ ಎಡೆಗೊಟ್ಟಿದೆ. ಸತ್ಯಾನ್ವೇಷಣೆಯಲ್ಲಿ ಪಂಥಭಾವ ಇಂಥ ಪರಿಣಾಮಕ್ಕೆ ಅವಕಾಶ ಮಾಡಿಕೊಡುತ್ತದೆಂದು ಅರಿತ ಬುದ್ಧ ಭಗವಾನ್ ನುಡಿದ ಈ ಮಾತುಗಳು, ಸತ್ಯಾನ್ವೇಷಕರೆಲ್ಲರ ಗಮನದಲ್ಲಿ ಸದಾ ಇರಬೇಕಾದ ಅಂಶವೆನಿಸುತ್ತದೆ. "ಕೇಳಿದುದನ್ನೇ ನಂಬಬೇಡ, ಪರಂಪರೆಯನ್ನೇ ನಂಬಬೇಡ; ಏಕೆಂದರೆ ಅವು ಶತಮಾನಗಳಿಂದ ಹಾಗೆ ಬಂದವು. ಅನೇಕರು ಆಡಿಕೊಳ್ಳುವ ಮಾತೇ ಸತ್ಯವೆಂದು ನಂಬಬೇಡ; ಪ್ರಾಚೀನ ಪ್ರಾಜ್ಞನ ನುಡಿಯೆಂದೇ ನಂಬಬೇಡ; ಊಹೆಗಳನ್ನೂ ನಂಬಬೇಡ; ಯಾವುದನ್ನು ನೀನು ರೂಢಿಯಿಂದ ಹೊಂದಿಕೊಂಡಿರುವೆಯೋ ಅದನ್ನೇ ಸತ್ಯವೆಂದು ನಂಬಿ ಬಿಡಬೇಡ; ನಿನ್ನ ಗುರುಗಳ ಮತ್ತು ಹಿರಿಯರ ಆಧಾರದ ಮೇಲೆ ಬಂದುದೆಂಬ ಕಾರಣದಿಂದಲೇ ನಂಬಬೇಡ; ಎಲ್ಲವನ್ನೂ ಪರಿಶೀಲಿಸಿ, ವಿಚಾರಮಾಡಿ ಯಾವುದು ವಿಚಾರಕ್ಕೆ ಹೊಂದಿಕೊಳ್ಳುತ್ತದೋ. ಸರ್ವರ ಕ್ಷೇಮಾಭ್ಯುದಯಕ್ಕೆ ಹೊಂದಿಕೊಳ್ಳುತ್ತದೆಯೋ ಅಂಥದನ್ನು ಅಂಗೀಕಾರ ಮಾಡಿ, ಅದನ್ನು ಅನುಷ್ಠಾನಕ್ಕೆ ತೆಗೆದುಕೊಂಡು ಬಾ ''.

ಜಗತ್ತಿನ ಎಲ್ಲ ಕಾಲದ ಸತ್ಯಾನ್ವೇಷಕರಿಗೆ ಮಾರ್ಗ ತೋರುವ ಅಮರ ವಾಕ್ಯಗಳಿವು.

**ಸತ್ಯಾನ್ವೇಷಣೆ ವೇದಾಂತ ವಿಜ್ಞಾನ**—ಸತ್ಯಾನ್ವೇಷಣೆ ಭೌತ ಸತ್ಯದ್ದಾಗಬಹುದು. ಅಧ್ಯಾತ್ಮ ಸತ್ಯದ್ದಾಗಬಹುದು ಭೌತ ಸತ್ಯಾನ್ವೇಷಣೆ ವಿಜ್ಞಾನಿಯ ಕಾರ್ಯವಾದರೆ, ಅಧ್ಯಾತ್ಮ ಸತ್ಯಾನ್ವೇಷಣೆ ತತ್ತ್ವಜ್ಞಾನಿಯದು, ವೇದಾಂತಿಯದು ಎನ್ನುವವರಿದ್ದಾರೆ. ಈ ಎರಡೂ ಪ್ರಕ್ರಿಯೆಗಳು ಪರಸ್ಪರ ವಿರೋಧವೆಂದು ಭಾವಿಸುವವರಿದ್ದಾರೆ. ಭೌತವನ್ನೂ ಪರಿಗಣಿಸದೆ ಅಧ್ಯಾತ್ಮವೊಂದನ್ನೇ ಅರಸುವುದು ಅಥವಾ ಅಧ್ಯಾತ್ಮವನ್ನು ಪರಿಗಣಿಸದೆ ಭೌತವೊಂದನ್ನೇ ಅರಸುವುದು ಅವರ ಹವ್ಯಾಸ. ಇದರಿಂದ ಸತ್ಯದ ಪೂರ್ಣ ಅರಿವು ದೊರಕಲಾರದು. ಭೌತದ ಆತ್ಮದ ಅನ್ವೇಷಣೆಯಲ್ಲಿ ತೊಡಗಿದ ವಿಜ್ಞಾನಿ ಇಂದು ಅಧ್ಯಾತ್ಮದ ಹೊಸಲಲ್ಲಿ ನಿಂತಿದ್ದಾನೆ; ವೇದಾಂತದ ಸೀಮೆಗೆ ಪ್ರವೇಶಿಸುತ್ತಿದ್ದಾನೆ.

ಆಧುನಿಕ ವಿಜ್ಞಾನಿಗಳಲ್ಲಿ ಪ್ರಸಿದ್ಧನೆನಿಸಿದ ಆರ್ನೆಸ್ಟ್ ಹೇಕೆಲ್ ಹೇಳುವ ಈ ಮಾತುಗಳು ಮೇಲಿನ ಅಭಿಪ್ರಾಯವನ್ನು ಸಮರ್ಥಿಸುತ್ತವೆ. '' ನಿಜವಾದ ವಿಜ್ಞಾನದ ಪ್ರತಿಯೊಂದು ಪ್ರಯತ್ನವೂ ಸತ್ಯದ ಅರಿವನ್ನು ಉಂಟು ಮಾಡುತ್ತದೆ.''

ಈಶಾವಾಸ್ಯ ಉಪನಿಷತ್ತಿನಲ್ಲಿ ಉಲ್ಲೇಖವಾಗಿರುವ ಈ ಶ್ಲೋಕಗಳು ಮನನೀಯ.

ಅಂಧಂ ತಮಃ ಪ್ರವಿಶಂತಿ ಯೇಽವಿದ್ಯಾಮುಪಾಸತೇ ||
ತತೋ ಭೂಯ ಇವ ತೇ ತಮೋ ಯ ಉ ವಿದ್ಯಾಯಾಂ ರತಾಃ||

(ಬರಿಯ ಅವಿದ್ಯೆಯ, ಎಂದರೆ, ವ್ಯಕ್ತ ವಿಶ್ವಜ್ಞಾನದ ಅಥವಾ ಭೌತ ವಿಜ್ಞಾನದ ಉಪಾಸನೆ ಮಾಡುವವರು ಅಜ್ಞಾನಾಂಧಕಾರದಲ್ಲಿ ಮುಳುಗುವರು. ಬರಿಯ ವಿದ್ಯೆಯ, ಎಂದರೆ, ಅವ್ಯಕ್ತದ ಜ್ಞಾನದ ಅಥವಾ ಅಧ್ಯಾತ್ಮದ ಉಪಾಸನೆ ಮಾಡುವವರು ಅದಕ್ಕೂ ಹೆಚ್ಚಿನ ಗಾಢಾಂಧಕಾರದಲ್ಲಿ ಮುಳುಗುವರು.)

ಹೀಗಾದರೆ, ಇದಕ್ಕೆ ಉಪಾಯವೇನು ? ಈ ಶ್ಲೋಕ ಅದನ್ನು ಸೂಚಿಸುತ್ತದೆ.

ವಿದ್ಯಾಂಚಾವಿದ್ಯಾಂಚ ಯಸ್ತದ್ವೇದೋಭಯಂ ಸಹ ||
ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾಮೃತ ಮಶ್ನುತೇ ||

(ವಿದ್ಯೆ, ಅವಿದ್ಯೆ ಮತ್ತು ಇವೆರಡನ್ನೂ ಒಳಗೊಂಡಿರುವ ಪರಸತ್ಯವನ್ನು ತಿಳಿದವನು ಅವಿದ್ಯೆಯ ಬಲದಿಂದ, ಎಂದರೆ, ವ್ಯಕ್ತ ಸೃಷ್ಟಿಯ ಜ್ಞಾನದಿಂದ, ಭೌತವಿಜ್ಞಾನದ ಬಲದಿಂದ, ಮೃತ್ಯು ಲೋಕವನ್ನು ದಾಟಿ, ವಿದ್ಯೆಯ ಬಲದಿಂದ, ಎಂದರೆ ಆಧ್ಯಾತ್ಮದ ಬಲದಿಂದ ಅಥವಾ ಅವ್ಯಕ್ತ ಜ್ಞಾನದ ಬಲದಿಂದ ಅಮೃತತ್ವವನ್ನು ಪಡೆಯುವನು.)

ಸತ್ಯಾನ್ವೇಷಣೆಯಲ್ಲಿ ತೊಡಗುವ ವಿಜ್ಞಾನಿಗೂ ವೇದಾಂತಿಗೂ ಮೇಲಿನ ಸೂತ್ರ ಸರಿಯಾದ ಅರ್ಥವನ್ನು ತೋರಿಸುತ್ತದೆ.

ವಿಜ್ಞಾನ-ವೇದಾಂತಗಳೆರಡೂ ಇಂದು ಮೈತ್ರೀಭಾವ ದಿಂದ, ಅನನ್ಯ ಪ್ರೇಮದಿಂದ, ವಿಶ್ವಾಸದಿಂದ ಸಾಗಬೇಕಾಗಿದೆ. ಇಲ್ಲವಾದರೆ ವಿಜ್ಞಾನ ಮಾನವ ಲೋಕವನ್ನು ಧ್ವಂಸ ಮಾಡುವ ಶಕ್ತಿಯಾಗುತ್ತದೆ. ವೇದಾಂತ, ಆಧ್ಯಾತ್ಮ ಶಕ್ತಿಹೀನವಾಗಿ, ಪಂಗುವಾಗಿ ಮುಂದುವರಿಯುತ್ತದೆ. ಸತ್ಯಾನ್ವೇಷಣೆಯು ಗುರಿಯಾದ ಸುಖ ಕನಸಿನ ಮಾತಾಗಿ, ಲೋಕದ ಬವಣೆಗೆ ಮೇರೆಯಿಲ್ಲವಾಗುತ್ತದೆ.

**ವಿನೋಬಾ ತೋರಿಸಿದ ಪಥ–ಲೋಕೋದ್ಧಾರ :**—ಈ ದಿವ್ಯ ಸತ್ಯವನ್ನೂ ಅರಿತು ಮಾನವನಿಗೆ ನೇರ, ನೈಜ ಸುಖದ ಪಥವನ್ನೂ ಬೋಧಿಸುತ್ತಿದ್ದಾರೆ, ಪೂಜ್ಯ ವಿನೋಬಾಜಿ. ಅವರ ಈ ವಾಕ್ಯ ವಿಜ್ಞಾನಿಗಳ-ವೇದಾಂತಿಗಳ ನಡೆವಳಿಯ ಸೂತ್ರವಾದರೆ ಮಾನವ ಲೋಕ ಸ್ವರ್ಗ ಸದೃಶವಾಗಿ, ಆನಂದದ ಬೀಡಾದೀತು.

ವೇದಾಂತೋ ವಿಜ್ಞಾನಂ ವಿಶ್ವಾಸಶ್ಚೇತಿ ಶಕ್ತಯಸ್ ತಿಸ್ರಃ ||
ಯಾಸಾಂ ಸ್ಥೈರ್ಯೇ ನಿತ್ಯಂ ಶಾಂತಿ-ಸಮೃದ್ಧಿ ಭವಿಷ್ಯತೋ ಜಗತಿ ||

(ವೇದಾಂತ, ವಿಜ್ಞಾನ, ವಿಶ್ವಾಸ ಈ ಮೂರು ಶಕ್ತಿಗಳು ಪೂರ್ಣವಾಗಿ, ಸ್ಥಿರವಾಗಿ ನೆಲೆಗೊಂಡಾಗ ಜಗತ್ತಿಗೆ ನಿತ್ಯ ಶಾಂತಿ ಸಮೃದ್ಧಿ ಲಭಿಸೀತು.

ವೇದಾಂತವೆಂದರೆ, ಏಕೀಕೃತ—ಸಂಯುಕ್ತಜ್ಞಾನ. ಧರ್ಮದಲ್ಲಿ-ಮತದಲ್ಲಿ ಪಂಥಗಳ, ವಿಭಾಗಗಳ, ವಾದ–ಪ್ರತಿವಾದಗಳ ಉಪಟಳ ನಿಲ್ಲಬೇಕು. "ಏಕೋದೇವಃ ಸರ್ವಭೂತಾಂತರಾತ್ಮಾ"—ಏಕಂ ಸದ್ವಿಪ್ರಾ ಬಹುಧಾ ವದಂತಿ" ಎಂಬ ಸೂತ್ರ ಆಚರಣೆಯ ಪ್ರಧಾನ ಅಂಶವಾಗಬೇಕು; ಎಂದರೆ, ಸರ್ವಧರ್ಮಗಳ, ಸರ್ವ ಮತಗಳ ಬಗೆಗೆ ಸಮನ್ವಯ, ಸಮಾನ ಆದರ, ಗೌರವ ಬುದ್ಧಿ ಬೆಳೆಯಬೇಕು. ಗಾಂಧೀಜೀ ಹೇಳಿದಂತೆ "ಹಿಂದೂ ಉತ್ತಮ ಹಿಂದೂವಾಗಬೇಕು. ಮುಸಲ್ಮಾನ ಹೆಚ್ಚು ಉತ್ತಮ ಮುಸಲ್ಮಾನ್ ಆಗಬೇಕು; ಹಾಗೆಯೇ ಕ್ರೈಸ್ತ ಉತ್ತಮ ಕ್ರೈಸ್ತನಾಗಬೇಕು".

ವಿಜ್ಞಾನವೆಂದರೆ, ಬಾಹ್ಯ, ವ್ಯಕ್ತ, ಭೌತ ಜಗತ್ತಿನ. ವಿಶ್ವದ-ಗೋಚರ-ಅಗೋಚರ ರಹಸ್ಯಗಳ ಅನನ್ಯ, ಸಂತತ, ವೈಚಾರಿಕ, ಸಂಶೋಧನೆಯ ಕ್ರಿಯೆಯಾಗಬೇಕು ಇದರಿಂದ ಬಾಳಿನ ಸಿರಿ-ಸಂಪತ್ತು ವೃದ್ಧಿಯಾಗುವುದರ ಜೊತೆಗೆ ಅಸ್ಖಲಿತ ವಿಚಾರ ಶಕ್ತಿಯ ವೃದ್ಧಿಯೂ ಆಗಬೇಕು.

ಹೀಗೆ ವೇದಾಂತ ವಿಜ್ಞಾನಗಳೆರಡೂ ವಿಶ್ವಾಸದ ರೇಶ್ಮೆಯ ಕಟ್ಟಿನಿಂದ ಬಂಧಿತವಾದರೆ-ಸತ್ಯಾನ್ವೇಷಣೆ ಸತ್ಯಸ್ವರೂಪದ್ದಾಗಿ, ನಿತ್ಯ ಆನಂದದ ಆದರವಾಗಿ, ಲೋಕೋದ್ಧಾರವಾದೀತು.

(ಪು. 45 ರಿಂದ ಮುಂದುವರಿದುದು)

(12) ಬಿಜ್ಜಾವರದ ಅರಸು ಚಿಕ್ಕಭೂಪಾಲನೆಂಬುವನು 'ಅಭಿನವ ಭರತಸಾರಸಂಗ್ರಹ' ಎಂಬ ಸಂಸ್ಕೃತ ಗ್ರಂಥದ ರಚನೆ ಮಾಡಿದಂತೆ ತಿಳಿದುಬರುವುದು.

(13) ಈ ಚಿಕ್ಕಭೂಪಾಲ ರಾಜನ ಆಶ್ರಯದಲ್ಲಿದ್ದ 'ಮಲ್ಲಿಕಾರ್ಜುನ' ಎಂಬ ಕವಿಯು ಕಂಚಿಯ ಶಂಕರಾರಾಧ್ಯನ ಸಂಸ್ಕೃತ ಬಸವಪುರಾಣಕ್ಕೂ, ಗುರುರಾಜ ಕವಿಯ ಸಂಸ್ಕೃತ ಪಂಡಿತಾರಾಧ್ಯ ಚರಿತೆಗೂ ಕನ್ನಡ ವ್ಯಾಖ್ಯಾನ ಬರೆದಂತೆ ತಿಳಿದು ಬರುವುದು.

(14) ತಿಪಟೂರು ತಾಲ್ಲೂಕು ಹೊನ್ನವಳ್ಳಿಯ ಗೌರಾಂಕನೆಂಬ ಕವಿ (ಕಿ.ಶ.ಸು ೧೫೮೫)ಯು ಮೋಳಿಗೆ ಮಾರಯ್ಯ ನವರ ಪುರಾಣವನ್ನು ಸಾಂಗತ್ಯದಲ್ಲಿ ಬರೆದಿದ್ದಾನೆ.

(15) ತುಮಕೂರು ಜಿಲ್ಲಾ ಸಾಸಲು ಗ್ರಾಮದ ಶಾಂತಲಿಂಗ ದೇಶಿಕ ನೆಂಬಕವಿ "ಭೈರವೇಶ್ವರ ಕಥಾಸೂತ್ರರತ್ನಾಕರ" ಎಂಬ ಗ್ರಂಥವನ್ನು ರಚಿಸಿದ್ದಾನೆ.

# ವೀರಶೈವ 'ವೆಲ್ಟನ್ ಶಾಂಗ್'

ಶ್ರೀ ಕುಮಾರ ಸ್ವಾಮಿಗಳು ನವಕಲ್ಯಾಣಮಠ, ಧಾರವಾಡ.

ವೀರಶೈವ ಧರ್ಮವು ಆಗಮ ನಿರೂಪಿತ ಧರ್ಮದ ಒಂದಂಗವೆಂದು ಸಾಮಾನ್ಯವಾಗಿ ಹೇಳಲಾಗುತ್ತಿದೆ. ಕ್ರಿ. ಶ. ೧೨ನೆಯ ಶತಮಾನದ ಮಧ್ಯದ ಸುಮಾರಿಗೆ ಈ ಧರ್ಮದಲ್ಲಿ ಅಭೂತಪೂರ್ವವಾದ ಒಂದು ಉದ್ಧರಣ ಕಾರ್ಯವು ನೆರವೇರಿತೆಂದು ಕರ್ನಾಟಕದ ಐತಿಹ್ಯದಿಂದ ತಿಳಿದು ಬರುವುದು. ನಿಜಾಂ ಪ್ರಾಂತದ ಕಲ್ಯಾಣ ನಗರದಲ್ಲಿ ಆಳಿದ ಜೈನ ಧರ್ಮಾವಲಂಬಿ ಬಿಜ್ಜಳ ಭೂಪನಿಗೆ (೧೧೫೭—೧೧೬೭) ಮುಖ್ಯ ಮಂತ್ರಿಯಾದ ಶ್ರೀ ಬಸವಣ್ಣನು ಈ ಧರ್ಮೋದ್ಧಾರದ ಕಾರ್ಯಕ್ಕೆ ಕೈನೀಡಿದವರಲ್ಲಿ ಅಗ್ರಗಾಮಿಯು. ಅವನಿಗೆ ಮನವನ್ನು ಸೆರೆಗೆಯ್ಯುವ ಸಾಮರ್ಥ್ಯವುಳ್ಳ ದಿವ್ಯವೂ ಭವ್ಯವೂ ಆದ ವ್ಯಕ್ತಿತ್ವವಿದ್ದುದರಿಂದ ಭಾರತದ ಎಲ್ಲೆಡೆಗಳಿಂದ ಆಳು ಮೊದಲ್ಗೊಂಡು ಅರಸನವರೆಗೆ, ದೀನ ಮೊದಲ್ಗೊಂಡು ಧನಿಕನವರೆಗೆ, ಭೋಗಿ ಮೊದಲ್ಗೊಂಡು ಯೋಗಿಯವರೆಗೆ ನಾನಾ ಬಗೆಯ ಶೀಲ–ಸ್ವಭಾವದ ವ್ಯಕ್ತಿಗಳನ್ನು ತನ್ನತ್ತ ಅವನು ಸೆಳೆದನು. ಹೀಗಾಗಿ ಅವನ ನೇತೃತ್ವದಲ್ಲಿ ಸುಮಾರು ೩೦೦ ಜನ ಸದ್ಭಕ್ತ ಶಿವಾನುಭವಿಗಳ ನೆರವಿಯೊಂದು ಸೇರಿತು. ಈ ಗುಂಪಿನಲ್ಲಿ ನಾರೀಮಣಿಗಳಿಗೆ ಮಣಿದೀಪದಂತಿದ್ದ ಅಕ್ಕ ಮಹದೇವಿಯೇ ಮೊದಲಾದ ಸುಮಾರು ೬೦ ಜನ ಹೆಣ್ಣುಮಕ್ಕಳೂ ಸೇರಿದ್ದರೆಂಬುದು ಸಂತಸವೀವ ಸಂಗತಿಯು. ಈ ಶಿವಶರಣರ ಅನುಭವದ ಆಳವನ್ನು ತಿಳಿಯಪಡಿಸುವ ವಚನಗಳು ನುಡಿಯ ಜೆಡಗಿನಲ್ಲಿ ಮೇಲ್ತರಗತಿಯ ಮಟ್ಟಕ್ಕೆ ಮುಟ್ಟಿದವುಗಳು. ಇಂಪಿನ ಸೊಂಪಿನಲ್ಲಾಗಲಿ, ಗತಿಯ ಗಮಕದಲ್ಲಾಗಲಿ, ಸೊಬಗಿನ ಶಾಂತಿಯಲ್ಲಾಗಲಿ ಈ ವಚನ ಸಾಹಿತ್ಯವನ್ನು ಸರಿಗಟ್ಟುವ ಸಾಹಿತ್ಯವನ್ನು ಕಾಣವುದರಿದು. ಆದುದರಿಂದಲೇ ಗತಿಸಿದ ಮಹಾಮಹೋಪಾಧ್ಯಾಯ ಆರ್. ನರಸಿಂಹಾಚಾರ್ಯರೇ ಮೊದಲಾದ ಕೀರ್ತಿವೆತ್ತ ವಿದ್ವನ್ಮಣಿಗಳು ಶಿವಶರಣರ ಮನಂಬುಗುವ ಸೂತ್ರಪ್ರಾಯವಾಗಿರುವ ಈ ವಚನಗಳನ್ನು ಉಪನಿಷತ್ತಿನ ಋಷಿಗಳ ವಚನಗಳಿಗೆ ಹೋಲಿಸಿದುದೂ ಉಂಟು. ಶರಣರ ಈ ವಚನಗಳು ನಿರರ್ಗಳವಾಗಿ ನೇರವಾಗಿ ದೈವೀಪ್ರೇರಣೆಯಿಂದ ಹೊರಹೊಮ್ಮಿದ ನುಡಿಗಳಿರುವದರಿಂದ, ದೇವೋನ್ಮಾದದ ನಿಬ್ಬೆರಗಿನಲ್ಲಿ ಅಂತರಂಗದ ದಿವ್ಯಾನುಭವದ ಸೆಲೆಯಿಂದ ಹೊರಚಿಮ್ಮಿದ ನುಡಿಯ ಸೆಲೆಗಳಿರುವುದರಿಂದ, ಅಚ್ಚಳಿಯದ ಭಕುತಿ ಭಾವ ಮತ್ತು ನಿಚ್ಚಳವಾದ ಜ್ಞಾನಾನುಭಾವ ಇವನ್ನಳವಡಿಸಿಕೊಂಡ ದೇವೋನ್ಮತ್ತದ-ದಿವ್ಯ ವ್ಯಕ್ತಿಯ–ಉಸಿರು ಇವುಗಳಲ್ಲಿ ಅಡಗಿದೆ. ವೀರಶೈವ ಧರ್ಮವು ಆಗಮಾಂತ ಧರ್ಮದ ಒಂದು ಬಗೆಯೆನಿಸಿದ್ದರೂ ಅದು ಶ್ರೀ ಬಸವಣ್ಣನ ಮತ್ತು ಅವನ ಸಂಗಡಿಗರ ಕೈಯಲ್ಲಿ ಸಂಪೂರ್ಣವಾಗಿ ಮಾರ್ಪಾಟುಗೊಂಡು ಲಿಂಗವಂತ ಧರ್ಮವೆಂದು ಹೆಸರು ಹೊಂದಿತು. ಕರ್ನಾಟಕದ ವೀರಶೈವರ ಈ ವಿಶಿಷ್ಟವಾದ ಲಿಂಗವಂತಧರ್ಮದ ತತ್ತ್ವಜ್ಞಾನದ ತಿರುಳನ್ನರಿಯುವುದು ಈಗಿನ ನಮಗೆ ಪ್ರಾಮುಖ್ಯವಾದ ಕಾರ್ಯವಾಗಿದೆ.

ಅಸ್ತಿತ್ವವನ್ನು ಅಲ್ಲಗಳೆಯಲಾರದ ಈ ಜಗತ್ತಿನ ಬಗೆಗೆ ಕೂಲಂಕಷವಾದ ಮತ್ತು ಕ್ರಮಬದ್ಧವಾದ ವಿಚಾರ ಸರಣಿಯಲ್ಲಿ ನಿಂತು ಆಲೋಚಿಸುವುದು ತತ್ತ್ವಜ್ಞಾನ ಎಂದು ರಾಬರ್ಟ್ ಆರ್ಚ (೧೯೩೦) ಎಂಬ ತತ್ತ್ವಜ್ಞಾನಿಯು ಅಭಿಪ್ರಾಯ ಪಡುತ್ತಾನೆ. ನಮ್ಮ ಸಾಮಾನ್ಯವಾದ ತಿಳಿವಿಗೆ ನಿಲುಕುವ ಜಗತ್ತು ದ್ವಂದ್ವದ ದಂದುಗದಿಂದ ಜಿರೆತುದು. ಜಗತ್ತಿನ ಇರುವು ಏಕಮೇವ ಆದುದೆಂದು ನಿಶ್ಚಯಿಸಿ, ಅದ್ವೈತದಲ್ಲಿ ಅದನ್ನು ಕಾಣಲು ಮನವು ಅಸಮರ್ಥವಿರುತ್ತದೆ. ಈ ಜಗತ್ತಿನ ಬಗೆಯಲ್ಲಿ 'ಮೇಲು' 'ಕೀಳು' ಇಲ್ಲವೆ 'ಊರ್ಧ್ವ' 'ಅಧಃ' ಎಂಬ ಎರಡು ಸ್ವರೂಪಗಳು ಎದುರಿಗುಂಟು. ಗಾಢವಾದ ಇಲ್ಲವೆ ಬುದ್ಧಿಗೆ ನಿಲುಕದ ಮತು ರೂಕ್ಷವಾದ ಇಲ್ಲವೆ ಬುದ್ಧಿಗಮ್ಯವಾದ ಈ ಎರಡು ವಿಂಗಡಿಕೆಗಳು ನಮ್ಮ ತಿಳಿವಿಗೆ ಗೋಚರವಾಗುವವು ನಿಜ. ಈ ಜಗತ್ತು ಘನವಾದ ಪುರುಷ ಮತ್ತು ಜಘನವಾದ

ಪ್ರಕೃತಿ ಹೀಗೆ ಇತ್ತೆರನಾಗಿ ಕಾಣುವದೆಂದು ಬೇರೊಂದು ರೀತಿಯಿಂದಲೂ ಇದನ್ನು ಹೇಳಬಹುದು. ಸಾಮಾನ್ಯವಾದ ನಮ್ಮ ಮನಸ್ಸಿಗೆ ಈ ದ್ವಿವಿಧವನ್ನು ನಿಶ್ಚಿತವಾದ ಏಕತಾನತೆಯಲ್ಲಿ ಹೊಂದಿಸಿ ಕೊಳ್ಳಲು ಆಗದು. ಈ ಸ್ವರೂಪಗಳೆರಡು ವ್ಯವಹಾರದ ನಮ್ಮ ತಿಳಿವಿಗೆ ನಿಶ್ಚಿತವಾಗಿ ಕಾಣುವವೆಂಬುದನ್ನು ಬಗೆದು, ಇವೆರಡರಲ್ಲಿಯ ತೊಡಕನ್ನು ಬಿಡಿಸಲು ಮತ್ತು ಇವುಗಳಲ್ಲಿ ಹೊಂದಿಕೆಯನ್ನುಂಟು ಮಾಡಲು ಅನುವಿದೆ ಎಂಬುದನ್ನು ಮಾತ್ರ ಸದ್ಯದಲ್ಲಿ ಗ್ರಹಿಸಿ ಕೊಳ್ಳುವಾ. ನಮ್ಮ ಇರುವಿನ ಬಗೆಯಲ್ಲಿ ಅತೀಂದ್ರಿಯವಾದ ಊರ್ಧ್ವ ಸೃಷ್ಟಿ ಇಲ್ಲವೆ ಪುರುಷ ಮತ್ತು ಕಾಲ-ಕಾರಣ-ಅವಕಾಶಗಳ ಕಟ್ಟಿಗೆ ಒಳಪಡುವ ಅಧಃಸೃಷ್ಟಿ, ಇಲ್ಲವೆ ಪ್ರಕೃತಿ ಇವುಗಳಲ್ಲಿ ಸಂಬಂಧವನ್ನುಂಟುಮಾಡುವ ಗೊಣಸೊಂದು ಇದ್ದೇ ತೀರಬೇಕೆಂದು ನಮ್ಮ ಆಳವಾದ ಮನಕ್ಕೆ ನೀಳವಾದ ತಿಳಿವಿಗೆ ಸಹಜವಾಗಿ ಹೊಳೆಯದಿರದು. ಇವೆರಡನ್ನು ಒಳಕೊಳ್ಳುವ, ಇವೆರಡನ್ನು ಬಳಸಿಕೊಳ್ಳುವ ಮತ್ತು ಇವೆರಡನ್ನು ಹೊಂದಿಕೊಳ್ಳುವ ಪದವೊಂದು ಅವಕ್ಕೆ ನಿಲುಕಬೇಕು ಒಂದನ್ನು ಕೆಡಿಸಿ ಇನ್ನೊಂದನ್ನು ಕೊನರಿಸುವುದಕ್ಕೆ ಕೈನೀಡದೆ ಇವೆರಡರಲ್ಲಿ ಮೇಳವುಂಟಾಗುವಂತೆ ಮಾಡುವುದು ಅದರ ಧರ್ಮವಾಗಿರುವುದು.

ಪ್ರಕೃತಿ ಪುರುಷರನ್ನು ಒಂದುಗೂಡಿಸುವ ಪದವಾವುದು? ಭಾರತೀಯರ ತತ್ತ್ವಜ್ಞಾನದಲ್ಲಿ ಅದಕ್ಕೆ ಮಹತ್ ಇಲ್ಲವೆ ಬೃಹತ್ ಎಂದು ಹೆಸರು. ಅಪಾರವಾದ ವಿಶ್ವದ ಅರಿವು ಎಂದರೂ ಇದೇ! ಅರಿವು ಪುರುಷನಿಗೆ, ಪುರುಷನು ಪ್ರಕೃತಿಗೆ ಪ್ರತ್ಯಕ್ಷ (Real) ವಾದುದರಿಂದ ಎರಡೇಬುದಳಿದು ಏಕಾದ ಬಗೆಯ ತಿಳಿಯುಂಟಾಗುವುದು ಪ್ರಕೃತಿ ಸಹಜವಾಗಿದೆ. ಪುರುಷರನ್ನು ಸಂಗಡಿಸುವ ಈ ಗೊಣಸನ್ನು ಗುರುತಿಸಲು ಅಲ್ಲಗಳೆದರೆ ಇವೆರಡರಲ್ಲಿ ಎಂದೂ ಮೇಳವುಂಟಾಗದೆ ಎದುರಾಳಿಗಳಾಗಿಯೇ ಇವು ಉಳಿದು ಬಿಡುವವು. ಸೊಬಗರಿಯದ ಇವುಗಳ ಬೆಸುಗೆಯು ಕೊನೆಗೆ ಹಸುಗೆಯಲ್ಲಿ ವಿಶ್ರಾಂತಿಯನ್ನೈದುವುದು. ಈ ಮಹತ್ ಇಲ್ಲವೆ ಬೃಹತ್ ಮೂಲತಃ ಅಖಂಡವಾಗಿದೆ. ಆದರೆ ತೋರಿಕೆಗೆ ಮಾತ್ರ ಇದು ಕ್ರಮಬದ್ಧವಾಗಿ ವಿವಿಧ ಗತಿಯ ಗಮಕದಿಂದ, ತಾಲಬದ್ಧತೆಯ ಮಮಕ ದಿಂದ ಮತ್ತು ಚಲನೆಯ ಚಮಕದಿಂದ ಬೆರೆತುದೆಂದು ಕಾಣುವುದು ಈ ಕ್ರಮವು ಏರಿಳಿತದಿಂದ ಕೂಡಿರುವುದು ಅಥವಾ ಅಡಗಿಸಿಕೊಳ್ಳುವ ಮತ್ತು ಅರಳಿಸುವ ಸಾಮರ್ಥ್ಯದಿಂದ ಒಡಮೂಡಿರುವುದು. ಇಂಥ ಕ್ರಮದಲ್ಲಿ ಪುರುಷನಿಗೆ ಊರ್ಧ್ವಸೃಷ್ಟಿಯಲ್ಲಿಯೂ ಪ್ರಕೃತಿಗೆ ಅಧಃಸೃಷ್ಟಿಯಲ್ಲಿಯೂ ಸ್ಥಾನಾಪನ್ನತೆಯಿದೆ. ಈ ಸೃಷ್ಟಿಗಳೆರಡರಲ್ಲಿ ಶಾಶ್ವತವಾದ ಸೃಷ್ಟಿಯೊಂದಿದೆ. ಅದುವೆ ಇವನ್ನು ಬಳಸಿಕೊಂಡಿರುವ ಅರುಹಿನ ಸೃಷ್ಟಿಯು. ವಸ್ತುಗಳ ಯಥಾರ್ಥ ಜ್ಞಾನವೇ ಅದಕ್ಕೆ ತಳಹದಿಯು "ಇಲ್ಲಿ ಪ್ರಬಲವಾದ ವ್ಯಕ್ತಿವಿಶೇಷವು ಸರ್ವವ್ಯಾಪಿಯಾದ ಆತ್ಮನನ್ನು ಅಪಹರಿಸುವುದಿಲ್ಲ. ಅರುಹಿನ ಅಸ್ತಿವಾರವು ಸಂಪೂರ್ಣವಾಗಿ ತಾನೇ ತಾನಾದುದಾಗಿರುವುದು. ಇದರಲ್ಲಿ ವ್ಯಕ್ತಿಗತ ವಿಶೇಷಕ್ಕೆ ಅವಕಾಶವಿರುವುದಾದರೂ ಇದನ್ನು ಹೊರತು ಪಡಿಸಿ ಇನ್ನುಳಿದವುಗಳೊಡನೆ ಅಖಂಡವಾದ ಮತ್ತು ಸಂಪೂರ್ಣವಾದ ಅರುವಿನ ಸಂಬಂಧವನ್ನು ಅದು ಕಳೆದುಕೊಂಡಿರುವುದಿಲ್ಲ. ನಾನಾತ್ವಕ್ಕೆ ಅವಕಾಶವೂ ಇಲ್ಲ, ಅವಸರವೂ ಇಲ್ಲ. ಗತಿಯ ವೈವಿಧ್ಯದಲ್ಲಿ ಅದು ಯಾವಾಗಲೂ ಪ್ರಾಮುಖ್ಯವಾದ ಏಕತ್ವಕ್ಕೆ ಮತ್ತು ಅಖಂಡವಾದ ಸಂಪೂರ್ಣತೆಗೆ ಸಂಬಂಧಿಸಿದುದಿರುತ್ತದೆ." ಆದುದರಿಂದ ಈ ಅರುಹಿನ ಸೃಷ್ಟಿಗೆ ವೀರಶೈವ ತತ್ತ್ವದಲ್ಲಿ ಮಹಾಲಿಂಗವೆಂದು ಹೆಸರು. ಶೈವರಿಗೆ ಶಿವನೂ, ಉಪನಿಷತ್ತುಗಳಿಗೆ ಬ್ರಹ್ಮವೂ, ತತ್ತ್ವಶಾಸ್ತ್ರವಾದ (Ontologists) ರಿಗೆ ಸತ್ಯವೂ, ಜ್ಞಾನವಾದಿ (Gnostics) ಗಳಿಗೆ ದೇವನೂ, ತತ್ತ್ವಜ್ಞಾನಿಗಳಿಗೆ ಕೇವಲವೂ ಆಗಿರುವದು ಈ ಮಹಾಲಿಂಗವೇ!

ಕೇವಲವು ನಿರ್ಗುಣವಾದುದೆಂದು (Supra-personal) ಬ್ರ್ಯಾಡ್ಲೇ, (೧೮೪೬-೧೯೨೪) ಸಗುಣವಾದುದೆಂದು (Teleological) ಬೊಸಾಂಕೆ (೧೮೪೮-೧೯೨೩) ಅವರು ಹೇಳುತ್ತಾರೆ. ಆದರೆ ವೀರಶೈವ ಅನುಭಾವಿಗೆ—ಶಿವಶರಣನಿಗೆ ಈ ಕೇವಲವು ಇವೆರಡು ಅಭಿಪ್ರಾಯಗಳನ್ನು ಒಂದುಗೂಡಿಸಿರುವ ಸಗುಣ ನಿರ್ಗುಣ (Impersonal personality) ವಾಗಿದೆ. ಅದು ವಿಶ್ವಾತೀತವೂ ಅಹುದು, ವಿಶ್ವಾಂತರ್ಗತವೂ ಅಹುದು; ಸ್ಥಬ್ಧವಾದದೂ ಅಹುದು, ಸಂಚಲವುಳ್ಳುದೂ ಅಹುದು. ವೀರಶೈವ ತತ್ತ್ವಜ್ಞಾನದಲ್ಲಿ

ಕೇವಲದ ಸ್ತಬ್ಧ ಸ್ವರೂಪಕ್ಕೆ ಸ್ಥಿರ, ಶಿವ, ಅಥವಾ ಲಿಂಗವೆಂದೂ, ಸಂಚಲನ ಸ್ವರೂಪಕ್ಕೆ ಚರ, ಶಕ್ತಿ ಅಥವಾ ಜಂಗಮವೆಂದೂ ಹೆಸರು. ಈ ಚರ ಅಥವಾ ಶಕ್ತಿಯು ಕ್ರಿಯಾಪ್ರವೃತ್ತಿಯಿಂದೊಡಗೂಡಿರುವುದು ; ದಿವ್ಯ ನೆನಹೇ ಅಂಗವಾಗಿ ಉಳ್ಳದು. ಆತ್ಯಂತಿಕ ಸತ್ಯದ ಇಲ್ಲವೆ ಶಿವಲಿಂಗದ ವ್ಯಕ್ತಿತ್ವವೆನಿಸಿರುವುದೂ ಈ ಶಕ್ತಿಯೇ ! ಶ್ವೇತಾಶ್ವತರೋಪನಿಷತ್ತು ಈ ಶಕ್ತಿಯನ್ನು ಆತ್ಮಶಕ್ತಿ ಎಂದು ವರ್ಣಿಸುತ್ತದೆ. (ದೇವಾತ್ಮಶಕ್ತಿಃ ಸ್ವಗುಣೈರ್ನಿಗೂಢಃ) ಆದುದರಿಂದ ಈ ದಿವ್ಯ ಶಕ್ತಿಯು ಶಿವನೊಡನೆ ತಾದಾತ್ಮ್ಯ ಸಂಬಂಧದಿಂದ ಹೊಂದಿಕೊಂಡಿರುತ್ತದೆ. ಎಂದು ಸ್ಪಷ್ಟವಾಗುವುದು. ಶಿವಶಕ್ತಿಗಳ ಈ ಸಾಮರಸ್ಯವು ಶಿವಶರಣರ ವಚನಗಳಲ್ಲಿ ಬಹು ಮನೋಹರವಾಗಿ ಸ್ಫುಟಗೊಂಡಿವೆ ಶ್ರೀ ಬಸವಣ್ಣನವರು ಅದನ್ನು

ಉದಕದೊಳಗೆ ಬಯ್ಚಿಟ್ಟ ಬಯಕೆಯ ಕಿಚ್ಚಿನಂತಿದ್ದಿತ್ತು;
ಸಸಿಯೊಳಗಣ ರಸದ ರುಚಿಯಂತಿದ್ದಿತ್ತು ;
ನನೆಯೊಳಗಣ ಪರಿಮಳದಂತಿದ್ದಿತ್ತು ;
ಕೂಡಲ ಸಂಗಮದೇವಾ, ಕನ್ಯೆಯ ಸ್ನೇಹದಂತಿದ್ದಿತ್ತು.

ಎಂದು ವರ್ಣಿಸಿರುತ್ತಾರೆ.

ಶಿವಶಕ್ತಿಗಳ ಈ ಅವಿನಾಭಾವ ಸಂಬಂಧವು ಶಕ್ತಿ ವಿಶಿಷ್ಟಾದ್ವೈತದ ಹೃದಯವು. ಇದರಿಂದ ವಿಶ್ವವನ್ನು ಕಾಣಲು ವೀರಶೈವನ ಬಗೆಯು ವ್ಯಕ್ತವಾಗುತ್ತದೆ. ಇದುವೆ ವೀರಶೈವ ವೆಲ್ಟನ್ ಶಾಂಗ್! ಪರಮಾತ್ಮನಿಗೆ ಪರಿಪೂರ್ಣವೂ ಅಖಂಡವೂ ಆದ ಅರುಹು—ಚಿತ್‌ಶಕ್ತಿಯು ಒಂದಿದೆ; ಈ ವಿಶ್ವವು ಶಿವನ ಅಂಕಿತದಲ್ಲಿ ಶಿವನನೆ ನಹಿನಿಂದ ಶಕ್ತಿಯ ಮುಖಾಂತರ ಹೊರಹೊಮ್ಮುವುದು ಎಂದು ವೀರಶೈವರ ನಂಬುಗೆ. ಈ ಶಕ್ತಿಯ ನಿಲವನ್ನು ಸರಿಯಾಗಿ ವರ್ಣಿಸಲು ಆಧುನಿಕ ಶಾಸ್ತ್ರಗಳಿಗಾಗಲಿ ಪಾಶ್ಚಿಮಾತ್ಯ ತತ್ವಜ್ಞಾನಿಗಳಿಗಾಗಲಿ ನಿಲುಕಿಲ್ಲ. ಬೆಲ್‌ಫೋರ್ಟ್ ಬ್ಯಾಕ್ಸನು (೧೮೨೬–೧೮೫೪) ಈ ಶಕ್ತಿಯನ್ನು ತರ್ಕಕ್ಕೆ ಮೀರಿದ ತತ್ವವೆಂದು ನಿರೂಪಿಸುತ್ತಾನೆ ; ಮತ್ತು ಅವನು ಅತರ್ಕ್ಯವಾದ ಈ ತತ್ವದ ತಿಳಿವಳಿಕೆಗೇ ಮಹತ್ವವನ್ನಿತ್ತಿರುವನು. ಈ ದೆಸೆಯಿಂದ ಇದು ವಿಚಾರಶಕ್ತಿಯಲ್ಲಿ ಸತ್ಯದ ಅಸ್ತಿವಾರವನ್ನರಸುವ ಹೆಗೆಲನ (೧೭೭೦–೧೮೩೧ ಪ್ರವೃತಿಗೆ ವಿರೋಧವಾಗಿದೆ. ಇಲ್ಲಿ ಶೋಫೆನಾರ (೧೭೮೮–೧೮೬೦) ಮತ್ತು ವ್ಹಾನ್ ಹಾರ್ಟ್‌ಮೆನ್ (೧೮೪೨–೧೯೦೬) ಇವರ ನಿರಾಶಾವಾದವನ್ನಷ್ಟು (Pessimism) ಬಿಟ್ಟರೆ ಬೆಲ್‌ಫೋರ್ಟ್ ಬ್ಯಾಕ್ಸನು ಇವರ ವಿಚಾರಕ್ಕೆ ಸಮೀಪಿಸಿರುವನೆನ್ನಬೇಕು. ಹೇನ್ರಿ ಬರ್ಗಸನ್ನರು (೧೮೫೯–೧೯೪೧) ಈ ತರ್ಕಾತೀತವಾದ ತತ್ವಕ್ಕೆ ಕೊಟ್ಟಿರುವ ಮಹತ್ವವು ಒಳ್ಳೇ ಕ್ಷೋಭಕಾರ ರೀತಿಯಲ್ಲಿ ಕೊನೆಗಂಡಿದೆ. ಯಾಕಂದರೆ ಅವನ ಬುದ್ಧಿ ಪ್ರಧಾನವಾದ ವಿಮರ್ಶೆಗಳ ಆತ್ಯಂತಿಕ ಸತ್ಯವನ್ನು ಸಂಪೂರ್ಣವಾಗಿ ಅಲ್ಲಗಳೆದಿರುವನು. ಶೋಫೆನಾರನಂತೆ ಅವನಿಗೂ ಮಾನವನಲ್ಲಿ ಇಲ್ಲವೆ ಬಾಹ್ಯಜಗತ್ತಿನಲ್ಲಿ ಕಂಡು ಬರುವ ವಸ್ತುಗತ ತತ್ವವು (The thing in-itself) ಬುದ್ಧಿಗೆ ನಿಲುಕದ ವಿಷಯವಾಗಿದೆ. ಇದಕ್ಕೆ ಅವನು 'ಇಲಾನ್ ವಾಯಿಟಲ್' (Elan Vital) ಎಂದು ಕರೆದಿರುವನು ಆದರೆ ಬರ್ಗಸನ್ನನ ಈ ವಿವರಣೆಯಲ್ಲಿ 'ಇಲಾನ್ ವ್ಹಾಯಿಟಲ್'ದ ಸ್ವರೂಪವು ಸ್ಪಷ್ಟವಾಗಿಲ್ಲ. ಅದು ಅನಿಶ್ಚಿತವಾಗಿದೆ. ಅವನು ಇದಕ್ಕೆ ಪ್ರಾಣರಸ (Vital Fluid) ಎಂದು ಹೆಸರಿಟ್ಟು, ವಿಶ್ವವೆಲ್ಲ ಈ ವಿಶ್ವವ್ಯಾಪಕ ಶಕ್ತಿಯ ಲೀಲೆಯೆಂದು ವಿವರಿಸಿರುವನು. ಅವನಿಗೆ ಜೀವನವೆಲ್ಲ ಹೋರಾಟದಿಂದ ಬೆರೆತುದು (A stress and a stir) ಶರಣನು ಮಾತ್ರ ಈ ಜೀವನವು ದಿವ್ಯಶಕ್ತಿಯ ನಿರಂತರವಾದ ಪ್ರೇರಣೆಯಿಂದ ಬೆರೆತಿದೆ ಎಂದು ತಿಳಿಯುತ್ತಾನೆ. ಬರ್ಗಸನ್ನನಂತೆ ಅವನು ಮಾನವನ ಮರವೆಯ ಪ್ರವೃತ್ತಿಗಳಿಂದಾಗಲಿ ಸ್ವಪ್ನದ ವಿಚಾರಸೃಷ್ಟಿಗಳಿಂದಾಗಲಿ ಪ್ರೇರೇಪಣೆಗೊಳ್ಳುವುದಿಲ್ಲ. ಆದರೆ ಮನದ ಕೊನೆಯ ಮೊನೆಯ ಮೇಲೆ ಮೂರ್ತಗೊಂಡ ಅರುಹಿನ ಅರ್ಥಾತ್ ಚಿತ್‌ಶಕ್ತಿಯ ಅನುಸಂಧಾನದಿಂದ ಅವನ ಆ ಸ್ಫುರಣೆಯನ್ನು ಪಡೆವನು. ಈ ವಿಚಾರದಲ್ಲಿ ಶರಣನು ಬರ್ಗಸನ್ನನಿಗಿಂತ ಶೋಫೆನಾರನನ್ನೇ ಹೆಚ್ಚಾಗಿ ಬಳಿವಿಡಿವನು. ಮಾನವನ ಮನೋಮಂಡಲದಲ್ಲಿ ಬುದ್ಬುದಾಕಾರವಾಗಿ ಏಳುವ ಕಲ್ಪನಾತರಂಗಗಳನ್ನು ರೂಪಿಸುವ ಇಚ್ಛಾಶಕ್ತಿಯೇ ಶೋಫೆನಾರನಿಗೆ ಪ್ರಾಮುಖ್ಯವಾದದುದು. ನೆನಹು ಪ್ಲೇಟೋನ (ಕ್ರಿ. ಶ. ಪೂ. ೪೨೭–೩೪೭) ವಿಚಾರ ದೃಷ್ಟಿಯ (Realm of ideas) ಆಚೆಯದೆಂದೂ ಅದು ತರ್ಕಬದ್ಧವಾದ ವಿವೇಕ-

ವಿಚಾರ ಸರಣಿಗಿಳಿಗಿಂತ ಮಿಗಿಲಾದುದೆಂದೂ ಶೋಫೆನಾರನು ಅಭಿಪ್ರಾಯ ಪಡುವನು. ನೆನಹು ವ್ಯಕ್ತಗತವಾದುದಾದರೂ ಅದು ಹೆಚ್ಚು ವ್ಯಾಪಕವಾಗಿ ಕಾರ್ಯಗೆಯ್ಯಬಲ್ಲುದೆಂಬುದನ್ನರಿತಿಹ ಈ ಪ್ರತಿಭೆಯು ಆ ತತ್ವಜ್ಞಾನಿಗೆ ಉಂಟು. ಆದ:ದರಿಂದಲೇ ಅವನಿಗೆ ವಿವೇಕವಾದವು (Idea of reason) ಒಪ್ಪಿಗೆಯಾಗುವುದಿಲ್ಲ. ಆದರೆ ಅವನಿಗೆ ಭಾರತೀಯರಲ್ಲಿ ಮಹತ್ ಅಥವಾ ಬೃಹತ್ ಎಂದು ಹೆಸರುಗೊಂಡ ಅರುಹಿನ ಲೋಕೋತ್ತರವಾದ ಮತ್ತು ಸ್ಥಿರವಾದ ಸ್ವರೂಪವನ್ನು ಕಾಣುವ ದೃಷ್ಟಿಯಿಲ್ಲ. ಆದ:ದರಿಂದ ಅವನ ತತ್ತ್ವಜ್ಞಾನದಲ್ಲಿ ಅರುಹಿನ ಹರಿವಿದ್ದರೂ, ಅದಕ್ಕೆ ಕೇಂದ್ರವಿಲ್ಲ.

ಶರಣನು ಚಿತ್‌ಶಕ್ತಿಗೆ ವಿಶಿಷ್ಟ ಸ್ಥಾನವನ್ನೇ ನೀಡಿ ಕೊಟ್ಟಿರುವನು ಮತ್ತು ತೋರಿಕೆಯು ರೂಪುಗೊಳ್ಳಲು ಅದು ಅತ್ಯವಶ್ಯಕವಾದದೆಂದೂ ಅವನು ಒಪ್ಪಿಕೊಂಡಿರುವನು. ಆದರೆ ವೀರಶೈವ ತತ್ವಜ್ಞಾನದಲ್ಲಿ ಶಕ್ತಿಗೆ ಶಿವನಲ್ಲಿ ಆಶ್ರಯ ಸ್ಥಾನವಿರುವುದರಿಂದ ಅವನು ಶಿವ-ಶಕ್ತಿ, ಲಿಂಗ-ಜಂಗಮ, ಸತ್ಯ-ನೆನಹುಗಳ ಅವಿನಾಭಾವ ಸಂಬಂಧವನ್ನು ಎತ್ತಿ ಹಿಡಿದಿರುವನು. ಈ ಬಿಚ್ಚಿ ಬೇರಾಗದ ಬೆಸುಗೆಯನ್ನು ಅರ್ಥಗಾಂಭೀರ್ಯದ ಸೌಲಭ್ಯದಿಂದ, ಸೆರೆಗೆಯ್ಯುವ ಶಬ್ದಸಂಪತ್ತಿಯಿಂದ ಅವನು ವಿಶೇಷಿಸುತ್ತಾನೆ. ಅವನಿಗೆ ಶಿವ-ಶಕ್ತಿ ಇವುಗಳಲ್ಲಿ ಒಂದು ವಿಶ್ವಾಧಿಕ ವಿಶ್ವೋತ್ತೀರ್ಣ ಸತ್ಯವಾದರೆ, ಇನ್ನೊಂದು ವಿಶ್ವಗತ ನಿತ್ಯವಾಗಿರುವುದು ; ಒಂದು ಅನಂತವಾದ ಶ್ರಾಂತಿಯಾದರೆ, ಇನ್ನೊಂದು ಅಂತರ್ಗತವಾದ ನಿತ್ಯವಾಗಿರುವುದು, ಗಾಂಭೀರ್ಯವಾಗಿರುವದು ವಿಶ್ವಾಂತರ್ಗತ ಶಕ್ತಿಯು ವಿಶ್ವೋತ್ತೀರ್ಣ ಸತ್ಯ ಇಲ್ಲವೆ ಶಿವನಿಂದ ಹೊರಹೊಮ್ಮದೆ ಮತ್ತು ಶಿವನ ಶಕ್ತಿಯನ್ನು ಮೀರಿ—ಆಚೆಗಿಹನು ಎಂದು ಹೇಳಿ ಶರಣನು ಶಿವ-ಶಕ್ತಿಗಳಲ್ಲಿ ಸಾಮರಸ್ಯವನ್ನು ತೋರಿಸಲು ಯತ್ನಿಸಿರುವನು. ವಿಶ್ವಗತವಾದೀ ಶಕ್ತಿಗೆ ತಾನೇ ತಾನಾದ ಇರುವಿಕೆ ಇಲ್ಲ. ವಿಶ್ವೋತ್ತೀರ್ಣವಾದುದು ಒಂದುಗೂಡಿ ಹೊಂದಿಕೆಯಾದಾಗ ಅದು ಶಕ್ತಿ ಎಂದು ಹೆಸರುಗೊಳ್ಳುವುದು. ಈ ಕೇಂದ್ರೀಕರಣದ ದೆಸೆಯಿಂದ ಅದು ಸತ್ಯಕ್ಕಿಂತ ಅಸತ್ಯವಾಗಿಯೇ ಹೆಚ್ಚಾಗಿ ತೋರುವುದು. ಆದರೆ ಅದೂ ಸತ್ಯವೇ ! ಬೇಕಾದರೆ ಅದು ಸೋಪಾಧಿಕ ಸತ್ಯವೆನ್ನಿ. ಆದುದರಿಂದ ಈ ಶಕ್ತಿಯು ಬ್ರಹ್ಮಾಂಡ (Cosmological view-point) ದೃಷ್ಟಿಯಿಂದ ಸೃಷ್ಟಿ-ಸ್ಥಿತಿ-ಲಯ ಕಾರಣ ಕರ್ತೃವೆಂದೂ, ದೇವಜ್ಞಾನ ದೃಷ್ಟಿಯಿಂದ (Theological view point) ಅನುಗ್ರಾಹಕವೆಂದೂ, ಮತ್ತು ಸ್ವಾನುಭವ (Epistemological view point) ದೃಷ್ಟಿಯಿಂದ ವಿಷಯಾತೀತವೆಂದೂ ಕರೆಯಿಸಿಕೊಳ್ಳುತ್ತದೆ. ಶಿವನು ಅಂತರ್ಗತವಾದ ಘನವೆತ್ತ ಶಕ್ತಿಯ ಆಚೆಗಿರುವನು. ಅವನಿಗೆ ಅನಂತವಾದ ಪ್ರಕಾಶಮಯ ಪರಮಶಾಂತಿ—ಅಖಿಲ ವಸ್ತುಜಾತದ ಒಡಲೊಳಿಹ ನೀರವ ಶಾಂತಿ ಎಂದು ಕರೆಯಬಹುದು. ಎಲ್ಲವನ್ನೂ ಬೆಳಗುವವನು ಅವನೇ ! ಆದರೂ ನಮ್ಮ ತಿಳಿಗೆ ನಿಲುಕನವನು! ಅರುಹು ಇರುಹುಗಳನ್ನು ವ್ಯಾಪಿಸಿದರೂ ಈ ಶಾಂತಿಯೇ ! ಸರ್ವಸ್ವತಂತ್ರದ ಆನಂದವೆಂದರೂ ಇದೆ ! ಈ ಅನಂತವಾದ ಪ್ರಕಾಶಮಯ ಪರಮಶಾಂತಿಯು— ಈ ಮಹಾಲಿಂಗವು 'ತೃಪ್ತಿಯಿಲ್ಲದ ಸಂತೃಪ್ತಿಯೂ, ಹುಟ್ಟು, ಬೆಳವಣಿಗೆಗಳಿಲ್ಲದ ಪೂರ್ಣತೆಯೂ, ಎಡೆ ತಡೆಗಳಿಲ್ಲದ ಸರ್ವಸ್ವತಂತ್ರವೂ' ಆಗಿದೆ. ಶಕ್ತಿಯು ಈ ಪ್ರಕಾಶಮಯ ಪರಶಾಂತಿಯಲ್ಲಿ ಗಮನಗೊಳ್ಳುವುದು, ಅರುಹಿನ ಪರಾಕಾಷ್ಠತೆಯಲ್ಲಿ ಪ್ರಸರಣಗೊಳ್ಳುವದು. ಆದುದರಿಂದ ಇದು ಪರಮನಿಂದ ಹೊರಚಲ್ಲಿ ಹರಿಯುವ ಪ್ರವಾಹವು, ಶಾಶ್ವತದೀಗ ಸೂಸುವ ದಿವ್ಯ ಗತಿಯ ಗಮನವು. ಅನಾದ್ಯನಂತದ ಒಡಲಿನಿಂದ ಹೊರಹೊಮ್ಮುವ ವಿಶ್ವವ್ಯಾಪಕವು. ಆದಿಭೌತಿಕ ಶಾಸ್ತ್ರದ ದ್ರವ್ಯ ಮತ್ತು ಗುಣ, ಹಾಗು ಆಧ್ಯಾತ್ಮ ಶಾಸ್ತ್ರದ ವಿಷಯ ಮತ್ತು ವಿಷಯಿ ಇವು ದಿವ್ಯ ಶಕ್ತಿಯ ಪ್ರಿನಿದ ರೂಪಗಳು. ಮಾನವನ ಸ್ಥೂಲ-ಸೂಕ್ಷ್ಮ-ಕಾರಣ ಮತ್ತು ಮಹಾಕಾರಣ ಪಿಂಡಗಳಲಿ ನಂತರ ಶಕ್ತಿಗಳು ಹುದುಗಿವೆಯಷ್ಟೇ ! ಈ ಶಕ್ತಿಗಳನ್ನು ಕ್ರಮಬದ್ಧವಾಗಿ ಸೂಕ್ಷ್ಮಾತ್ ಸೂಕ್ಷ್ಮತರ ಸ್ತರಗಳನ್ನಾಗಿ ವ್ಯಕ್ತಗೊಳಿಸುವದಾದರೂ ಈ ದಿವ್ಯ ಶಕ್ತಿಯೇ !

ತನು-ಮನ-ಪ್ರಾಣಗಳನ್ನು ಮಹಾಲಿಂಗದ ಅರುವಿನ ಅನುಸಂಧಾನದಿಂದ ಮತ್ತು ಅವುಗಳ ಕಾರ್ಯಕಲಾಪಗಳನ್ನು ಚೈತನ್ಯಶಕ್ತಿಯ ಇರುವಿನ ಅನುಸಂಧಾನದಿಂದ ವ್ಯಾಪ್ತಗೊಳಿಸುವವರಲ್ಲಿ ವೀರಶೈವ ತತ್ತ್ವಜ್ಞಾನದ ಘನತೆಯು

ಒಡೆದು ಕಾಣಿಸುವುದು. ಆದಿಭೌತಿಕವನ್ನು (Matter) ಆಧ್ಯಾತ್ಮದಲ್ಲಿ ನಿಲಿಸಲು ಲಿಂಗವಂತ ಧರ್ಮವು ಮುಂದುವರಿದಿದೆ. ಗ್ರೀಕ್ ತತ್ತ್ವಜ್ಞಾನಿಯಾದ ಪ್ಲೇಟೋ ಅವನು ಅತ್ಯಂತ ಸೂಕ್ಷ್ಮವಾದ ವಿಚಾರ (Ideas) ಸಾಮ್ರಾಜ್ಯದಲ್ಲಿ ಅತ್ಯಧಿಕವಾದ ಆನಂದವನ್ನು ಅನುಭವಿಸುವನು. ಯಾಂಕೆದರೆ ಅವನಿಗೆ ಆತ್ಮನ ಮೇಲೆ ಪ್ರಕೃತಿಯ ಪ್ರಭಾವವಿದೆ ಎಂಬ ಮಾತಿನಲ್ಲಿ ಒಪ್ಪಿಗೆಯಿಲ್ಲ. ಬಾಯ್‌ಬಲ್ ಮಾನವ ಸ್ವಭಾವದಲ್ಲಿ ಸ್ಪಷ್ಟವಾದ ಇತ್ತೆರವಿದೆ ಎಂದು ಹೇಳುತ್ತ, ಪ್ರಕೃತಿಯು ಮಿಥ್ಯವೆಂದೂ ಪುರುಷನು (Spirit) ಸತ್ಯವೆಂದು ಸೂಚಿಸಿ ಅವು ಎಂದೆಂದೂ ಹೊಂದಿಕೆಗೊಳ್ಳವೆಂದು ತಿಳಿಸುತ್ತದೆ. ಅದರಂತೆ ಸಾಂಖ್ಯ ಮತ್ತು ವೇದಾಂತ ದರ್ಶನಗಳೂ ಸಹ ಅವಿದ್ಯೆಯ ವ್ಯಾಪಾರವನ್ನು ಇಳಿಕೆಗೆಯ್ದು ತುರೀದಲ್ಲಿ ತೃಪ್ತಿಗೊಳ್ಳುತ್ತವೆ. ಜೀವನದ ವ್ಯಾಪಾರಗಳನ್ನು ಆತ್ಮನ ಮುಖಾಂತರ ಅರಿತುಕೊಳ್ಳುವುದಿದೆ. ಎಂದು ವೇದಾಂತವು ಬೋಧಿಸುವುದನ್ನು ಅಲ್ಲಗಳೆಯಲಾಗದಿದ್ದರೂ ಅದು ಸೋಪಾಧಿಕ ಜಗತ್ತು ಮತ್ತು ನಿರುಪರಾಧಿಕ ಬ್ರಹ್ಮ ಇವುಗಳಲ್ಲಿ ವಿಂಗಡಿಕೆಯನ್ನು ತೋರಿಸಿ ಇವುಗಳ ಕೂಡಿಕೆಯು ಎಂದೆಂದೂ ಆಗದೆಂದು ಅರುಹುತ್ತದೆ. ಪರಬ್ರಹ್ಮ ಮತ್ತು ಆದರ ಸಾಕ್ಷಾತ್ಕಾರ ಇವುಗಳ ವೈಶಿಷ್ಟ್ಯವನ್ನು ಒತ್ತಿಹೇಳಿ, ಆಧ್ಯಾತ್ಮಿಕ ಕ್ರಾಂತಿಯು ತುರೀಯದಂತೆ ಇವುಗಳನ್ನು ಮೇಳೈಸುವುದಿಲ್ಲ. ಆಗಮಕಾರರೂ ಸಹ ಶಿವನು ಜೀವನದ ಆತ್ಯಂತಿಕ ಪರಿಪೂರ್ಣತೆಯ ಲಕ್ಷ್ಯವೆಂದು ನಿರೂಪಿಸುವರು. ಮತ್ತು ಇಂದ್ರಿಯಾತೀತವಾದುದು ಇಂದ್ರಿಯಗೋಚರವಾದುದರ ಸಮತೂಕವೆಂದುಸುರಿ ಪ್ರಕೃತಿ ಪುರುಷರಲ್ಲಿ ವಿಂಗಡಿಕೆಯನ್ನು ತೋರಿಸಿರುವರು. ಆದರೆ ವೀರಶೈವರ ಸರ್ವಸಮನ್ವಯ(Synthetic)ತತ್ತ್ವಜ್ಞಾನದಲ್ಲಿ ಶಿವ-ಶಕ್ತಿ ಸಂಪುಟವು ಈ ತರಹದ ಪ್ರಕೃತಿ–ಪುರುಷರಲ್ಲಿಯ ವಿಂಗಡಿಕೆಯನ್ನು ಮನ್ನಿಸುವುದಿಲ್ಲ. ಆದುದರಿಂದ ಲಿಂಗವಂತರಿಗೆ ಜೀವಪ್ರಪಂಚವು ಶಿವಪ್ರಪಂಚವಾಗಬೇಕೆಂಬುದೆ ಜೀವನದಲ್ಲಿಯ ಆತ್ಯಂತಿಕ ಗುರಿಯಾಗಿದೆ.

ಪ್ರಕೃತಿ ಮತ್ತು ಪುರುಷ-ಇಂದ್ರಿಯಗೋಚರವಾದುದು ಮತ್ತು ಇಂದ್ರಿಯಾತೀತವಾದುದು—ಇವುಗಳಲ್ಲಿಯ ವಿಂಗಡಿಕೆಯ ನಿರಸನವು ಆಧ್ಯಾತ್ಮಿಕ ಜೀವನದಲ್ಲಿ ಮತ್ತು ಪರಮಾರ್ಥದಲ್ಲಿ ನೂತನವಾದ ಒಂದು ಉದ್ದೇಶವನ್ನೇ ಮಂಡಿಸಿರುವುದು. ಪ್ರಕೃತಿಯು ನಿರಂತರವಾದ ರೂಪುಗೊಳ್ಳುವ ಕ್ರಮಕ್ಕೊಳಗಾಗುವುದು ; ಮತ್ತು ಆತ್ಮನ ಸೋಂಕಿನಿಂದ ಆದರ ಒಂಟುತನವಡಗಿ ಅದರಲ್ಲಿ ನಯವು ಕಂಗೊಳಿಸುವುದು ; ಅಂದರೆ ಆಧ್ಯಾತ್ಮಿಕ ಪ್ರಕಟನೆಗೆ ಅದೊಂದು ಉತ್ತಮವಾದ ಉಪಕರಣವಾಗುವುದು. ವಸ್ತುತಃ ಪ್ರಕೃತಿಯು ಬುದ್ಧಿಯ ಭ್ರಾಂತಿಯೇ ಸರಿ ; ಜೀವನದ ದೃಷ್ಟಿಯಿಂದ ಪ್ರಕೃತಿಯೆಂಬುದಿಲ್ಲವೇ ಇಲ್ಲ. ಅಲ್ಲಿ ಇರುವುದು ವಿವಿಧ ತರಗತಿಗಳಲ್ಲಿ ಗೋಚರವಾಗುವ ಆತ್ಮನ ಲೀಲೆಯೊಂದೇ ! ತನುಮನಗಳಲ್ಲಿ ಭೇದವನ್ನು ಕಲ್ಪಿಸುವುದು ಭ್ರಾಂತಿಯ ಒಂದು ಲಕ್ಷಣವಾಗಿರುವುದು. ಮಾನವ ಕೋಟಿಯೆಲ್ಲ ಇಂದಿನವರೆಗೂ ಈ ಭ್ರಾಂತಿಯಲ್ಲಿಯೇ ಕೊಳೆಯುತ್ತ ಬಂದಿದೆ. ಈ ತೋರಿಕೆಯಲ್ಲಿ ಉನ್ಮನಿಯಾದ ಚಿತ್‌ಶಕ್ತಿಯೊಂದೇ ಸತ್ಯವಾಗಿದೆ. ವಿವಿಧ ವಿಚಾರವಾಹಿನಿಗಳಿಂದ ನರನಾಡಿಗಳ ಮೇಲೆ ಪರಿಣಾಮವುಂಟಾಗಿ ದೇಹದ ಸ್ವರೂಪವೇ ಬದಲಾಗುವದನ್ನು ಒಪ್ಪುವೆವಾದರೆ ಪರಾಶಕ್ತಿಯ ಪ್ರಕೃತಿಯನ್ನು ಪಾರಮಾರ್ಥಿಕಗೊಳಿಸಿ ಪ್ರಾಪಂಚಿಕ ಭಾವನೆಯನ್ನು ಪಲ್ಲಟಗೊಳಿಸುವುದಲ್ಲಿ ಆಶ್ಚರ್ಯವಿಲ್ಲ ! ಪರಮಾರ್ಥವು ಸತ್ಯವಾದದ್ದು, ಪ್ರಪಂಚವೆಲ್ಲ ಮೂಲತಃ ಪರಮಾರ್ಥವಾದುದೇ ! ಬುದ್ಧಿಯ ಅಳಿಗೋಲನ್ನು ನೆಚ್ಚಿ ವಿಚಾರಕ್ಕೆ ರೂಢಿಗೊಂಡಿರುವ ನಮಗೆ ದ್ವಂದ್ವದ ದಂಡುಗದಲ್ಲಿ ಸಿಲುಕಿ ಸಾಯುತ್ತಿರುವುದು ಸ್ವಾಭಾವಿಕವಾದುದು. ಅಸ್ತಿತ್ವದಲ್ಲಿದ್ದು ಗತಿಗೊಳ್ಳುತ್ತಿರುವದನ್ನು ಬುದ್ಧಿಯು ಸ್ಥಿತಿಯಲ್ಲಿ ರೂಪಿಸುವುದೆಂದು ಹೆನ್ರಿ ಬರ್ಗಸನ್ನನು ಹೇಳುತ್ತಾನೆ. ಈ ಮಾತು ನಿಜವಾಗಿ ಸತ್ಯವಾಗಿರುವುದು. ಬುದ್ಧಿಯನ್ನು ನಂಬುವದಕ್ಕಿಂತ ಭಾವನೆಯನ್ನು ನಂಬಿ ನಡೆವುದಾದರೆ ಜೀವನದ ಇರುವಿಕೆಯೇ ಸಮೂಲವಾಗಿ ಬದಲಿಸುವುದು. ಬರ್ಗಸನ್ನನು ಭಾವನಾವಾದದ(Intuitionism)ಮುಂದಾಳು. ಆದುದರಿಂದ ಜೀವನವನ್ನು ಭಾವನೆಯ ದೃಷ್ಟಿಯಿಂದ ನಿರೀಕ್ಷಿಸಬೇಕೆಂದು ಅವನು ಎಚ್ಚರಿಸುವನು. ಹೀಗೆ ಜೀವನವನ್ನು ನೋಡುವುದರಿಂದ ಆಗುವದಾದರೂ ಏನು ? ಪ್ರಕೃತಿಗೆ ಉಳಿಮೆ ಇಲ್ಲದಂತಾಗುವುದು ! ಈ ಜಾಡ್ಯವನ್ನು ಬದಿಗಿರಿಸುವುದರಲ್ಲಿ ನಮಗೆ ಗೆಲುವು ಉಂಟಾಗುವುದಾದರೆ ಜೀವ

ಪ್ರಪಂಚವು ಅಳಿದು ಜೀವನವೆಲ್ಲ ಶಿವಪ್ರಪಂಚವೆಂಬ ತಿಳಿಯುಂಟಾಗುವುದು. ಪ್ರಕೃತಿಯನ್ನು ಪಾರಮಾರ್ಥಿಕಗೊಳಿಸುವ ಈ ಶಕ್ಯತೆಯು ಇಹಪರಗಳಲ್ಲಿಯ ಸಂಬಂಧವನ್ನು ನಿಕಟವಾಗಿ ಸಮೀಪಗೊಳಿಸುವುದು. ದೇವರಾಜ್ಯವು ಇಲ್ಲಿಂದಾಂಚೆಗಿಲ್ಲ ; ಅದು ಇಲ್ಲಿಯೇ ಇದೆ. ಆದುದರಿಂದ ಅಚ್ಚ ಅಧ್ಯಾತ್ಮ ಸಾಧನೆಯು ಇಲ್ಲಿಂದಾಚೆಗಿನ ಬಾಳುವೆಯನ್ನು ಗಳಿಸುವುದರಲ್ಲಿ ಮಾತ್ರವಲ್ಲ ಪ್ರಕೃತಿಯನ್ನು ಪುರುಷನ ಪ್ರಕಟನೆಗೆ ಸಾಧನವಾಗುವಂತೆ ಮಾಡುವುದರಲ್ಲಿ ಸಹ ಅದು ಒಡಮೂಡಬೇಕು.

> ಇಹಪರ ಭ್ರಾಂತಿಯುಳ್ಳನ್ನಕ್ಕ ಶರಣೆನಲೇಕಯ್ಯಾ.
> ಮರ್ತ್ಯಲೋಕವೆಂಬುದೊಂದು ಕರ್ತಾರನ
> ಕಮ್ಮಟವಯ್ಯಾ,
> ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯಾ
> ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯಾ
> ಕೂಡಲ ಸಂಗಮದೇವಾ.

ಎಂಬ ಬಸವಣ್ಣನವರ ವಚನಗಳ ಮರ್ಮವನ್ನಿಲ್ಲಿ ಅರಿಯುಬೇಕು. ಜೀವನದ ವ್ಯವಹಾರವೆಲ್ಲ ಪರಾಶಕ್ತಿಯನ್ನವಲಂಬಿಸಿರುವುದು. ಹೀಗೆ ಅವಲಂಬಿಸಿದುದರಿಂದಲೇ ಅದು ಪೂರ್ಣತೆಯಲ್ಲಿ ಪ್ರಕಟಗೊಳ್ಳುವುದು. ಆದುದರಿಂದ ಚಿಕ್ಕ ಪುಟ್ಟ ಪ್ರಸಂಗಗಳಿಗೂ ಸಹ ವಿಶ್ವಜೀವನದಲ್ಲಿ ಸ್ಥಾನಮಾನವಿದೆ. ಜೀವನವು ನಿರರ್ಥಕವಾದುದು, ಭ್ರಾಂತಿಯಿಂದ ಬೆರೆತುದು ಎಂಬ ವಿಚಾರಕ್ಕೆ ಲಿಂಗವಂತರಲ್ಲಿ ಅವಕಾಶವಿಲ್ಲ ; ಅದು ಸತ್ಯವಾದುದು ಸಂಪತ್ತಿಯಿಂದ ಕೂಡಿದುದು ಎಂಬುದೇ ಅವರ ನಂಬುಗೆ. ಜೀವನದಲ್ಲಿ ಯಾವುದೂ ವ್ಯರ್ಥವಲ್ಲ, ಯಾವುದೂ ಉದ್ದೇಶರಹಿತವಾಗಿಲ್ಲ. ಯಾಕಂದರೆ ಪ್ರತಿಯೊಂದು ಕ್ಷಣವೂ ಪರಮಾನಂದ ಪರಮುಮುಕ್ತಿಯ ಸ್ವರೂಪವನ್ನು ವ್ಯಕ್ತಗೊಳಿಸುವುದು ಜೀವನವ ದಿವ್ಯ ಉದ್ದೇಶವನ್ನು ಅರಿಯಲಾಗದ ನಮಗೆ ಅದು ಕ್ಷಣಿಕ ಮತ್ತುದುಃಖಪರವಾಗಿದೆ ಎಂಬ ಭಾವನೆಗೆ ಅವಕಾಶವನ್ನಿತ್ತಿದೆ. ಅಖಿಲ ಸನ್ನಿವೇಶದಿಂದ ಅದನ್ನು ಬೇರ್ಪಡಿಸುವುದೇ ಈ ಎಲ್ಲ ತೊಂದರೆಗೆ ಕಾರಣವು.

ಶರಣನು ಸತ್ಯದಲ್ಲಿ ದಿವ್ಯ ಶಕ್ತಿಯನ್ನೂ ದಿವ್ಯ ಚಾರಿತ್ರ್ಯವನ್ನೂ ಅರಿತಿಹನು. ಅಂತರಂಗದ ದಿವ್ಯ ಸ್ಫುರಣೆಯಿಂದೊಡಗೂಡಿದ ಸತ್ಯವು ತನ್ನಿಂದ ಅಖಿಲ ವಿಶ್ವವನ್ನೇ ರೂಪಿಸುವುದು. ಮತ್ತು ಹೀಗೆ ರೂಪಿಸುವ ಕ್ರಮದಲ್ಲಿ ಜೀವನದ ಅಂಗ ಪ್ರತ್ಯಂಗಗಳಲ್ಲಿ ಅದು ತನ್ನ ದಿವ್ಯ ಉದ್ದೇಶವನ್ನೂ ಪ್ರಕಟಗೊಳಿಸಿರುವುದು. ಇಟಲಿಯ ತತ್ತ್ವಜ್ಞಾನಿಗಳಾದ ಕ್ರೋಸ್ ಮತ್ತು ಜಂಟಾಯಿಲ್ ಅವರೂ ಸಹ ಇಂಥ ಅಭಿಪ್ರಾಯವನ್ನೇ ಮಂಡಿಸಿರುವರು. ಯಾಕೆಂದರೆ ವಿಶ್ವಾತ್ಮನ (World-spirit) ಒಡನಾಟದಿಂದ ಪ್ರಗತಿಪರವಾದ ಸ್ವಾನುಭಾವ ಸಂಪಾದನೆಗೆ ಅವಶ್ಯವಾದ ಕಾಲದ ಆತ್ಯಂತಿಕ ಸತ್ಯ—ಆದುದರಿಂದಲೇ ಚಾರಿತ್ರದ ಆತ್ಯಂತಿಕ ಘನತೆ ಇವುಗಳನ್ನೇ ಅವರು ಪ್ರತಿಪಾದಿಸಿರುವರು. ಈ ದೆಸೆಯಿಂದ ವೀರಶೈವ ತತ್ತ್ವಜ್ಞಾನದಲ್ಲಿ ವಿಶ್ವಗತಿಯು ಭ್ರಾಮಕವಲ್ಲ ; ಅದೊಂದು ಅಖಂಡ ಲೀಲೆಯಾಗಿರುವುದು. ಹೀಗೆ ಆತ್ಯಂತಿಕ ಸತ್ಯದ ಜೊತೆಗೆ ಅಖಂಡ ಲೀಲೆಯ ಕಲ್ಪನೆಯನ್ನು ಮಂಡಿಸುವುದರಲ್ಲಿ ಶರಣನ ಸ್ಥಾನವು ವಿಶಿಷ್ಟವಾಗಿರುವುದು. ಅದು ಪರಬ್ರಹ್ಮನು ಪ್ರಪಂಚಾತೀತನೆಂಬ ವಾದವನ್ನು ಮಂಡಿಸುವ ಶಂಕರ ಮತ್ತು ಈಶ್ವರ ಪ್ರಾಧಾನ್ಯವಾದವನ್ನು ಮಂಡಿಸಿರುವ ರಾಮಾನುಜ ಹಾಗೂ ಚೈತನ್ಯ ಇವರ ಸ್ಥಾನಗಳಿಗಿಂತ ಭಿನ್ನವಾದುದು. ಶಂಕರನ ಮತದಲ್ಲಿ ಲೀಲೆಯು ದೇವಜ್ಞಾನ ದೃಷ್ಟಿಗೆ ಸಲ್ಲುವ ವಿಶೇಷ ತರಹದ ಗ್ರಹಿಕೆಯಾಗಿದೆ. ವೈಷ್ಣವರಲ್ಲಿ ಲೀಲೆಯಲ್ಲಿ ಅಂತರಂಗ ಬಹಿರಂಗವೆಂಬ ಬಗೆಗೆ ಇಂಬುಂಟು. ಶರಣನಿಗೆ ಲೀಲೆಯು ಮಾತ್ರ ಪರಮನ ಕೇವಲ ಪ್ರಾಣವಾಗಿದೆ. ಈ ಲೀಲೆಯು ಅವನ ಅಖಂಡತೆ ಪರಿಪೂರ್ಣತೆ ಇವುಗಳನ್ನು ಪ್ರಕಟಿಸುವ ಶಕ್ತಿಯಾಗಿರುವುದು. ಶರಣನು ಜೀವನವನ್ನು ಎಲ್ಲ ಬಗೆಯಿಂದಲೂ ದೃಷ್ಟಿಸಿ ಅದರಲ್ಲಿ ಸೃಷ್ಟಿ ಚೇತನವನ್ನೂ ಪರಿಪೂರ್ಣ ಶಕ್ತಿಯನ್ನೂ ಅರಿಯುವನು. ಪರಿಪೂರ್ಣತೆಯ ಆನಂದವು ಸಾಮರಸ್ಯದ ಆನಂದಕ್ಕಿಂತ ಭಿನ್ನವಾದುದಲ್ಲ. ಯಾಕೆಂದರೆ ಎಂದೆಂದೂ ಪರಿಪೂರ್ಣವಾಗಿರುವ, ಎಂದೆಂದೂ ಸನ್ನಿಹಿತವಾಗಿರುವ ಅನಂತವಾದೀ ಜೀವನದಲ್ಲಿ ಸಾಮ್ಯರಸ್ಯದರಿವು ಅಳಿದಿರುವುದಿಲ್ಲ. ಜೀವನದಲ್ಲಿ ಮಾರ್ಪಾಟಗಳಿದ್ದರೆ—ಅನಂತವಾದ ಜೀವನದಲ್ಲಿ ತೆರಪಿಲ್ಲದ ಮಾರ್ಪಾಟಗಳಿರುವುದೂ ಸ್ವಾಭಾವಿಕವಾದುದೇ !—ಅವೆಲ್ಲ ಸಾಮರಸ್ಯದ ತತ್ವವನ್ನನುಸರಿಸಿಯೇ ಸಂಭವಿಸುವವು.

ವೀರಶೈವರು ಕಲ್ಪಿಸಿಕೊಂಡ ಪರಿಪೂರ್ಣವಾದ ಆಧ್ಯಾತ್ಮಿಕ ಶಕ್ತಿಯು ಅತ್ಯಧಿಕವಾದ ಘನತೆಯಿಂದ ಬೆರೆತುಕೊಂಡಿದೆ. ಹಿಂದುಗಳ ವಿಚಾರಸರಣಿಯಲ್ಲಿ ಜೀವನದ ವಿವಿಧ ಸಾಮರ್ಥ್ಯಕ್ಕೆ ಸಲ್ಲಬೇಕಾಗಿದ್ದ ಸ್ಥಾನವು ದೊರೆತಿಲ್ಲ. ಶಕ್ತಿಯೇ ಜೀವಾಳವಾಗಿರುವ ಮತ್ತು ಆಧ್ಯಾತ್ಮಶಾಸ್ತ್ರದ ಭಾಂಡಾರವೆನಿಸಿದ ತಂತ್ರಗಳಲ್ಲಿಯೂ ಆಗಮಗಳಲ್ಲಿಯೂ ಎಷ್ಟೇ ರಮ್ಯವಾಗಿದ್ದರೂ ಶಕ್ತಿಯ ವಿವಿಧ ಸ್ವರೂಪಗಳನ್ನು ಮರೆಯಿಸುವ ಪ್ರಯತ್ನವಿರುವುದು ಕಂಡುಬರುತ್ತದೆ. ಆದರೆ ವೀರಶೈವ ತತ್ವಜ್ಞಾನದಲ್ಲಿ ಆಧ್ಯಾತ್ಮ ಜೀವನದ ತರಗತಿಗೇ ಮಹತ್ವವನ್ನೀಯಲಾಗಿದೆ. ಶರಣನು ತನ್ನಂಗದ ಮೇಲಿರಿಸಿದ, ತನ್ನಂಗದಿಂದ ಎಂದೆಂದೂ ಅಗಲಿರಲಾದ, ಅನಾದ್ಯನಂತನಾದ ಪರಶಿವನ ಪ್ರತೀಕವೆನಿಸಿದ ಇಷ್ಟಲಿಂಗದ ಅನುಸಂಧಾನದಿಂದ ಜೀವನದ ಪ್ರತಿಯೊಂದು ವ್ಯವಹಾರವನ್ನೂ ಮಾರ್ಪಾಟಗೊಳಿಸಿರುವ ಮಾತು ನಿಜವಾಗಿಯೂ ಅನ್ಯಾದೃಶ್ಯವಾದುದು. ಇದು ವೀರಶೈವ ಸಿದ್ಧಾಂತವೆನಿಸಿದ ಷಟ್ಸ್ಥಲದಲ್ಲಿ ದಿವ್ಯ ರೂಪಾಂತರದ ಆದರ್ಶವನ್ನೂ ಮತ್ತು ಮುಕ್ತಿಯ ಸ್ಥಾನದಲ್ಲಿ ಜೀವನದ ಬಗೆಬಗೆಯ ಶಕ್ತಿ ಸಾಮರ್ಥ್ಯಗಳ ಆಧ್ಯಾತ್ಮಿಕ ವಿಕಾಸವನ್ನೂ ಒಡಮೂಡಿಸಿದೆ. ಆದುದರಿಂದ ಶರಣನಿಗೆ ಮುಕ್ತಿ, ಬಂಧನದಿಂದ ಬಿಡುಗಡೆ ಇವು ಜೀವನದ ಆದರ್ಶವಲ್ಲ; ಅವನಿಗೆ ಕೇವಲ ಜೀವನದ ಮತ್ತು ಆಧ್ಯಾತ್ಮದ ತಳಹದಿಯ ಮೇಲೆ ಅದನ್ನು ಉತ್ತಮಗೊಳಿಸುವುದೇ ಆದರ್ಶವಾಗಿದೆ. ಮುಕ್ತಿಯ ಕಲ್ಪನೆಯಲ್ಲಿ ಜೀವನದ ಶಕ್ಯತೆ ಮತ್ತು ಆತ್ಮನ ಶ್ರೇಷ್ಠತೆ ಇವುಗಳಲ್ಲಿ ಕೊನೆಗಾಣದ ಕಲಹದ ಊಹೆಗವಕಾಶವಿದೆ. ಆದುದರಿಂದಲೇ ಇದು ಜೀವನವನ್ನು ನೀರಸಗೊಳಿಸುವುದು. ಅದರಂತೆ ಅದು ಜೀವನದ ರೂಪ ವ್ಯಾಪಾರಗಳ ಅಬ್ಬರದಲ್ಲಿ ವಿಶ್ವಗತ ಸೌಂದರ್ಯ ಗಾಂಭೀರ್ಯಗಳ ತೋರಿಕೆಯ ಸಾಮರ್ಥ್ಯವನ್ನು ತಗ್ಗಿಸುವುದು. ಸಾಮಾನ್ಯವಾಗಿ ಗ್ರಹಿಸುವ ಮುಕ್ತಿಯ ಕಲ್ಪನೆಯನ್ನು ಶರಣನು ಅಲ್ಲಗಳೆದರೂ ದಿವ್ಯಾನಂದದ ಸಂಪಾದನೆಯಲ್ಲಿ ಜೀವನಕ್ಕಿರುವ ಘನವಾದ ಯೋಗ್ಯತೆಯನ್ನು ಮರೆತಿರುವುದಿಲ್ಲ. ಜೀವನದ ಪ್ರತಿಯೊಂದು ವ್ಯವಹಾರವೂ ಶಿವಮಯವಾಗುವ ಅವಧಿಯನ್ನು, ಅವಕಾಶವನ್ನು ನಿರೀಕ್ಷಿಸುತ್ತಿರುವನವನು. ಮತ್ತು ಆತ್ಮನ ಚಿರ ಪರಮ ಶಾಂತಿಯು ಜೀವನದ ಘನವಾದ ವ್ಯವಹಾರದಲ್ಲಿಯೇ ಅಂಗವಿಸುವುದೆಂದೂ ಅರಿತಿರುವನು. ನಿರ್ಮಲವಾದ ಪ್ರಕಾಶದಲ್ಲಿ, ನಿರ್ಭಯವಾದ ಕಾರ್ಯ ವಿಮರ್ಶೆಯಲ್ಲಿ ಈ ನಿರರ್ಗಳವಾದ ಶಾಂತಿಯನ್ನೈದುವನವನು. ಸರ್ವಾಂಗ ಲಿಂಗಸ್ಥಲವೆಂದು ಕರೆಯುವ ಈ ಪರಮಾದರ್ಶದಲ್ಲಿ ದಿವ್ಯ ಜೀವನದ ಸೌಂದರ್ಯ-ಸಮರಸಗಳು ಮಾನವನಿಗೆ ಮುಕ್ತದ್ವಾರವಾಗಿರಿಸಲ್ಪಟ್ಟಿವೆ. ಮತ್ತು ಜೀವನದ ವ್ಯವಹಾರವೆಲ್ಲ ಶಿವಪ್ರಪಂಚದ ವ್ಯವಹಾರವೆನಿಸಿ ಜೀವನವೆಲ್ಲ ಶಿವಮಯವಾಗುವುದು. ಮಾನವಕೋಟಿಯೆಲ್ಲ ದೇವಕೋಟಿಯಲ್ಲಿ ಪರಿಣಮಿಸುವುದು. ಇದುವೆ ವೀರಶೈವ ತತ್ತ್ವಜ್ಞಾನವು ಪ್ರಪಂಚಕ್ಕೆ ನೀಡಿದ ಭರವಸೆಯು.

---

## ಪರಮಾಣು ಪ್ರಪಂಚ

(i) 1 ತೊಲ ತಾಮ್ರದಲ್ಲಿ 1250000000,00000000000000 ಪರಮಾಣುಗಳಿವೆ. ಅಂದರೆ ಈ ಅಂಕಿಯನ್ನು $125 \times 10^{21}$ ಹೀಗೆ ಸಂಕ್ಷೇಪಿಸಿ ಬರೆಯಬಹುದು. ಅಥವಾ ನೂರಿಪ್ಪತ್ತೈದು ಕೋಟಿ, ಕೋಟಿ, ಕೋಟಿ ಎಂದೂ ಹೇಳಬಹುದು.

(ii) 1 ಪಾವು ನೀರಿನಲ್ಲಿ 6300,0000000000000000000000 ಪರಮಾಣುಗಳಿವೆ. ಈ ಸಂಖ್ಯೆಯನ್ನು $2{\cdot}3 \times 10^{24}$ ಹೀಗೆ ಸಂಕ್ಷೇಪಿಸಿ ಬರೆಯುವರು.

(iii) ನೀರಿನ ಒಂದು ಅಣುವಿನ ತೂಕ 0·00000,0000000,0000000,00000256 ತೊಲ. ಈ ಸಂಖ್ಯೆಯನ್ನು $2{\cdot}65 \times 10^{-24}$. ಎಂದು ಬರೆಯಬಹುದು.

## ನಿಖರವಾಗಿ ಚರಿತ್ರೆಗೆ ತಿಳಿದಿರುವಂತೆ ಭಾರತದಲ್ಲಿ ಭೂಕಂಪಗಳು ಯಾವ ಯಾವ ಕಾಲದಲ್ಲಾಗಿವೆ?



ವರಾಹಮಿಹಿರನು ತನ್ನ 'ಬೃಹತ್ಸಂಹಿತೆ' ಎಂಬ ಗ್ರಂಥದತ ಭೂಕಂಪನದ ಲಕ್ಷಣಗಳನ್ನು ಕುರಿತು ದೀರ್ಘವಾಗಿ ಚರ್ಚಿಸಿದ್ದಾನೆ. ಭೂಕಂಪನದ ಪೀಡೆಗೆ ಸೌರಾಷ್ಟ್ರ, ಕುರು, ಮಗಧ, ದಶಾರ್ಣ, ಮತ್ಸ್ಯ, ಅಶ್ಮಕ, ಅಂಗ, ಬಾಹ್ಲೀಕ, ತಂಗಣ, ಕಲಿಂಗ, ವಂಗ, ದ್ರವಿಡ, ಕಾಶಿ, ಯುಗಂಧರ, ಪೌರವ, ಕಿರಾತ, ಕೀರಾಭಿಸಾರ, ಮದ್ರ, ಅರ್ಬುದ. ಸುರಾಷ್ಟ್ರ, ಮಾಲವ, ಗೋನರ್ದ, ಚೇದಿ, ಕಿರಾತ, ವೈದೇಹಿಕ-ಮುಂತಾದ ರಾಷ್ಟ್ರಗಳು ಒಳಗಾಗಿದ್ದುವೆನ್ನುವನು. ಪ್ರಕೃತ ಈ ದೇಶಗಳಲ್ಲಿ ಕೆಲವನ್ನು ಗುರುತಿಸುವುದು ಕಷ್ಟ—

1) ಅಬುಲ್ ಪರಾಜ್ ಎನ್ನುವವನು ತನ್ನ ತರೀಖ್—ಉಲ್— ಖುಲಾಫಾ ಎಂಬ ಖಲೀಫರ ಚರಿತ್ರೆಯಲ್ಲಿ ಕ್ರಿ. ಶ. ೮೯೩ರಲ್ಲಿ ಭಾರತದಲ್ಲಿ ಭಾರೀಪ್ರಮಾಣದ ಭೂಕಂಪವಾಗಿ ೧ಲಕ್ಷ ೮೦ಸಾವಿರ ಜನ ಸತ್ತರೆಂದು ಹೇಳುತ್ತಾನೆ. ಇದೇ ಅತ್ಯಂತ ಹಳೇ ಉಲ್ಲೇಖ.

2) ಬಾಬರನು ತನ್ನ ದಿನಚರಿ ಟಿಪ್ಪಣಿಯಲ್ಲಿ ೧೫—೭—೧೫೦೫ರಲ್ಲಿ ಭಾರಿ ಭೂಕಂಪವಾಯಿತೆಂದಿದ್ದಾನೆ. ಕೋಟೆಯ ಬತೇರಿಗಳು, ಬೆಟ್ಟದ ಶಿಖರಗಳು ಪಟ್ಟಣ ಹಳ್ಳಿಗಳ ಅನೇಕ ಮನೆಗಳು ನಡುಗಿ ಬಿದ್ದುವು. ಅನೇಕ ಜನ ಮನೆಗಳ ಕೆಳಗೆ ಸಿಕ್ಕಿನಾಶವಾದರಂತೆ. ಎಷ್ಟೋ ಕಡೆ ಭೂಮಿಯಬಿರುಕು, ನೀರಿನ ಬುಗ್ಗೆಗಳುಂಟಾಗುವಿಕೆ. ನೆಲಗಳ ತಗ್ಗು ದಿನ್ನೆಗಳಾದುವು. ಒಂದೇ ದಿನ ೩೩ ಸಲಭೂಮಿ ಕಂಪಿಸಿತಂತೆ. ಇದಾದನಂತರ ೧ ತಿಂಗಳಕಾಲ ದಿನಾಲು೨-೩ ಬಾರಿಹಗಲು ರಾತ್ರಿ ನಡುಗುತ್ತಲೇ ಇತ್ತಂತೆ

(3) ೧೫—೭—೧೭೨೦ ರಂದು ದೆಹಲಿಯಲ್ಲಿ ಮುಸಲ್ಮಾನರು ಖುತ್ಬಾ ಆಚರಿಸುತ್ತಿದ್ದಾಗ ಭೂಮಿ ನಡುಗಿ ಡೆಹಲಿ, ಷಹಜಾನ್‌ಪುರಗಳು ಹಾವಳಿಗೊಳಗಾದುವು. ('ಖಾಫಿ ಖಾನ್' ಎಂಬುವರು ವಿವರಿಸಿದ್ದಾರೆ.)

(4) ೧-೯-೧೮೦೩ ರಲ್ಲಿ ಮಧ್ಯರಾತ್ರಿ ಉತ್ತರಪ್ರದೇಶದಲ್ಲಿ ಭೂಕಂಪವಾಗಿ ಕುತುಬಮಿನಾರದ ಮೇಲ್ಭಾಗ ಉರುಳಿಬಿತ್ತೆಂದು ತಿಳಿದುಬರುವುದು.

(5) ೧೬-೬-೧೮೧೯ ಉತ್ತರ ಇಂಡಿಯಾದ ಅನೇಕ ಭಾಗಗಳಲ್ಲಿ- ಹೆಚ್ಚಾಗಿ ಕಾಠೆವಾಡದಲ್ಲಿ ಭಯಂಕರ ಭೂಕಂಪವಾಗಿ ಭೂಜ್ ಪಟ್ಟಣ ನೆಲಸಮವಾಯಿತು. ೮೦೦೦ ಮಂದಿ ಆಲೂರಿನಲ್ಲಿ ಮೃತರಾದರು. ಅಹಮ್ಮದಾಬಾದಿನ ಮಸೀದಿಯ ಶಿಖರಗಳು ಉರುಳಿಬಿದ್ದವು. ಮದುವೆಗಾಗಿ ಸೇರಿದ್ದ ೫೦೧ ಜನ ಹೇಳ ಹೆಸರಿಲ್ಲದಾದರು. ಸಮುದ್ರದಲ್ಲಿ ಪರ್ವತದಷ್ಟೆತ್ತರ ತೆರೆಗಳೆದ್ದು ದಡಕ್ಕೆ ಅಪ್ಪಳಿಸಿದುವು. ಕೆಲವು ಕಡೆ ಭೂಮಿ ೧೪ ಅಡಿ ಕುಸಿಯಿತು. ಈ ಪ್ರದೇಶಕ್ಕೆ ಉತ್ತರದಲ್ಲಿ ೧೫ ಮೈಲಿ ಉದ್ದ ೫ ಮೈಲಿ ಅಗಲದ ಭೂಮಿ ನೆಲಮಟ್ಟದಿಂದ ಮೇಲೆದ್ದಿದೆ. ಆ ದಿಬ್ಬವನ್ನು ಈಗಲು 'ಅಲ್ಲಾಬಂದ್' ಎನ್ನುತ್ತಾರೆ.

(6) ೬-೬-೧೮೨೮ ರಲ್ಲಿ ಕಾಶ್ಮೀರದಲ್ಲಿ ಭಾರಿಭೂಕಂಪವಾಗಿ ೬ ಸಾವಿರ ಜನ ಸತ್ತುಹೋದರು.

(7) ೨೩-೩-೧೮೩೯ರಲ್ಲಿ ಬರ್ಮಾ ಪ್ರಾಂತವನ್ನೆಲ್ಲ ನಡುಗಿಸಿದ ಭಾರಿ ಭೂಕಂಪವಾಯಿತು. ಮಾಂಡಲೇ ಸುತ್ತಮುತ್ತ ಭಾರಿ ಹಾವಳಿಯಾಯಿತು. ಅಮರಪುರ ಆವಾ ಊರುಗಳು ಹಾಳಾದುವು. ಮಿಂಗಾವ್ ದೇವಾಲಯದ ಗೋಪುರ ನೆಲಕ್ಕುರುಳಿತು.

(8) ೧-೪-೧೮೪೩. ದಕ್ಷಿಣ ಭಾರತದಲ್ಲಿ ಬಳ್ಳಾರಿಯ ಸುತ್ತಮುತ್ತ ಭೂಕಂಪವಾಗಿ ಸ್ವಲ್ಪಮಟ್ಟಿಗೆ ಆಸ್ತಿ ಪಾಸ್ತಿ ನಷ್ಟವಾಯಿತು.

(9) ೧೦-೧-೧೮೬೯. ಅಸ್ಸಾಂನಲ್ಲಿ ಸುಮಾರು ೨ ಲಕ್ಷ ೫೦ ಸಾವಿರ ಚದರ ಪ್ರದೇಶವು ಭೂಕಂಪದ ಹಾವಳಿಗೀಡಾಯಿತು.

(10) ೩೦-೫-೧೮೮೫ ರಲ್ಲಿ ಕಾಶ್ಮೀರದಲ್ಲಿ ೧ ಲಕ್ಷ ೧೦ ಸಾವಿರ ಚದರಮೈಲು ನಡುಗಿ ೩೦೦೦ ಜನರು ಸತ್ತರು.

(11) ೧೨-೬-೧೮೯೭ ರಲ್ಲಿ ಅಸ್ಸಾಂನಲ್ಲಿ ೧೭ ಲಕ್ಷ ೫೦ ಸಾವಿರ ಚದರಮೈಲು ಪ್ರದೇಶ ನಡುಗಿ ಷಿಲ್ಲಾಂಗ್, ಗೋಲ್‌ಪಾರ, ಗೌಹತಿ, ನವಗಾಂಗ್, ಸಿಲ್ಹತ್, ನಗರಗಳ ಒಂದು ಕಟ್ಟಡವೂ ಉಳಿಯದಂತೆ ನೆಲಕ್ಕೆ ಬಿದ್ದವು.

(12) ೪-೪-೧೯೦೫ ರಲ್ಲಿ ಕಾಂಗ್ರದಲ್ಲಿ ಸು.೧೬೮. ೨೫ಸಾ. ಚದರಮೈಲು ಪ್ರದೇಶದಲ್ಲಿ ಹಾನಿ. ಕಾಂಗ್ರ, ಧರ್ಮಶಾಲ, ಮತ್ತು ಸುತ್ತುಮುತ್ತ ಪೂರ್ತಿಹಾಳಾಯಿತು

(13) ೮-೭-೧೯೧೮. ಅಸ್ಸಾಂ. ಅನೇಕ ಟೀ ತೋಟಗಳು ಹಾಳಾಗಿ ೮ ಲಕ್ಷ ಚ.ಮೈ. ನಡುಗಿ ಮದ್ರಾಸಿನವರೆಗೂ ಭೂಕಂಪದ ಅನುಭವವಾಯಿತು.

(14) ೩-೭-೧೯೩೦. ಧುಬ್ರಿ—ಅಸ್ಸಾಂನಲ್ಲಿರುವ ಗಾರೋಬೆಟ್ಟಗಳ ಹತ್ತಿರ ೩೮. ೫೦. ಸಾ ಚ.ಮೈ. ಅನಾಹುತಕ್ಕೊಳಗಾಯಿತು.

(15) ೨೭-೮-೧೯೩೧ ಬಲೂಚಿಸ್ಥಾನದ ೩೮-೭೦ಸಾ ಚ.ಮೈ.ಯಲ್ಲಿ ಭೂಕಂಪವಾಗಿ ೨೦೦ಜನ ಸತ್ತರು.

16) ೧೫-೧-೧೯೩೪.ರಲ್ಲಿ ಉತ್ತರ ಬಿಹಾರಿನಲ್ಲಿ ಭಾರೀಪ್ರಮಾಣದ ಭೂಕಂಪವಾಯಿತು. ಉತ್ತರಬಿಹಾರ್. ನೇಪಾಳಗಳು ನಡುಗಿದವು. ೩ ನಿಮಿಷಗಳಲ್ಲಿ ಮೊಂಘೀರ್, ಭಟಗಾಂವ್ ನಾಶವಾದುವು. ಅನೇಕ ಪಟ್ಟಣಗಳು ವಾಸಕ್ಕೆ ಅನುಪಯುಕ್ತವಾದುವು. ಬಿಹಾರಿನಲ್ಲಿ ೭೫೦೦ ಜನರೂ, ನೇಪಾಳದಲ್ಲಿ ೩೪೦೦ ಜನರೂ ಪ್ರಾಣನೀಗಿದರು. ಮಧ್ಯಾಹ್ನ ೨ ೧/೪ ಘಂ. ಸುಮಾರಿಗೆ ಭೂಕಂಪನವಾದ್ದರಿಂದ ಜನ ಪ್ರಾಣಉಳಿಸಿಕೊಳ್ಳಲು ಅನುಕೂಲವಾಯಿತು. ಈ ಭೂಕಂಪ ಪ್ರಪಂಚದ ಭಯಾನಕ ಭೂಕಂಪಗಳಲ್ಲೊಂದು.

(17) ೩೧-೫-೧೯೩೫ ರಂದು ಕ್ವೆಟ್ಟದಲ್ಲಿ ೨ ೧/೨ ಲಕ್ಷ ಚ.ಮೈ. ನಡುಗಿ ೨೫೦೦೦ ಜನ ಸತ್ತರು.

ಇತ್ತೀಚೆಗೆ ಹಲವಾರು ಸಲ ಭೂಮಿನಡುಗಿದ್ದರೂ ಅದು ಅಷ್ಟೊಂದು ಗಣನೀಯವಲ್ಲ.

—ಪ್ರಬುದ್ಧ ಕರ್ನಾಟಕದ ಆಧಾರದಿಂದ

---

## ಭೂಮಿಯಲ್ಲಿರುವ 92 ಮೂಲ ವಸ್ತುಗಳ ಒಟ್ಟು ಪ್ರಮಾಣವೇನು ?

ಭೂಮಿಯಲ್ಲಿರುವ ಮೂಲ ವಸ್ತುಗಳನ್ನು 100 ಎಂದುಕೊಂಡರೆ, ಅದರಲ್ಲಿ

| | |
|---|---|
| ಆಕ್ಸಿಜನ್ | 49·2 |
| ಸಿಲಿಕಾನ್ | 25·7 |
| ಅಲ್ಯುಮಿನಿಯಂ | 7·4 |
| ಕಬ್ಬಿಣ | 4·7 |
| ಕ್ಯಾಲ್ಸಿಯಂ | 3·4 |
| ಸೋಡಿಯಂ | 2·6 |
| ಪೊಟ್ಯಾಷಿಯಂ | 2·4 |
| ಮ್ಯಾಗ್ನಿಷಿಯಂ | 1·9 |
| ಜಲಜನಕ | 0·9 |
| ಟೈಟೇನಿಯಂ | 0·6 |
| ಕ್ಲೋರಿನ್ | 0·2 |
| ರಂಜಕ | 0·1 |
| ಉಳಿದ 78 ವಸ್ತುಗಳು ಸೇರಿ | 0·9 |

# ಸದ್ಯ ಬದುಕಿಕೊಂಡೆ ! (ಲಘುಹರಟೆ)

ಆರ್. ಬ್ಯಾಡರಹಳ್ಳಿ, ಶಿವಲಿಂಗಯ್ಯ ಎಂ. ಎ.,

ಹಿಂದೆ ವರನ ಕಡೆಯವರು ವಧುವಿನ ಅನ್ವೇಷಣೆಯಲಿ ತೊಡಗುತ್ತಿದ್ದರು ; ತೆರ ಕೊಟ್ಟು ಹೆಣ್ಣು ತರುತ್ತಿದ್ದರು. ಈಗ ಕನ್ಯೆಯ ಕಡೆಯವರೇ ವರಾನ್ವೇಷಣೆಯಲ್ಲಿ ಪ್ರವೃತ್ತರಾಗಬೇಕಾಗಿ ಬಂದಿದೆ. ಹೆಣ್ಣಿನವರೇ ಗಂಡಿಗೆ ತೆರ ತೆರಬೇಕಾಗಿ ಬಂದಿದೆ. ಕಾಲದ ತಿರುಗು ಮುರುಗು ಎಂದರೆ ಇದೇ!

ಒಮ್ಮೆ ನಮ್ಮ ಸೋದರಮಾವ ನನ್ನ ಕಡೆ ಬಂದ. ಅವನು ಬಂದದ್ದನ್ನು ನೋಡಿ ನನಗೆ ಅಚ್ಚರಿಯಾಯಿತು. ನಾನು ವಿದ್ಯಾಭ್ಯಾಸ ಮಾಡುತ್ತಿದ್ದಾಗ ಅವನಿಗೆ ಹೊಟ್ಟೆಯುರಿಯುಂಟೆಂಬುದನ್ನು ಹಲವು ವಿಧದಲ್ಲಿ ತೋರ್ಪಡಿಸಿಕೊಳ್ಳುತ್ತಿದ್ದನು. ಕೆಲಸಕ್ಕೆ ಸೇರಿದ್ದು ತಿಳಿದ ಮೇಲೆ ನನ್ನನ್ನು ಹುಡುಕಿಕೊಂಡು ಬಂದ.

ಅಪರೂಪಕ್ಕೆ ಬಂದ ಮಾವನನ್ನು ಉಪಚರಿಸಿದ ಮೇಲೆ, ಆತ ಸಣ್ಣಗೆ ರಾಗ ತೆಗೆದ : "ನೋಡು ಮರಿ, ಒಬ್ಬನೆ ಎಷ್ಟು ದಿನ ಒಂಟಿಯಾಗಿ ಇರಲಿಕ್ಕೆ ಸಾಧ್ಯ ? ಅಡಿಗೆ ಮಾಡಲಿಕ್ಕಾದರೂ ಒಂದು ಹೆಣ್ಣು ಜೊತೆಗೆ ಇರಬೇಡವೆ ?" ಹಾಗೆನ್ನುತ್ತ ಹುಡುಗಿಯ ಫೋಟೋವನ್ನು ಹೊರತೆಗೆದು ತೋರಿಸಿದ. "ಇವರು ಮೂರು ಮಂದಿ ಸಹೋದರಿಯರು. ಇವಳೆ ಮೊದಲನೆಯವಳು. ನಿನಗೆ ತಕ್ಕ ಜೋಡಿ. ಒಳ್ಳೆಯ ಮನೆತನ. ವರದಕ್ಷಿಣೆ-ವರೋಪಚಾರ ಎಲ್ಲ ಚೆನ್ನಾಗಿ ನೋಡಿಕೊಳ್ಳುತ್ತಾರೆ"— ಮುಂತಾಗಿ ವರ್ಣಿಸಿದ.

ಕನ್ಯಾವೀಕ್ಷಣೆಯ ದಿನವೂ ಗೊತ್ತಾಯಿತು. ಹುಡುಗಿಯ ಹೆಸರು 'ವೇಣಿ' ಎಂದು. ತಂದೆ ಮಗಳಿಗೆ ತಾನು ಫೀಜು ಕೊಟ್ಟು ಕಲಿಸಿದ್ದ ಸಂಗೀತವನ್ನು ಹಾಡಲು ಅಪ್ಪಣೆ ಮಾಡಿದ. ಶುರುವಾಯಿತು, ಹಾಡುಗಾರಿಕೆ ; 'ನಿಲ್ಲು ನೀ, ನಿಲ್ಲು ನೀ, ನೀಲವೇಣಿ'........ ಸಂಗೀತ ಮುಗಿಸಿ ಎದ್ದು ಹೋಗುವಾಗ ನೋಡಿದೆ— ಒಂದು ಕಾಲು ಕುಂಟೆಂಬುದನ್ನು ಮನಗಂಡೆ ; ವೇಣಿಯನ್ನಲ್ಲೇ ಬಿಟ್ಟು 'ವಾಣಿ' ಬಸ್ಸಿಗೆ ಕಾಲಿಟ್ಟೆ !

ಮತ್ತೊಬ್ಬರ ಮನೆಯಿಂದ ಆಹ್ವಾನ ಬಂತು ; ಆ ನಮ್ಮ ಭಾವೀ ಮಾವನವರಿಗೆ ನಾಲ್ವರು ಹೆಣ್ಣು ಮಕ್ಕಳು. ಎಲ್ಲರೂ ಒಂದೇ ಸಮನಾಗಿದ್ದರು. ಅವರಲ್ಲಿ ಯಾರನ್ನು ಬೇಕಾದರೂ ಮದುವೆಯಾಗುವ ಸದವಕಾಶ ಕೊಟ್ಟ ಕನ್ಯಾಪಿತೃ. ನಾನು ಹೇಳಿದೆ : "ನಾಲ್ವರ ಹೆಸರುಗಳನ್ನೂ ಬೇರೆ ಬೇರೆ ಚೀಟಿಗಳಲ್ಲಿ ಬರೆದು ಒಂದು ಡಬ್ಬದಲ್ಲಿ ಹಾಕಿ, ನಿಮ್ಮ ಚಿಕ್ಕ ಮಗ ಶಂಕರನ ಕೈಯಿಂದ ಒಂದು ಚೀಟಿ ಎತ್ತಿಸಿರಿ"—ಎಂದು. ಅಂತೇ ಹುಡುಗ ಚೀಟಿ ಎತ್ತಿದ. ಆದರೆ ಅವರ ತಂದೆ 'ಶಾಂತ' ಎಂದು ಬರೆಯುವುದಕ್ಕೆ ಬದಲು ಕೈತಪ್ಪಿ 'ಶಂಕರ' ಎಂದು ಬರೆದಿದ್ದರು. ಸರಿ, ಆ ಗೌರೀ ಶಂಕರನನ್ನೇ ಸ್ಮರಿಸುತ್ತ 'ಬದುಕಿದೆ' ಎಂದುಕೊಂಡು ಊರು ಸೇರಿದೆ.

ಇನ್ನೊಮ್ಮೆ ಒಬ್ಬ ರಾಜಕಾರಣಿ, ನಾನೊಬ್ಬ 'ಪಾರ್ಟ್ ಗ್ರ್ಯಾಜುಯೇಟ್' ಎಂಬುದನ್ನರಿತು ವಿಚಾರಿಸಲು ಬಂದ. ನನ್ನ ವಿದ್ಯೆ, ಉದ್ಯೋಗಗಳನ್ನೆಲ್ಲ ತಿಳಿದ ಮೇಲೆ—"ನೀವು ಬಿ. ಎ., ಪೂರ್ತಿ ಮಾಡಿದ್ದರೆ ಚೆನ್ನಾಗಿತ್ತು ; S. I. /ಸಬ್ ಇನ್ಸ್‌ಪೆಕ್ಟರ್ ಆಗಿದ್ರೆ ಚೆನ್ನಾಗಿತ್ತು ; ಸೇಲ್ಸ್‌ಟ್ಯಾಕ್ಸ್ ಆಫೀಸರಾಗಿದ್ದರೂ ಚೆನ್ನಾಗಿತ್ತು ; ಮನೆಯಲ್ಲಿ ನೀವೊಬ್ಬರೆ ಇದ್ದರೆ ಬಹಳ ಚೆನ್ನಾಗಿತ್ತು " ಮುಂತಾಗಿ ಹೇಳತೊಡಗಿದ. ನನಗೂ ರೇಗಿತು, ಹಿಂದಿನ ದಿನವೇ ಅವನ ಮಗಳನ್ನು ನೋಡಿದ ಶಾಸ್ತ್ರ ಮುಗಿದಿತ್ತು : ನಾನೂ ಹೇಳಿದೆ : "ಹೌದು ಸ್ವಾಮಿ, ನಿಮ್ಮ ಮಗಳಿಗೆ ಸ್ವಲ್ಪ ಓದು ಬರಹ ಬಂದಿದ್ದರೆ ಚೆನ್ನಾಗಿತ್ತು ; ಇನ್ನು ಸ್ವಲ್ಪ ಉದ್ದವಾಗಿದ್ದರೆ ಚೆನ್ನಾಗಿತ್ತು ; ಬಣ್ಣ ಸ್ವಲ್ಪ ಕಪ್ಪು ಕಮ್ಮಿಯಿದ್ದರೆ ಚೆನ್ನಾಗಿತ್ತು ; ಹಲ್ಲುಗಳು ಸ್ವಲ್ಪ ಒಳಗಡೆ ಇದ್ದರೆ ಚೆನ್ನಾಗಿತ್ತು...." ಹಾಗೆ ಹೇಳುವಷ್ಟರಲ್ಲಿ ಮುಖ ಸಿಂಡರಿಸಿಕೊಂಡು ಹೊರಟೇ ಹೋದ !

# ಕನ್ನಡ ಸಾಹಿತ್ಯದಲ್ಲಿ ನಾಟಕ ಕಲೆ

ಕುಮಾರಿ ಶಾರದಾಮಡಿಮನ್ ಎಂ.ಎ ,ಬಿ.ಇಡಿ.,

1968 ನೆಯ ಮೊದಲನೆಯ ಸಂಚಿಕೆಯಿಂದ ಮುಂದುವರಿದುದು

**ಸಂಸ್ಕೃತ ಹಾಗೂ ಗ್ರೀಕ್ ಭಾಷೆಗಳ ಪ್ರಭಾವ-ಸಂಪರ್ಕ :—**

ಕನ್ನಡ ಸಾಹಿತ್ಯದಲ್ಲಿ ಸಂಸ್ಕೃತ ಮತ್ತು ಗ್ರೀಕ್ ಸಾಹಿತ್ಯ-ಗಳ ಪ್ರಭಾವ ಸಾಕಷ್ಟಾಗಿದೆ. ಅವುಗಳ ನಿಕಟ ಸಂಪರ್ಕವೇ ಇದಕ್ಕೆ ಕಾರಣ. ಮೇಲೆ ಹೇಳಿದ ಅಂಶ ಗಳೆಲ್ಲ ಕೇವಲ ಕಥೆಗಳಾಗಿಯೇ ಉಳಿದಿವೆ ಹೊರತು ಆ ನಾಟಕಗಳೊಂದೂ ನಮಗಿಂದು ದೊರೆತಿಲ್ಲ. ಈ ಬಗ್ಗೆ ಎನ್ಸೈಕ್ಲೋಪಿಡಿಯಾ ಬ್ರಿಟಾನಿಕಾದಿಂದ ಕೆಲವಂಶ ಗಳನ್ನು ಹೀಗೆ ಸಂಗ್ರಹಿಸಿ ಹೇಳಬಹುದು. 'Classical Drama' ಎಂಬ ವಿಷಯವನ್ನು ಕುರಿತು ಚರ್ಚಿಸುವಾಗ, "The first drama of known authorship, which appears among the Second Century frag-ments mentioned above is the ಸಾರಿಪುತ್ರ ಪ್ರಕರಣ of the Buddist author ಅಶ್ವಘೋಷ, 1st Century A.D. dealing with the theme of conversion to Buddism found also in his two poetic works. Enough of text rem-aining to show that the division in to acts, the use of both prose and verse and the appearance of a prakrit speaking "ವಿದೂಷಕ" were features already well established in Asvaghosha's time....ಎಂದು ಹೇಳಿದ ಈ ಮಾತುಗಳಿಂದ ಭಾರತೀಯ ಪ್ರಥಮ ನಾಟಕದ ಅಸ್ತಿತ್ವವನ್ನು ನಾವು ಕಾಣಬಹುದು. ಆದರೆ ಇಂದು ಪ್ರಾಚೀನತಮವೆಂದು ನಮಗೆ ಕಂಡು ಬರುವ ನಾಟಕಗಳೆಂದರೆ ಭಾಸಕಾಳಿದಾಸಾದಿಗಳು ಬರೆದ ಸಂಸ್ಕೃತ ನಾಟಕಗಳು. ಇದಕ್ಕೆ ಆಧಾರವಾಗಿ ಶ್ರೀಮಾನ್; ಮಂಕಡ್‌ರವರು ತಮ್ಮ, 'Types of Sanskrit Drama'ದಲ್ಲಿ ಹೇಳಿದ, ಭಾಣ ಮೊದಲಾದ ರೂಪಕ ಗಳೇ ನಾಟಕಗಳ ಆದಿ'ಎಂಬ ಮಾತನ್ನು ನೆನೆಯ ಬಹುದು. ಆದರೆ ಇದಕ್ಕೆ ಕೆಲವು ಆಕ್ಷೇಪಣೆಗಳು ಇಲ್ಲದೆ ಇಲ್ಲ. ಅನೇಕ ಆಂಗ್ಲ ವಿದ್ವಾಂಸರು, ಇತಿಹಾಸದ ದೃಷ್ಟಿಯಿಂದ, ನಾಟಕದ ಮೂಲವನ್ನು ಹುಡುಕಲು ಪ್ರಯತ್ನಿಸಿದ್ದಾರೆ. ಅಂಥವರಲ್ಲಿ ಮ್ಯಾಕ್ಸ್‌ಮುಲ್ಲರ್, ಕೀಥ್, ಡಾ. ಹರ್ಟೆಲ್, ಮೊದಲಾದವರನ್ನು ಹೆಸರಿಸಬಹುದು. ವೇದದಲ್ಲಿ ಕಾಣ ಬರುವ 'ಸುಪರ್ಣಾಧ್ಯಾಯ'ವು ಒಂದು ಸಂಪೂರ್ಣರೂಪ ಕವೇ ಇರಬೇಕೆಂದು ಹರ್ಟೆಲ್‌ರವರು ಊಹಿಸಿದರೆ, 'ಅಂದ ಚಂದದ ಉಡುಗೆ-ತೊಡಿಗೆಗಳಿಂದ ಅಲಂಕೃತರಾದ ನರ್ತಕಿಯರ ವರ್ಣನೆ ಋಗ್ವೇದದಲ್ಲಿಯೂ, ಸಂಗೀತ ಹಾಡುತ್ತ ನರ್ತಿಸುವ ನರ್ತಕನ ವರ್ಣನೆ ಅಥರ್ವಣ ವೇದದಲ್ಲಿಯೂ ಕಾಣ ಬರುತ್ತದೆಯಂತೆ ಎಂದು ವಿಂಟರ್‌ನಿಟ್ಸರವರು ತಮ್ಮ A history of Indian literature (vol.1.p 312) ದಲ್ಲಿ ಹೇಳಿದ್ದಾರೆ. ಆದರೆ ಈ ಊಹೆಗೆ ಸಾಂಪ್ರದಾಯಕರ ಹೇಳಿಕೆಯ ಆಧಾರವಿಲ್ಲವೆಂದು ಖಂಡಿಸಿ. ಶ್ರೀಮಾನ್ ಎ.ಆರ್. ಕೃಷ್ಣಶಾಸ್ತ್ರಿಗಳು ತಮ್ಮ 'ಸಂಸ್ಕೃತ ನಾಟಕ'ದಲ್ಲಿ, 'ವೈದಿಕ ಯುಗದಲ್ಲಿಯೇ ನಾಟಕವಿತ್ತು ಎಂದು ಹೇಳಲು ಸಾಕಷ್ಟು ಆಧಾರವಿಲ್ಲ ಎಂದಿದ್ದಾರೆ. ಮಹಾಭಾರತದ ಕಾಲಕ್ಕೆ ನಾಟಕದ ವಿಚಾರವಾಗಿ ಯಾವ ಸ್ಪಷ್ಟಕಲ್ಪನೆಯು ಇದ್ದಂತೆ ಕಾಣುವುದಿಲ್ಲ. ರಾಮಾಯಣದ ಕಾಲಕ್ಕೆ ನಾಟಕ ಅಸ್ತಿತ್ವಕ್ಕೆ ಬಂದುದನ್ನು ಕುಶಲವರು ಹಾಡಿದ ರಾಮಾಯಣ ಕಥಾ ಭಾಗದಿಂದ ಸ್ಪಷ್ಟವಾಗುತ್ತದೆ. ಅಯೋಧ್ಯಾ ಕಾಂಡದಲ್ಲಿ ಬರುವ 'ವಧು ನಾಟಕ ಸಂಘದ ಉಲ್ಲೇಖ, ಆರನೇ ಸರ್ಗದಲ್ಲಿಯ 'ನಟನರ್ತಕ ಸಂಘ'ಎಂಬ ಮಾತು

ನಾಟಕದ ಅಸ್ತಿತ್ವವನ್ನು ಸ್ಪಷ್ಟಪಡಿಸುತ್ತದೆ. 'ಕುಶೀಲವ ಎಂದರೆ ನಟ'ಎಂಬ ಅರ್ಥವನ್ನು ಕೀಥ್‌ರವರು ತಮ್ಮ 'The Sanskrit Drama'ದಲ್ಲಿ ಹೇಳಿದ್ದಾರೆ.

ಕೆಲವು ಪಾಶ್ಚಾತ್ಯದ ವಿದ್ವಾಂಸರ ಅಭಿಪ್ರಾಯದಲ್ಲಿ, ನಾಟಕದ ಉತ್ಪತ್ತಿಗೆ ಗ್ರೀಕ್ ಸಂಪರ್ಕವೇ ಕಾರಣ. ಕ್ರಿ. ಪೂ.೪ನೆಯ ಶತಮಾನದ ತರುವಾಯ ಅಂದರೆ ಅಲೆಕ್ಸಾಂಡರ್ ಚಕ್ರವರ್ತಿ ನಮ್ಮ ದೇಶಕ್ಕೆ ದಂಡೆತ್ತಿ ಬಂದು, ಬಹುದಿನಗಳವರೆಗೆ ಇಲ್ಲಿಯೇ ಇದ್ದಾಗ ಅವನ ಜೊತೆಗೆ ಗ್ರೀಸಿನ ಅನೇಕ ನಟರೂ ಬಂದು ನೆಲಸಿದ್ದರು ಎಂದೂ, ಅವರ ನಾಟಕಗಳ ಪ್ರಭಾವ ಸ್ವಾಭಾವಿಕ-ವಾಗಿಯೇ ನಮ್ಮವರ ಮೇಲೆ ಆಯಿತೆಂದೂ ಹೇಳುವುದಕ್ಕೆ ಸಂಸ್ಕೃತ ನಾಟಕಗಳಲ್ಲಿ ಕಂಡುಬರುವ ಕೆಲವು ಗ್ರೀಕ್ ಸಾದೃಶ್ಯಗಳನ್ನು ನೋಡಬಹುದು. ಇದಕ್ಕೆ ಸಾಧಾರವಾಗಿ ಸಂಸ್ಕೃತ ನಾಟಕಗಳಲ್ಲಿ ಹೆಚ್ಚಾಗಿ ಬಳಕೆಯಲ್ಲಿರುವ 'ಯವನಿಕಾ'ಎಂಬ ಶಬ್ದೋತ್ಪತ್ತಿಯನ್ನುವಿವರಿಸಿ'ಯವನ್' ಎಂದರೆ 'ಗ್ರೀಸ್'ಎಂಬ ಅರ್ಥವನ್ನು ಹಲವು ವಿದ್ವಾಂಸರು ಸೂಚಿಸುತ್ತಾರೆ. ಆದರೆ ಇಂತಹ ಒಂದೆರಡು ಸಾದೃಶ್ಯಗಳಿಗಿಂತ ವ್ಯತ್ಯಾಸಗಳೇ ಹೆಚ್ಚಾಗಿರುವವೆಂದು ಡಾ. ವಾರ್ಡರವರು ಎನ್ಸೈಕ್ಲೋಪಿಡಿ-ಯಾ ಬ್ರಿಟಾನಿಕದಲ್ಲಿ ಹೀಗೆ ಹೇಳಿದ್ದಾರೆ: "There is no real evidence for assuming any influence of Greek examples upon the Indian Drama at any stage of its progress". ಉತ್ತರಬಿಹಾರ (ಪ್ರಾಚೀನ ಮಗಧರಾಜ್ಯ) ದಲ್ಲಿಯ ಸೀತಗಂಗಾ ಮತ್ತು ಜೋಗಿಮಾರ ಗುಹೆಗಳಲ್ಲಿ ಗ್ರೀಕ್ ಮಾದರಿಯ ರಂಗಸ್ಥಳ ಹಾಗೂ ನಾಟಕಕಲೆಗೆ ಸಂಬಂಧಪಟ್ಟ ಅನೇಕ ಚಿಹ್ನೆಗಳು ಕಂಡು ಬಂದರೂ, ಅವುಗಳನ್ನು ನಾಟಕದ ಮೂಲಕ್ಕೆ ಆಧಾರವಾಗಿ ಗ್ರಹಿಸುವುದು ಉಚಿತವಲ್ಲವೆಂದೇ ಹೇಳಬೇಕು ಎಂದು ಶ್ರೀ ತ.ಸು.ಶಾಮರಾಯರು ಅಭಿಪ್ರಾಯ ಪಟ್ಟಿದ್ದಾರೆ. ಅಂತೂ ಭರತನ ನಾಟ್ಯ ಶಾಸ್ತ್ರವೇ ಭರತಖಂಡದಲ್ಲಿಯ ನಾಟಕ ಶಾಸ ಪರಿಚಯಕ್ಕೆ ಮೂಲವೆಂದು ಹೇಳಬಹುದು.

ಸಾಹಿತ್ಯದ ಎಲ್ಲಾ ಕ್ಷೇತ್ರಗಳಲ್ಲಿಯೂ ಸಂಸ್ಕೃತ ಸಾಹಿತ್ಯದ ಜಾಡನ್ನೇ ಹಿಡಿದು ಹೊರಟ ನಮ್ಮ ಕನ್ನಡ ಸಾಹಿತ್ಯ ನಾಟಕರಂಗದಲ್ಲೇನು ಅಪವಾದವಾಗಿಲ್ಲ; ತಲ್ಲಿ ಸಂಸ್ಕೃತಾಂಬೆ ಎಲ್ಲ ಭಾಷಲಕುನು........,ಜನನಿ ಸಮಸ್ತ ಭಾಷಲಕು ಸಂಸ್ಕೃತ ಬಾಷ........,ಮುಂತಾಗಿ ತೆಲಗು ಕವಿ ಹಾಗೂ ಶಾಸ್ತ್ರಜ್ಞರಾದ ಪೆದ್ದನ, ಕೇತನಾದಿಗಳು ಹೇಳಿದರೆ ಕನ್ನಡ ವ್ಯಾಕರಣ ಅಲಂಕಾರ ಶಾಸ್ತ್ರ ಗ್ರಂಥಗಳು ಸಂಸ್ಕೃತಗ್ರಂಥಗಳ ಆಕರಗಳನ್ನು ಭಟ್ಟಿ ಇಳಿಸಿದವು. ಅದೇ ಪ್ರಕಾರ ಕನ್ನಡ ನಾಟಕಗಳೂ ಆರಂಭವಾದುದು ಸಂಸ್ಕೃತನಾಟಕಗಳ ಪಡಿಯಚ್ಚಿನ ರೂಪದಲ್ಲಿ, ಒಂದು ಸಾವಿರ ವರ್ಷಕ್ಕೆ ಮೇಲ್ಪಟ್ಟ ಚರಿತ್ರೆಯುಳ್ಳ ಕನ್ನಡ ಸಾಹಿತ್ಯಾರಣ್ಯದಲ್ಲಿ ಗದ್ಯ, ಪದ್ಯ, ಶಾಸನ, ಶತಕ, ಲಕ್ಷಣ ಶಾಸ್ತ್ರಾದಿ ವೈವಿಧ್ಯಪೂರ್ಣ ಸಾಹಿತ್ಯಕ ಹೆಮ್ಮರಗಳು ಕಂಡುಬಂದರೂ, "ನಾಟಕ" ವೆಂದೆನಿಸಿಕೊಳ್ಳುವ ಪ್ರತ್ಯೇಕ ವೃಕ್ಷಮೊಳೆತದು 17ನೆಯ ಶತಮಾನದ ಚಿಕದೇವರಾಜನ ಕಾಲದಲ್ಲಿ ಇದೇ "ಮಿತ್ರವಿಂದ ಗೋವಿಂದ"——ಶ್ರೀ ಹರ್ಷನು ಬರೆದ ರತ್ನಾವಳಿ ಸಂಸ್ಕೃತ ನಾಟಕದ ಭಾಷಾಂತರ ಅದನ್ನು ಬರೆದವರು ತಿರುಮಲಾಚಾರ್ಯನ ತಮ್ಮನಾದ ಸಿಂಗರಾರ್ಯ—ಶ್ರೇಷ್ಠ ಕವಯಿತ್ರಿ ಹೊನ್ನಮ್ಮನ ವಿದ್ಯಾಗುರು. ಶ್ರೀಮಾನ್ ರಂ ಶ್ರೀ. ಮುಗಳಿಯವರು 'ಇದು ಸ್ವತಂತ್ರ ಕೃತಿಯೆಂದು ತೋರುವಂತೆ ಮಾಡಿದ್ದ ಕೃತಿಚೌರ್ಯದ ಮಾದರಿಯೇ ಸರಿ' ಎಂದಿದ್ದರೂ ಕನ್ನಡಕ್ಕೆ ಬಂದ ಪ್ರಥಮ ನಾಟಕವೆಂದು ಇದನ್ನು ಸ್ಮರಿಸಬೇಕು. ಇದನ್ನು ನೋಡಿದರೆ 17ನೆಯ ಶತಮಾನಕ್ಕಿಂತ ಹಿಂದೆ ಇದ್ದ ನಮ್ಮ ಕವಿಗಳಿಗೆ "ನಾಟಕದ" ಕಲ್ಪನೆಯೇ ಇರಲಿಲ್ಲವೇ ? ಎಂಬ ಪ್ರಶ್ನೆ ಹೇಳಬಹುದು ಆದರೆ, ಕನ್ನಡ ಸಾಹಿತ್ಯ ಚರಿತ್ರೆಯನ್ನು ಕೂಲಂಕಷವಾಗಿ ಸಿಂಹಾವಲೋಕಿಸಿದರೆ ನಮಗೆ ಸಮಾಧಾನಕರ ಉತ್ತರ ದೊರಕುವುದು.

## ಕನ್ನಡ ಸಾಹಿತ್ಯದಲ್ಲಿ ನಾಟಕದ ಸುಳುವು

ಸಿಂಗರಾರ್ಯನಿಗಿಂತಲೂ ಹಿಂದೆ ಇದ್ದ ಗೋವಿಂದ ವೈದ್ಯನು (1644) ತನ್ನ "ಕಂಠೀರವನರಸರಾಜವಿಜಯ" ದಲ್ಲಿ ನಾಟ್ಯಶಾಲೆಯನ್ನು ಬಹುಮನೋಹರವಾಗಿ ವರ್ಣಿಸಿದ್ದಾನೆ. "ನರಸಿಂಹಸ್ತುತಿಗೀತ ಪ್ರಬಂಧವಿ ಸಿರಿದು ಸೂಳಾದಿ ತಾಳದಲಿ ಕರದ ಅಭಿನಯಗೂಡಿ ಕಂಡು ಕುಶಲದೇ ನಾಟ್ಯದಿರವ ಮೆರೆದಂಗನೆ'ಯರಿಗೆ ನಾಟ್ಯ ಭೇದಗಳಾದ ಅಂಗಪ್ರತ್ಯಂಗೋ ಪಾಂಗ ಬಹುಚಾಳಿ...."

....ಮುಂತಾದವು ಚೆನ್ನಾಗಿ ಗೊತ್ತಿದ್ದವು. ಇದರಿಂದ ನಾಟ್ಯಕಲೆಯಲ್ಲದೆ ನಾಟಕಕಲೆಯೂ ಒಂದು ಉನ್ನತ ಸ್ಥಿತಿಗೆ, ಆಗ ಬಂದು ಮುಟ್ಟಿದುದು ತಿಳಿದು ಬರುತ್ತದೆ. 1604 ರಲ್ಲಿ ಭಟ್ಟಾಕಳಂಕನು ತನ್ನ ಕಾಲದಲ್ಲಿ ನಾಟಕ ಗಳು ಇದ್ದವೆಂದು ಹೇಳುತ್ತಾನೆ. ಇವನ ಶಬ್ದಾನು ಶಾಸನದಲ್ಲಿ, ಶಬ್ದಾಗಮಯುಕ್ತ್ಯಾಗಮ, ಪರಮಾಗವು ವಿಷಮಾಣಃ ಕಥಾ ಕಾವ್ಯ ನಾಟಕಾಲಂಕಾರ ಕಲಾ ಶಾಸ್ತ್ರ ವಿಷಯಾಣಾಂಚ ಬಹೂನಾಂ ಗ್ರಂಥಾನಾಮಪಿ ಭಾಷಾಕೃತಾನಾಮುಪಲಭ್ಯ ಮಾನತ್ವಾತ್' ಎಂದಿರು ವುದರಿಂದ ಆತನ ಕಾಲಕ್ಕೆ ಕನ್ನಡ ನಾಟಕಗಳು ಇದ್ದವು. 1557 ರಲ್ಲಿದ್ದ ರತ್ನಾಕರ ವರ್ಣಿಯ ಭರತೇಶವೈಭವ' ದಲ್ಲಿ ಪೂರ್ವನಾಟಕ, ಹಾಗೂ ಉತ್ತರ ನಾಟಕಸಂಧಿಗಳು ನಾಟ್ಯ ಹಾಗೂ ನಾಟ್ಯಶಾಲೆಯ ವಿಷಯದ ವರ್ಣನೆ ಗಳಿಂದ ಕೂಡಿದೆ. ಇವು ನಾಟ್ಯಕ್ಕೆ (ನೃತ್ಯಕ್ಕೆ) ಅನ್ವ ಹಿಸುವವಾದರೂ ನಾಟಕರಂಗವೂ ಹೆಚ್ಚು ಕಡಿಮೆ ಅದೇ ರೀತಿಯಾಗಿದ್ದಿರಬೇಕೆಂದು ಊಹಿಸಲಡ್ಡಿಯಿಲ್ಲ. ಎಂದು ಅ.ನ.ಕೃ.ರವರು ಹೇಳಿದ ಮಾತನ್ನು ಸಮರ್ಥಿಸಬಹುದು. ಕೃಷ್ಣದೇವರಾಯನ ಕಾಲದಲ್ಲಿ ಅಂದರೆ ಸುಮಾರು 1508 ರಿಂದ 1529ರ ವರೆಗೆ ನಾಟಕಕ್ಕೆ ವಿಶೇಷ ಪ್ರೋತ್ಸಾಹ ಕೊಟ್ಟದ್ದು ಕಂಡುಬರುತ್ತದೆ. ವಸಂತೋತ್ಸವ ಸಮಯದಲ್ಲಿ ಸಮಸ್ತ ಪ್ರಜೆಗಳ ಮುಂದೆ ರಾಜನೇ ಬರೆದ "ಜಾಂಬವತಿಕಲ್ಯಾಣ" ನಾಟಕವನ್ನು ಅಭಿನಯಿಸಿದ ಪ್ರಸಂಗವನ್ನು ಅಲ್ಲಿ ಕಾಣಬಹುದು. ಆ ಕಾಲದಲ್ಲಿ ಹಾಡ ಲ್ಪಟ್ಟ "ತಾಯಿಕುಂದ ನಾಟಕ"ದಲ್ಲಿ ಪಾತ್ರವಹಿಸಿದ ನಟುವ ನಾಗಯ್ಯ ಮತ್ತು ಒಬ್ಬ "ಪಾತ್ರಿ"ಗೆ ಭೂಮಿಯು ಬಳುವಳಿ ಕೊಡಲಾಯಿತು ಅರ್ಥಾತ್ ನಾಟ್ಯ ಹಾಗೂ ನಾಟಕಗಳೆರಡೂ ಬೆರೆತ ಮಿಶ್ರರಂಗಭೂಮಿ ಆ ಕಾಲದಲ್ಲಿ ವರ್ಧಿಸಿತು. ಕ್ರಿ.ಶ. 1600ರಲ್ಲಿ ಆಗಿಹೋದ ನಿಜಗುಣ ಶಿವಯೋಗಿಗಳ "ವಿವೇಕಚಿಂತಾಮಣಿ"ಯ ನಾಲ್ಕನೆಯ ಪ್ರಕರಣದಲ್ಲಿ ನಾಟಕದ ವಿಚಾರ ಪ್ರಸ್ತಾಪಿತವಾಗಿದೆ;'.... ....ಬಳಿಕ ನಾಟಕದಲ್ಲಿ ದಿನದಿನಕಭಿನಯಿಸಲ್ತಕ್ಕ ರಸ,ಭಾವ ಸಂವಿಧಾನ ಆಶ್ರಯಂಗಳೆಂಬ ಚತುರ್ವಿಧ ಪ್ರಬಂಧಾಂಶ ಗಳಂ........'ಎಂಬಲ್ಲಿ ನಾಟಕದ ಕಲ್ಪನೆ ಅಂದಿಗೂ ಇತ್ತೆಂ ಬುದು ತಿಳಿಯುತ್ತದೆ. ೧೨೬೦ ರಲ್ಲಿದ್ದ ಶ್ರೇಷ್ಠ ವೈಯಾ ಕರಣ ಕೇಶಿರಾಜನು ತನ್ನ ಸುಪ್ರಸಿದ್ಧ 'ಶಬ್ದಮಣಿದರ್ಪಣ' ಗ್ರಂಥದಲ್ಲಿ, ಸುಭದ್ರಾಹರಣ, ಪ್ರಬೋಧ ಚಂದ್ರೋ ದಯಗಳನ್ನು ಬರೆದುದಾಗಿ ಉಲ್ಲೇಖಿಸಿದ್ದಾನೆ. ಹೆಸರು ಗಳನ್ನು ಗಮನಿಸಿದರೆ ಇವೆರಡೂ ನಾಟಕಗಳಾಗಿರಬಹು ದೆಂದು ತೋರುತ್ತದೆ. ಆದರೆ ದುರ್ದೈವದಿಂದ ಇವು ಸಿಕ್ಕಿಲ್ಲ. ಕುಮಾರವ್ಯಾಸನ'ಕನ್ನಡ ಭಾರತ'ದಲ್ಲಿ ನಾಟಕದ ಪ್ರಸ್ತಾಪವಂತೂ ಅನೇಕ ಪರ್ವಗಳಲ್ಲಿ ಬರುತ್ತದೆ. ಉದಾಹರಣೆಗೆ,'........ಸಮಬುದ್ಧಿಗಳ ನಾಟಕವ ನಟಿ ಸುತ ಪರಮ ತತ್ತ್ವಜ್ಞಾನ ಪರರಾಗಿ; ಹೊಸನಾಟಕವ ನಭಿನಯಿಸಿ ಹೆಣಗಿದರು; ಕೃಷ್ಣನ ದೇಹವಿದು ನಾಡಾಡಿ ಗಳ ನಾಟಕ ವಲೆ ನರನಾಥ ಕೇಳೆಂದ- ಇತ್ಯಾದಿ. ಇವು ಗಳನ್ನು ನೋಡಿದರೆ ಕ್ರಿಶ. ೧೪೩೦ರಲ್ಲಾಗಲೇ ನಾಟಕ ಗಳು ಸಾಕಷ್ಟು ಇದ್ದಿರಬೇಕು ಹಾಗೂ ಅವನ್ನು ನಟಿಸು- ತ್ತಿದುದನ್ನು ಕುಮಾರವ್ಯಾಸ ಕಂಡಿರಬೇಕೆಂದು ತೋರು ತ್ತದೆ. ಜೊತೆಗೆ, 'ಶಲ್ಯಪರ್ವ'ದಲ್ಲಿ ಬರುವ, '........ ವಿಜಯೋಪಚಿತ **ರಣನಾಟಕಕೆ ಜವನಿಕೆಯಾಯ್ತಲೇ ರಜನಿ'** ಎನ್ನುವಲ್ಲಿ ಆ ಕಾಲದಲ್ಲಾಡುತ್ತಿದ್ದ ನಾಟಕ ಗಳಲ್ಲಿ 'ಜವನಿಕೆ' ಅರ್ಥಾತ್ ಪರದೆಗಳ ಉಪಯೋಗ ವಾಗುತ್ತಿತ್ತೆಂದೂ ತಿಳಿಯುತ್ತದೆ.



# ಪ್ರವರ್ತತಾಂ ಭಾರತ ಭಾಗ್ಯಚಕ್ರಂ

ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಕಾಲೇಜಿನ ಘನವಿದ್ವಾಂಸರಾದ ವೇ|| ವಾಸುದೇವಾಚಾರ್ಯರು ಬೆಂಗಳೂರಿನಲ್ಲಿ ಸೇರಿದ ಸಂಸ್ಕೃತ ಕವಿ ಸಮ್ಮೇಲನದಲ್ಲಿ ಹಾಡಿದುದು ಪದ್ಯವು ಅವರ ವಿದ್ವತ್ತನ್ನು ವ್ಯಕ್ತಪಡಿಸುವುದಾಗಿದೆ.

—ಸಂ.

ವಿನಾಯಕಾಪಾಂಗತರಂಗಿತಂ ಸಚ್ಛಿವೇನ ಭೂಮ್ನಾ
ವಿಧಿನಾಪ್ರಣುನ್ನಮ್ | ಶ್ರುತಿಸ್ಮೃತಿ ಪ್ರೋಜ್ವಲ
ಯಾಜನಾತ್ತಂ ಪ್ರವರ್ತತಾಂ ಭಾರತ ಭಾಗ್ಯಚಕ್ರಂ || ||೧||

ನಿಸರ್ಗಭೂತ್ಯಾಽ ವಿರತಪ್ರಸೂತ್ಯಾ
ವಿನಮ್ರಭೂತ್ಯಾಹಿತ ರಾಜ್ಯಕೃತ್ಯಾ |
ನ್ಯಾಯೇಸುಮತ್ಯಾವಿಲ ಮಾಶುಗತ್ಯಾ ಪ್ರವರ್ತತಾಂ........ ||೨||

ವಿಶುದ್ಧಬುದ್ಧ್ಯಾಹಿತ ದೈವಭಕ್ತಿ
ಪ್ರಕರ್ಷ ಸಂಭೂಷಿತ ಸಚ್ಚರಿತ್ರಂ |
ಸದಾಗಮ ಪ್ರೋಜ್ವಲಮಾತ್ಮ ಸಂಸ್ಥಂ ಪ್ರವರ್ತತಾಂ....|| ||೩||

ಲಸದ್ವಿವೇಕಾಮೃತದಾನಶೌಂಡಂ
ನಿಶಿಲ್ಬಿಷಂ ಸಾಧುರಸಪ್ರಸಾದಂ |
ಕಾಂತಾಮುಖಂ ಕಾವ್ಯ ವಿಭೂಷಣಂತತ್
ಪ್ರವರ್ತತಾಂ............ಚಕ್ರಂ|| ||೪||

ಸತೀಸುತಾದೀನಿವ ಬಂಧುವರ್ಗಾನ್ ಪರಾನ್ನಿಶಿತಪ್ಪತ
ಹತಾಂಶ್ಚದೀನಾನ್ | ಜನಾನ್ ಸಮುದ್ಧೃತ್ಯ
ಚಿರಾಯ ಸಾಧು ಪ್ರವರ್ತತಾಂ...........ಚಕ್ರಂ || ||೫||

ಪ್ರಸನ್ನಗಂಭೀರ ಸುಧಾ ಸಮುದ್ರಾನ್
ವಿಸ್ಪೃಷ್ಟ ಶಾಸ್ತ್ರ ಪ್ರಥಿತಾರ್ಥ ಹೇತೂನ್ |
ವಿಚಿತ್ರಮೇಯಾನತುಲ ಪ್ರಭಾವಾನ್
ಪ್ರವರ್ತತಾಂ ಭಾರತ ಭಾಗ್ಯಚಕ್ರಂ || ||೬||

ವಿಧೂಯ ಸಂತಾಪತತಿಂಬುಧಾನಾಂ
ಪ್ರದಾಯ ಮಾಸಾಶನವೇತನಾನಿ |
ನಿಯೋಜ್ಯ ಸಚ್ಛಾಸ್ತ್ರ ವಿಮರ್ಶನೇ ತಾನ್
ಪ್ರವರ್ತತಾಂ..................ಚಕ್ರಂ|| ||೭||

(ಪುಟ 65ಕ್ಕೆ ಮುಂದುವರಿದಿದೆ)

# ಪ್ರೇಮಾಲಿಂಗನ

**ರಾಜೀವ**

ಲಲಿತಾ—ಶಶಿಧರರ ಮದುವೆಯಾಗಿ ಕೆಲವೇ ದಿನಗಳುರುಳಿದ್ದವು. ಶಶಿಧರನಿಗೆ ತನ್ನನ್ನು ಹೆಚ್ಚಾಗಿ ಪ್ರೀತಿಸುವ ವ್ಯಕ್ತಿಯೊಂದು ಬೇಕಾಗಿತ್ತು. ತಂದೆ, ತಾಯಿಯರೂ ಇತರ ಬಂಧುಗಳೂ ಆತನನ್ನು ಪ್ರೀತಿಸುತ್ತಿದ್ದರು, ನಿಜ. ಆದರೆ ಅಂತಹ ಪ್ರೀತಿಗೆ ಮಿಗಿಲಾದದ್ದೊಂದನ್ನು ಇಂದು ಶಶಿಧರ ಬಯಸುತ್ತಿದ್ದ. ಅದೇನೆಂಬುದು ಅವನಿಗೇ ತಿಳಿದಿರಲಿಲ್ಲ. ಪ್ರಣಯ ಕತೆಗಳನ್ನೋದಿ, ಪ್ರೇಮದ ಉತ್ಕಟಾದರ್ಶದ ಹೊನಲಲ್ಲಿ ಹರಿದು ತನ್ನದೇ ಆದ ಒಂದು ಪ್ರೇಮದ ಮಹಲನ್ನು ಕಟ್ಟಿಕೊಂಡಿದ್ದ. ತಾನು ಬಯಸುವ ಪ್ರೀತಿ ದೊರೆತರೆ ಹೆಂಡತಿಯಿಂದಲೇ ದೊರೆಯಬೇಕೆಂದು ಆತನ ಮನಸ್ಸು ಬಿಡಿಸಿ ಹೇಳುತ್ತಿತ್ತು. ಅದಕ್ಕಾಗಿ ಮದುವೆಯಾದ ಶಶಿಧರ. ಹೆಂಡತಿಯಾದವಳು ತನ್ನನ್ನು ಹೇಗೆ ಕಾಣಬಹುದು? ಪರರ ಮನೆಯಲ್ಲಿ ಬೆಳೆದ ಅಪರಿಚಿತ ಹೆಣ್ಣೊಂದು ಒಮ್ಮೆಗೇ ತನ್ನನ್ನು ಅರಿಯ ಬಲ್ಲಳೆ? ತನ್ನ ಹೃದಯದಲ್ಲಿ ನನಗೆ ಸ್ಥಾನ ಕೊಡಬಲ್ಲಳೆ? ಆಕೆಯು ಚಿಕ್ಕಂದಿನಲ್ಲಿ ಯಾರೊಡನೆ ಆಟವಾಡುತ್ತ ಯಾರು ಯಾರನ್ನು ಮನಸ್ಸಿನಲ್ಲಿ ಪ್ರೀತಿಸುತ್ತಿದ್ದಳೋ? ಎಷ್ಟು ಜನ ಗೆಳೆಯರಲ್ಲಿ ಯಾರನ್ನು ಮೆಚ್ಚಿದ್ದಳೋ? ಹಠಾತ್ತನೆ ಯಾವುದೋ ಒಂದು ಪ್ರಾಣಿಯನ್ನು ಇದು ತನ್ನ ಜೀವ ಎಂದು ಪ್ರೀತಿಸು ಎಂದು ಕುತ್ತಿಗೆಗೆ ಕಟ್ಟಿದಂತೆ ಪ್ರೀತಿ ತೋರಿಸುವುದು ಸಾಧ್ಯವೇ?

ಯಾವುದು ಹೇಗಿದ್ದರೂ ಲೋಕ ನಡೆಯುತ್ತಿರುತ್ತದೆ ತಾನೆ? ಅದರಂತೆ ಕೊನೆಗೊಮ್ಮೆ ಶಶಿಧರನಿಗೆ ಲಲಿತಾಳನ್ನು ಪ್ರಥಮ ಬಾರಿಗೆ ಭೇಟಿಯಾಗುವ ಸುಯೋಗ ದೊರಕಿತು. ಲಲಿತಾ ತಾನು ತಿಳಿದಂತೆ ಶಶಿಧರನನ್ನು ಇದಿರುಗೊಂಡಳು. ಅದರಲ್ಲಿ ಹರ್ಷ, ಉತ್ಸಾಹವೇನೂ ಕಾಣಲಿಲ್ಲ. ಮನೆಗೆ ಬಂದ ಅತಿಥಿಯನ್ನು ಕಾಣುವಂತೆ! ಮನೆಯವರೂ ಸತ್ಕರಿಸಿದರು ಶಶಿಧರನಿಗೆ ಸಪ್ಪೆಯೂಟ ಉಂಡಂತೆ ಆಯಿತು. ಆದರೆ ಯಾರಿಗೆ ಹೇಳುವುದು? ಉಪಯೋಗವಾದರೂ ಏನು? ಲಲಿತಾ ಹೊಸದಾಗಿ ಏನನ್ನು ಮಾಡಬೇಕಿತ್ತು. ತನ್ನ ಮನೆಯಲ್ಲೂ ಶಶಿಧರನಿಗೆ ಹೊರಗಿನಿಂದ ಬಂದಾಗ ಇದೇ ಸತ್ಕಾರ ದೊರೆಯುತ್ತಿತ್ತು. ಹಾಗಾದರೆ ಲಲಿತಾಳಿಂದ ಶಶಿಧರ ಏನು ಬಯಸಿದ್ದ? ಒಲವು! ಇದರ ಪ್ರಕಟಣೆಯಾದರೂ ಆಕೆ ಹೇಗೆ ಮಾಡಬೇಕಿತ್ತು. ಇದನ್ನು ಹೇಗೆ ಹೇಳಿಕೊಡುವುದು. ತಾನೇ ಹೇಳಿಕೊಟ್ಟರೆ ತಿರುಗಿ ಅದು ಸಪ್ಪೆಯಾಗುತ್ತದೆ. ಅತ್ತು ಕರೆದು ಔತಣಕ್ಕೆ ಹೇಳಿಸಿಕೊಂಡಂತೆ. ಲಲಿತಾ ಅದನ್ನು ತಿಳಿಯುವ ಬಗೆ ಹೇಗೆ? ಅವರ ಮನೆಯವರೇ ಇದನ್ನೆಲ್ಲಾ ಕಲಿಸಬೇಕಿತ್ತು. ಪತಿಯ ಮನಸ್ಸನ್ನು ಅರಿಯುವುದು ಹೇಗೆ ಅವನು ಹೋದಂತೆ ಬಿಟ್ಟರೆ ಕೊನೆಗೆ ತನಗೆ ದೊರೆಯುವುದು ಸೊನ್ನೆಯೇ ಎಂದು ಲಲಿತಾ ತಿಳಿಯಬೇಡವೆ?

ಆದರ್ಶ ದಂಪತಿಗಳು ಯೂರೋಪು, ಅಮೆರಿಕಾಗಳಲ್ಲಿ ಕಂಡಕೂಡಲೇ ಬಾಚಿತಬ್ಬಿ ಮುತ್ತಿಡುತ್ತಾರೆ. ಬೀದಿಯಾಗಲೀ ಮನೆಯಾಗಲೀ ಪ್ರೇಮಾಲಿಂಗನಕ್ಕೆ ಅಡ್ಡಿ ಬರುವುದಿಲ್ಲ. ಲಲಿತಾ ಹಾಗೇನೂ ಮಾಡಲಿಲ್ಲ. ಇಲ್ಲಿ ಅದೆಲ್ಲಾ ಕೂಡದೋ? ನೂರೆಂಟು ಪ್ರಶ್ನೆಗಳನ್ನು ಕೇಳಿ ಕಾಡಿಸಲಿಲ್ಲ. ತನ್ನೊಡನೆ ಹೆಚ್ಚು ಕಾಲ ಕಳೆಯುವ ಬಯಕೆಯನ್ನೆ ಆಕೆ ವ್ಯಕ್ತಪಡಿಸಲಿಲ್ಲ. ಇದಕ್ಕಿಂತ ಹೆಚ್ಚಿನ ಆದರ ಶಶಿಧರನಿಗೆ ತನ್ನ ಕಾಲೇಜಿನ ಗೆಳತಿಯ ಮನೆಯಲ್ಲಿ ದೊರೆತಿತ್ತು. ಒಮ್ಮೆ ಆ ಗೆಳತಿಗೆ ಜ್ವರಬಂದಿದ್ದಾಗ ಶಶಿಧರ ನೋಡಲು ಹೋಗಿದ್ದ. ಆಕೆ ಇವನನ್ನು ಕಂಡಕೂಡಲೇ ಪ್ರಫುಲ್ಲಮುಖಿಯಾಗಿದ್ದಳು. ಕೆನ್ನೆಗಳು ಕೆಂಪೇರಿದ್ದುವು. ತನ್ನನ್ನು ಆ ಸ್ಥಿತಿಯಲ್ಲಿ ಗೆಳೆಯ ನೋಡುವಂತಾಯಿತಲ್ಲಾ ಎಂದೇ ಆ ಹೆಣ್ಣಿನ ನಾಚಿಕೆ. ಥಟ್ಟನೆ ಎದ್ದು ಗೋಡೆಗೊರಗಿ ಕುಳಿತಿದ್ದಳು. ಕುರ್ಚಿಯ ಮೇಲೆ ಕೂಡಲು ಬಲಾತ್ಕರಿಸಿ ಕೂಡಿಸಿದ್ದಳು. ಶಶಿಧರ

ಅಲ್ಲೇ ಚಾಪೆಯಮೇಲೆ ಕೂಡಲು ಹೋಗಿದ್ದ. ಗೆಳತಿಯ ತಾಯಿ ಅವಸರವಸರವಾಗಿ ಕಾಫಿ ತಯಾರಿಸಿದ್ದಳು. ಸುಮ್ಮನೆ ಮೂಕನಾಗಿ ಬಿಳುಪೇರಿದ್ದ ಗೆಳತಿಯ ಮುಖವನ್ನೇ ನೋಡುತ್ತ ಕುಳಿತ ಶಶಿಧರನ ದೃಷ್ಟಿಯನ್ನು ಎದುರಿಸಲಾರದೆ ಆಕೆ ತಾನೇ ಹುಡುಕಿ ಹುಡುಕಿ ಮಾತು ತೆಗೆದು ಆಡುತ್ತಿದ್ದಳು. ಸುಮ್ಮನೆ ಆಯಾಸವಾದೀತು, ಮಲಗು ಎಂದು ಎಷ್ಟು ಹೇಳಿದರೂ ಆಕೆ ಕೇಳಲಿಲ್ಲ. ಅವಳ ತಾಯಿ ಕಾಫಿ ಕೊಡಲು ಬಂದಾಗ ಹಠಮಾಡಿ ತಾನೇ ಕಪ್ಪನ್ನು ತೆಗೆದುಕ್ಕೊಂಡು ನಡುಗುತ ತನ್ನ ಕೈಯಿಂದಲೇ ಅದನ್ನು ಕೊಟ್ಟಿದ್ದಳು. ಹಾಗೆ ನಡುಗುತ್ತಿದ್ದ ಅವಳ ಕೈ ಶಶಿಧರನಿಗೆ ಸೋಕಿದಾಗ ಅವಳ ಜ್ವರ ಬಂದ ತಪ್ತಮುಖ ಬೆವರಿಟ್ಟಿತ್ತು. ಅವಳಿಗಾದ ಅವರ್ಣನೀಯ ಆನಂದ ಆ ಕೈ ಬೆರಳುಗಳ ಮೂಲಕ ಶಶಿಧರನ ಎದೆಗೆ ಪ್ರವೇಶಿಸಿತ್ತು. ಅನಂತರ ಪ್ರತಿದಿನ ಕಾಲೇಜಿನ ಪಾಠಗಳು ಮುಗಿದ ಕೂಡಲೇ ಶಶಿಧರ ಅವಳ ಮನೆಗೆ ಹೋಗಿ ಅಂದಿನ ಪಾಠಪ್ರವಚನಗಳ ವರದಿಯೊಪ್ಪಿಸಿ ನಂತರ ಮನೆ ಸೇರುತ್ತಿದ್ದ. ಆಕೆ ಗುಣಮುಖಳಾಗಿ ಕಾಲೇಜಿಗೆ ಬರತೊಡಗಿದಮೇಲೆ ಆಕಸ್ಮಾತ್ ಒಂದು ದಿನ ಆಕೆ ಬರದೇ ನಿಂತರೂ ಶಶಿಧರನಿಗೆ ಅಂದು ಪಾಠಗಳು ತಲೆಗೆ ಹಿಡಿಯುತ್ತಿರಲಿಲ್ಲ. ಒಂದು ಘಂಟೆಕಾಲ ಆಕೆ ತಡವಾಗಿ ಬಂದರೂ ಶಶಿಧರ ಚಡಪಡಿಸುತ್ತಿದ್ದ. ಎಷ್ಟೋಬಾರಿ ಆಕೆ ಬರದೇಇದ್ದ ಕ್ಲಾಸಿಗೆ ಶಶಿಧರನೂ ಚಕ್ಕರ್‌ಹೊಡೆದು ಅಲೆಯುತ್ತಿದ್ದುದೂ ಉಂಟು. ಕ್ಲಾಸಿನಲ್ಲಾದರೂ ಏನಾದರೂ ನಗುವ ವಿಷಯ ಬಂದಾಗ ಇಬ್ಬರ ದೃಷ್ಟಿ ಬೆರೆಯದೇ ತಪ್ಪುತ್ತಿರಲಿಲ್ಲ. ಅದೇನು ಸ್ನೇಹ !

ಗೆಳತಿಯ ಸ್ನೇಹ ಇಷ್ಟಕ್ಕೆ ಕೊನೆಗಂಡಿತ್ತು. ಇದರಿಂದ ಕೆರಳಿದ ಮನಸ್ಸು, ಸ್ನೇಹದ ಮುಂದಿನ ಭಾಗವನ್ನು ಬಯಸಿತು. ಒಂದು ಹೆಣ್ಣಿನ ಪ್ರೇಮದ ನೋಟವೋ, ಕಾಮದ ನೋಟವೋ ಅದರಿಂದ ಉತ್ತೇಜನಗೊಂಡ ದೇಹ ಸಮಾಜಕ್ಕೆ ಹೆದರಿ ಆ ಹೆಣ್ಣನ್ನು ಹಾಗೆಯೇ ಬಿಟ್ಟಿತ್ತು. ಈ ಕಟ್ಟು ಕಟ್ಟಲೆಗೂ ವಿಧಿನಿಯಮಗಳೂ ಇರದಿದ್ದರೆ ಅವೆರಡೂ ದೇಹಗಳು ಎಂದೋ ಬೆರತು ಹೋಗುತ್ತಿದ್ದುವು. ಹಾಗೂ ಒಮ್ಮೆ ತೀರ ಹತ್ತಿರ ಹತ್ತಿರ ನಡೆದು ಹೋಗುತ್ತಾ ಆಕೆಯ ಜಡೆಯನ್ನು ಹಿಡಿದು ಜಗ್ಗಿದ್ದ ಶಶಿಧರ. ಆಕೆ ಥಟ್ಟನೆ ತಿರುಗಿ ನೋಡಿದಾಗ "ನೋಡು ಆ ಕಿಟಕಿಯ ಬಾಗಿಲು ಒಡೆಯುತ್ತಿತ್ತು ನೀನಿತ್ತ ತಿರುಗದಿದ್ದರೆ ಎಂದು ಹೇಳಿ ನಂಬಿಸಿದ್ದ. ಮತ್ತೊಮ್ಮೆ ಪ್ರವಾಸ ಹೊರಟು ಸಮುದ್ರ ಸ್ನಾನ ಮಾಡಿದಾಗ ಒದ್ದೆ ಸೀರೆಯನ್ನು ಬದಲಿಸುವ ಸಂದರ್ಭ ಬಂದಾಗ್ಗೆ ಶಶಿಧರನ ಕಣ್ಣಿನಲ್ಲಿ ಹಾಯ್ದ ಕಾಮದ ಬೆಳಕನ್ನು ಗೆಳತಿ ಗುರುತಿಸಿದ್ದಳು. ಅಂದಿನಿಂದ ಆಕೆ ಶಶಿಧರನ ಜತೆ ಸರಳವಾಗಿ ನಡೆದು ಕೊಳ್ಳಲು ಹೆದರತೊಡಗಿದಳು. ಇದು ಶಶಿಧರನಿಗೂ ತಿಳಿಯಿತು. ಅವಳ ಹೆದರಿಕೆ ಸರಿಯೆಂದೂ ಅರ್ಥವಾಯಿತು. ತಾನೇ ಓದಿದ್ದ ಅನೇಕ ಕತೆಗಳಲ್ಲಿ ಒಂದು ಕ್ಷಣದ ದುಡುಕಿನಿಂದ ಗೆಳೆಯ ಗೆಳತಿಯರಿಗೆ ದೇಹದ ಬಯಕೆ ತೀರಿದ್ದರೂ ನಂತರ ಅದರ ಫಲವಾಗಿ ತೊಂದರೆ ಸಹಿಸಬೇಕಾಗಿ ಬಂದವಳು ಹೆಣ್ಣಾಗಿದ್ದಳು. ಆಕೆ ಗರ್ಭ ಧರಿಸಿ ಅಸಹಾಯಕಳಾಗಿ ಕೈಹಿಡಿದು ಕಾಪಾಡಲು ಗಂಡಿನ ಮನೆ ಹೊಕ್ಕಾಗ ಆತ ಮೆಲ್ಲಗೆ ನೆನಪುಗಳನ್ನೊಡ್ಡಿ ತಲೆತಪ್ಪಿಸಿಕೊಂಡಿದ್ದ. ಹೆಣ್ಣು ಕಣ್ಣೀರಿಟ್ಟು ಅವಮಾನವನ್ನು ದುಃಖದಂತೆ ನುಂಗಿ ಬಾಳುತ್ತಿತ್ತು, ಸಾಯುತ್ತಿತ್ತು. ಅದನ್ನೆಲ್ಲಾ ತಿಳಿದೂ ತಿಳಿದೂ ತಮ್ಮಿಬ್ಬರ ನಡುವೆ ಸಂಬಂಧ ಬೆಳೆಯುವುದು ಅಸಾಧ್ಯವೆಂದು ತಿಳಿದೂ ಕೇವಲ ಹೆಣ್ಣಿನ ಬಯಕೆಗಾಗಿ ಗೆಳತಿಯೊಬ್ಬಳನ್ನು ಬಲಿಕೊಡುವುದು ಶಶಿಧರನಿಗೆ ಸಾಧ್ಯವಾಗಿರಲಿಲ್ಲ. ಅಂತೆಯೇ ಆ ಗೆಳತಿ ಗೆಳತಿಯಾಗಿಯೇ ಉಳಿದಿದ್ದಳಲ್ಲದೆ ಶಶಿಧರ ತನ್ನ ಮನಸ್ಸಿಗೇ ಒಂದು ಕಟ್ಟುಹಾಕಲೆಂದು ಗೆಳತಿಯನ್ನು ತಂಗಿಯೆಂದು ಸಂಬೋಧಿಸತೊಡಗಿದ್ದ. ಇದರಿಂದ ಸಹಪಾಠಿಯಾಗಿದ್ದ ಹೆಣ್ಣೊಂದು ತೀರ ಹತ್ತಿರದವಳೆನಿಸಿದರೂ ಅವರೊಡನೆ ಸಲುಗೆ ಮೀರಿ ನಡೆಯಲು ಸಾಧ್ಯವಾಗದೇ ಉಳಿಯಿತು.

ಇದಿಷ್ಟೂ ಪತ್ರವನ್ನೋದಿದ ಲಲಿತಾ ಎಂದಿಗೆ ಶಶಿಧರನನ್ನು ಮತ್ತೊಮ್ಮೆ ಕಾಣುವೆನೆಂದು ಕಾಯುತ್ತಿದ್ದಳು. ಆದಿನವೂ ಬಂದಿತು. ತಾನು ಕೈಯಾರೆ ಕೊಟ್ಟ ಬೆಳಗಿನ ಉಪಹಾರವನ್ನೂ ತಿಂದು ಶಶಿಧರ ಹೊರಗೆ ಹೊರಟಾಗ ಲಲಿತಾ ಕೈ ಹಿಡಿದು ಕೂರಿಸಿದಳು. "ಏನು ? " ಶಶಿಧರ ಕೇಳಿದ. "ಈಗ ಎಲ್ಲಿಗೂ ಹೋಗಕೂಡದು" ಲಲಿತಾ ಹೇಳಿದಳು. "ನಿನ್ನ ಗೊಂಬೆ ಮುಖ ನೋಡುತ್ತ ಕುಳಿತಿರಬೇಕೇ" "ಹೂ! ಹೌದು ನನಗೆ ಮಾತಾಡುವುದು ಬೇಕಾ

ದಪ್ಪಿದೆ" "ಅದೇನು ವಿಷಯ" "ಎಲ್ಲಾ ನಿಮ್ಮ ವಿಷಯವೇ" "ನನ್ನದೇ" "ಹೂ. ಮತ್ತೆ ಒಳ್ಳೆ ಬಸವನ ಹಾಗೆ ಹಾಕಿದ್ದನ್ನು ಮೇಯ್ದು ಹೊರಡುತ್ತೀರಲ್ಲಾ. ಈ ಪ್ರಾಣಿಯ ಯೋಗಕ್ಷೇಮ, ವಿಚಾರಿಸಬಾರದೇ? ಯಾವಳೋ ಬೀದಿಯ ಹೆಣ್ಣು ಜ್ವರದಲ್ಲಿ ಬಿದ್ದರೆ ಓಡಿಹೋಗುತ್ತಿದ್ದೆ ಎಂದು ಬರೆದವರು ಜ್ವರವಿಲ್ಲದಿದ್ದರೂ ನಿಮಗಾಗಿ ಪರಿತಪಿಸುತ್ತಿರುವ ಈ ವಿರಹ ಜ್ವರತಪ್ತೆಯಾದ ಬಾಳಗೆಳತಿಗೆ ಒಂದು ಮಾತು ಬೇಡವೆ?" "ತಪ್ಪಿದೆ, ಚಿನ್ನಾ ಎಲ್ಲಿ ಮುಖತಿರುಗಿಸು, ಓ ನಿನ್ನ ಕೆನ್ನೆಯೂ ಕೆಂಪಾಗಿದೆ ಕೆಮ್ಮಣ್ಣಿನದೇನು?" "ಹೂಂ ಹೌದು ನಾವೆಲ್ಲಾ ಕರಿಯ ಮೋರೆಗಳು ನಿಮ್ಮ ಗೆಳತಿ ಅಪ್ಸರೆ, ಶೋಭೆರೋಗದ ಹೆಣ್ಣಿನ ಮುಖ ಬೆಳ್ಳಗಲ್ಲದೆ ಇನ್ಹೇಗೆ ಇದ್ದೀತು?" "ಛ ಛ! ನೋಡಿದೆಯಾ ನಿನ್ನ ಮುದ್ದು ಮುಖವೆಲ್ಲಿ ಅವಳ ಗಂಟು ಮುಖವೆಲ್ಲಿ" ಹೀಗೆ ಸಾಗಿತ್ತು ಮಾತು. ಆಕೆ ರಂಗುಹಚ್ಚಿ ತುಟಿ ಕೆಂಪುಮಾಡಿಕೊಳ್ಳುತ್ತಾಳೆ. ನೀನು? "ಮಾಡ ತ್ತೀನೆ ತಡೆಯಿರಿ. ನಿಮ್ಮ ಕೆನ್ನೆಯನ್ನೂ ಕೆಂಪೇರಿಸುತ್ತೇನೆ" ತಾಂಬೂಲ ಬೇಡವೋ "ಇಲ್ಲಮ್ಮ ನಾನು ಉಪಯೋಗಿಸುವುದಿಲ್ಲ" "ನಾನು ಕೊಟ್ಟರೆ" "ಊಹುಂ" "ಬಾಯಿಗೆ ಇಡುತ್ತೇನೆ," "ಎಲ್ಲಿ ನೋಡೋಣ?" "ಬೇಡವೆಂದಿರಿ ಮತ್ತೆ" "ಈಗಲೂ ಅಷ್ಟೆ ನೋಡಿ" ಚಿನ್ನದ ತಗಡಿನಂತಿದೆ ಈ ಎಲೆ, ಗಟ್ಟಿಬೆಳ್ಳಿಯೇ ಈ ಸುಣ್ಣ. ಲವಂಗ ಚುಮು ಚುಮು ಉರಿಯುತ್ತ ಲಾಲಾರಸ ಹೊರಬರುವ ಖಾರ, ಸಕ್ಕರೆ ಡೈಮಂಡ್ ಸಿಹಿ. ನನ್ನ ನಾಲಿಗೆಯಂತೂ ಗುಲಾಬಿದಳ. ನೋಡಿ ನನ್ನಾಣೆ ಈ ಒಂದು ಎಲೆ ಬಾಯಿಗಿಡುತ್ತೇನೆ. ನನಗಾಗಿ ಹಾಂ ಕೊಳ್ಳಿ. ನಿಮಗೆ ನಮಸ್ಕಾರ ಮಾಡುತ್ತೇನೆ." "ಊಹುಂ ಬೇಡ" "ಆಯಾಸವಾಗಿದೆಯೇ ನಾನೇ ಬಾಯಿಗಿಡುತ್ತೇನೆ ಮೇಲೆ ಮುತ್ತಿಟ್ಟು ಬಾಯಿ ಮುದ್ರೆ ಹಾಕುತ್ತೇನೆ." ಲಲಿತಾ ಬರಸೆಳೆದು ಶಶಿಧರನನ್ನು ಆಲಿಂಗಿಸಿ ಬಾಯಿಗೆ ಮಡಿಚಿದ ವೀಳ್ಯವಿಟ್ಟು ಹೇಳಿದಂತೆ ಭಂಡಾರದ ಬಾಗಿಲಿಗೆ ತುಟಿಗಳ ಮುದ್ರೆಯೊತ್ತಿದಳು." ಶಶಿಧರ ನಸುನಗುತ್ತಾ ಲಲಿತಾಳ ಕುರುಳು ನೇವರಿಸುತ್ತಾ ಹಾಸಿಗೆಯಲ್ಲಿ ಹಾಗೇ ಒರಗಿಕೊಂಡನು.

—o—

(62 ನೆಯ ಪುಟದಿಂದ ಮುಂದುವರಿದುದು)

ಪರಾಯನೇ ರಾಮಪನೇ ಪ್ರಪತ್ಯಾ
ಪರಾಯನಾದೀನ್ವ್ಯಪಹತ್ಯ ದೋಷಾನ್ ।
ಪರಾಯನತ್ವೋಜ್ವಲ ಸತ್ವಶುಧ್ಯಾ
ಪ್ರವರ್ತತಾಂ..................ಚಕ್ರಂ ॥ ॥೮॥

ಚಲತ್ರಿವರ್ಣ ಧ್ವಜರತ್ನ ಭೂಷಂ
ಚತುರ್ಮುಖ ಪ್ರೋಜ್ವಲ ಮುದ್ರಯೇತಂ ।
ಸೃಜತ್ಸುಯೋಗಂ ವಿತರತ್ಸುಭದ್ರಂ
ಪ್ರವರ್ತತಾಂ..................ಚಕ್ರಂ ॥ ॥೯॥

ಶ್ರೀವಾಸುದೇವಾರ್ಯ ವಿತೀರ್ಣಕಾಯಂ
ಸ್ಫುರತ್ಸಮುಸ್ಯಾ ಪರಿಪೂರ್ತ್ಯುಪಾಯಂ ।
ಗೇಯಂ ಸುಧೀಸಂತತ ಭೀತ್ಯಪಾಷಂ
ಪ್ರವರ್ತತಾಂ..................ಚಕ್ರಂ ॥ ॥೧೦॥

ಆ. ವಾಸುದೇವಾಚಾರ್ಯಾಃ
ನ್ಯಾಯಪ್ರಾಧ್ಯಾಪಕಾಃ

# ಮೈಸೂರು ಉಪಕರಣಗಳ ಕಾರ್ಖಾನೆ

## ಹಾಸನ

(ಮೈಸೂರು ಸರಕಾರದ ಉದ್ದಿಮೆ)



ಚೆನ್ನಾಗಿ ಕಾವುಕೊಟ್ಟು ಟೆಂಪರುಗೊಳಿಸಿದ ಶ್ರೇಷ್ಠ ಕಾರ್ಬನ್ ಉಕ್ಕಿನಿಂದ ತಯಾರಿಸಿದ ಶ್ರೇಷ್ಠದರ್ಜೆಯ ಉಪಕರಣಗಳು ಸಾಮಾನುಗಳನ್ನು ತೆಗೆದುಕೊಳ್ಳುವ ಮೊದಲೆ ಒರೆಗೆ ಹಚ್ಚಬಹುದು. ಈ ಉಪಕರಣಗಳು ಅತ್ಯಂತ ಗಟ್ಟಿಯಾಗಿವೆ, ದೀರ್ಘಕಾಲ ಬಾಳಿಕೆ ಬರುತ್ತವೆ. ಇದರಲ್ಲಿ ಹಣ ತೊಡಗಿಸುವುದು ಒಂದು ಸುದೈವ.

ಕಾರಖಾನೆ ಅಥವಾ ಜೋನಲ್ ಏಜೆಂಟರೊಡನೆ ಪತ್ರವ್ಯವಹಾರ ಮಾಡಬಹುದು.

# ಆದರ್ಶ ಜೈನ ಮಹಿಳೆಯರು

ಶ್ರೀಮತಿ ಕಮಲಾ ಹಂಪನಾ ಎಂ.ಎ.

ಮನುಷ್ಯ ಜನ್ಮಕ್ಕೆ ಜೈನಧರ್ಮ ಕೊಟ್ಟಷ್ಟು ಪ್ರಾಶಸ್ತ್ಯ ವಿಶ್ವದಲ್ಲಿ ಮತ್ತಾವ ಧರ್ಮವೂ ಕೊಟ್ಟಿಲ್ಲ. ಮಾನವನ ಮಾತು ಹಾಗಿರಲಿ, ದೇವತೆಗಳೂ ಕೂಡ ಮುಕ್ತರಾಗಬೇಕಾದರೆ ಮಾನವರಾಗಿಯೇ ಹುಟ್ಟ ಬೇಕೆಂದು ಜಿನಧರ್ಮ ಸ್ಪಷ್ಟವಾಗಿ ಸಾರಿದೆ. ಮಾನವ ಮುಕ್ತಿಯ ಮೊದಲ ಮೆಟ್ಟಲೆಂಬುದು ಅವರ ದೃಢವಾದ ನಂಬಿಕೆ ಮತ್ತು ಖಚಿತವಾದ ಹೇಳಿಕೆ. ತೀರ್ಥಂಕರ ಕೂಡ ಚರಮ ದೇಹಧಾರಿಯಾಗಿ ಮನುಷ್ಯ ರೂಪದಲ್ಲಿ ಕಾಣಿಸಿಕೊಳ್ಳುತ್ತಾನೆ. ಹೀಗೆ ಮಾನವಜನ್ಮ ದೊಡ್ಡದೆಂದು ಮೊಟ್ಟಮೊದಲ ಬಾರಿಗೆ ಲೋಕಕ್ಕೆ ಪ್ರಚುರಪಡಿಸಿದ ಈ ಜೈನಧರ್ಮದಲ್ಲಿ ಮಹಿಳೆಯರಿಗೆ ಕೊಟ್ಟಿರುವ ಸ್ಥಾನ-ಮಾನಗಳು ಪರಿಭಾವನಾರ್ಹವಾದ ಗಹನ ವಿಚಾರವಾಗಿದೆ. ಶ್ವೇತಾಂಬರ ಮತ್ತು ದಿಗಂಬರ ಎಂಬ ಎರಡು ಪ್ರಧಾನ ಜೈನಧರ್ಮದ ಶಾಖೆಗಳಿಂದ ಹಲವು ಸ್ತ್ರೀಪಾತ್ರಗಳನ್ನು ಆರಿಸಿಕೊಂಡು ಈ ವಿಷಯವನ್ನು ಮುಂದೆ ನಿರೂಪಿಸಿದೆ.

ಜೈನಧರ್ಮದಲ್ಲಿ ಬಹಳ ಹಿಂದಿನಿಂದಲೂ ಮಹಿಳೆಯರಿಗೆ ವಿಶೇಷವಾದ ಮಹತ್ತ್ವವನ್ನೂ ಹೆಚ್ಚಿನ ಗೌರವವನ್ನೂ ಕೊಟ್ಟಿರುವುದು ಕಂಡುಬರುತ್ತದೆ. ನಿದರ್ಶನಕ್ಕಾಗಿ ಒಂದೆರಡನ್ನು ಉಲ್ಲೇಖಿಸುವುದಾದರೆ ಪ್ರವಾಹ, ಬೆಂಕಿ, ಆಕಸ್ಮಿಕ, ಲೂಟಿ ಮತ್ತು ದರೋಡೆ ಮುಂತಾದ ಸಂದರ್ಭಗಳಲ್ಲಿ ಮೊಟ್ಟಮೊದಲು ಮಹಿಳೆಯರನ್ನು ರಕ್ಷಿಸಬೇಕೆಂದು ಜೈನ ಧಾರ್ಮಿಕ ಗ್ರಂಥಗಳಲ್ಲಿ ಹೇಳಿಕೆಗಳಿವೆ. ಜೈನರು ತೀರ್ಥಂಕರರ ತಂದೆ-ತಾಯಿಗಳಿಗೆ, ಅದರಲ್ಲಿಯೂ ತೀರ್ಥಂಕರರ ತಾಯಂದಿರಿಗೆ ಹೆಚ್ಚಿನ ಗೌರವ ಸಲ್ಲಿಸುತ್ತಿದ್ದರು ಜಿನನ ಜನನಿಯರು ತಮ್ಮ ಚಿಕ್ಕ ಮಕ್ಕಳಾದ ತೀರ್ಥಂಕರರನ್ನು ತೊಡೆಯಮೇಲೆ ಕೂಡಿಸಿಕೊಂಡಿರುವ ಕಲ್ಲಿನ ವಿಗ್ರಹಗಳನ್ನು ಪೂಜಿಸುವುದೂ ಉಂಟು. ಉದಾಹರಣೆಗೆ—ಈಗಲೂ ಅಬು, ಗಿರಿನಾರ, ಪಾಟನ್ ಮುಂತಾದ ಕೆಲವು ಸ್ಥಳಗಳಲ್ಲಿ ಈ ಜಿನ-ಜನನಿಯರ ಮೂರ್ತಿಗಳಿಗೆ ವಿಶೇಷ ಪೂಜೆ ನಡೆಯುತ್ತದೆಂದು ತಿಳಿದು ಬರುತ್ತದೆ.

ಆದಿ ತೀರ್ಥಂಕರನಾದ ಪುರುದೇವನ ತಾಯಿಯಾದ ಮರುದೇವಿಯ ಪಾತ್ರ ಚಿತ್ರಣ, ಜೈನ ಪುರಾಣಗಳಲ್ಲಿ ಚೆನ್ನಾಗಿ ಬಂದಿದೆ. ಪಂಪ ಮಹಾ ಕವಿಯ ಆದಿಪುರಾಣವನ್ನು ಓದಿದವರಿಗೆ ಇದರ ಸ್ವಾರಸ್ಯವನ್ನು ವಿವರಿಸಬೇಕಾಗಿಲ್ಲ. ಪಂಪನ ಆದಿಪುರಾಣದ ಮತ್ತೊಂದು ಪ್ರಸಂಗವನ್ನು ಆರಿಸಿಕೊಂಡು ಅದರಲ್ಲಿ ಮದುವೆಯ ವಿವರದೊಡನೆ ಸಂಸಾರದ ಸ್ವಾರಸ್ಯವನ್ನೂ, ಮಹಿಳೆಯ ಮಹತ್ತ್ವವನ್ನೂ ಹೇಗೆ ಕವಿ ನಿರೂಪಿಸಿದ್ದಾನೆಂಬುದನ್ನು ನೋಡೋಣ

ವಜ್ರಜಂಘ ಮತ್ತು ಶ್ರೀಮತಿಯರಿಗೆ ಮದುವೆ ಮುಗಿದ ಮೇಲೆ ಮಗಳನ್ನು ಮೊದಲ ಸಲ ಅವಳ ಅತ್ತೆಯ ಮನೆಗೆ ಕಳುಹಿಸುವ ಪ್ರಸಂಗವಿದು. ತಮ್ಮ ಅಳಿಯನೊಡನೆ ಶ್ರೀಮತಿಯ ತಂದೆಯಾದ ವಜ್ರದಂತನು ಕೆಲವು ಮಾತುಗಳನ್ನು ಹೇಳುತ್ತಾನೆ. ಅಳಿಯನಿಗೂ ಮತ್ತು ಮಗಳಿಗೂ ಬುದ್ಧಿವಾದ ರೂಪವಾಗಿ ಪ್ರೀತಿಯಿಂದ ನುಡಿದಡವಿ ಹೇಳುವ ಆ ವಿವೇಕದ ಮಾತುಗಳು ಸಾರ್ವಕಾಲಿಕ ಸತ್ಯಸ್ಥಿತಿಯನ್ನು ಸಾರುವ ಸ್ವರೂಪದ್ದಾಗಿದ್ದು ಇಂದಿಗೂ ಮನನೀಯವಾಗಿವೆ. ರಾಜಾಧಿರಾಜನಾದ ವಜ್ರದಂತನು ಅಳಿಯನ ಕಡೆ ಮುಖಮಾಡಿ ಹೀಗೆ ಹೇಳುತ್ತಾನೆ.

ಬಗೆದುಂ ನಿನ್ನನ್ನವಾಯೋನ್ನತಿಯುನಿವಳತಿ ಸ್ನೇಹ
ಸಂಬಂಧಮಂ ನೀಂ
ಬಗೆದುಂ ಸಂದೆಮ್ಮನಣ್ಪಂ ಬಗೆದು ಮರೆಯದೇ
ನಾನುಮೆಂದಾಗಳುಂ ಮೆ-।

ಲ್ಲಗೆ ನೀಂ ಕಲ್ಪಿಪ್ಪುದೆಮ್ಮಂ ನೆನೆದೆರ್ದೆಗಿಡದಂ
ತಾಗೆ ಪಾಲಿಪ್ಪುದಿಂತೀ-
ಮೃಗಶಾಬೇಕ್ಷಾಕ್ಷಿಯಂ ಮನ್ನಿಸುವುದಿನಿತನಾಂ
ಬೇಡಿದೆಂ ವಜ್ರಜಂಘಾ ||

"ಎಲೈ ಅಳಿಯನಾದ ವಜ್ರಜಂಘನೇ. ಈ ನಮ್ಮ ಮಗಳಾದಂತಹ ಶ್ರೀಮತಿಯು ಎಂದಾದರೂ ಏನಾದರೂ ನೀನು ಆಡಿದ ಮಾತಿಗೆ ಪ್ರತಿಯಾಗಿ ಉತ್ತರಿಸಿದ್ದೇ ಆದರೆ ಆಗ ನೀನು ಕೋಪಿಸಿಕೊಳ್ಳಬೇಡ ನಿನ್ನ ವಂಶದ ಹಿರಿಮೆಯನ್ನೂ, ಇವಳು ನಿನ್ನಲ್ಲಿ ಇಟ್ಟಿರುವ ಅತಿಯಾದ ಸ್ನೇಹ ಸಂಬಂಧವನ್ನೂ, ನಮ್ಮ ನಿಮ್ಮ ಸುಪ್ರಸಿದ್ಧವಾದ ಈ ನೆಂಟಸ್ಥಿಕೆಯನ್ನೂ ನೆನಪಿಗೆ ತಂದುಕೊಂಡು, ಅವಳಿಗೆ ಒಳ್ಳೆಯ ಮಾತುಗಳಿಂದ ತಿಳಿಯ ಹೇಳು. ಅವಳು ಎಂದಿಗೂ ನಮ್ಮನ್ನು ನೆನಸಿಕೊಂಡು ನಮ್ಮ ಅಗಲಿಕೆಯಿಂದಾಗಿ ಎದೆಗೆಡದಂತೆ ನೋಡಿಕೊಂಡು ಕಾಪಾಡು. ಈ ಹರಿಣಾಕ್ಷಿಯನ್ನು ಒಂದು ವೇಳೆ ತಪ್ಪಾಗಿ ನಡೆದುಕೊಂಡರೂ ನೀನು ಮನ್ನಿಸು; ಇಷ್ಟನ್ನು ಮಾತ್ರ ನಿನ್ನಲ್ಲಿ ಬೇಡಿಕೊಳ್ಳುತ್ತೇನೆ."

ಈ ಮಾತುಗಳು ತುಂಬಾ ಅರ್ಥಗರ್ಭಿತವಾಗಿವೆ. ಅಳಿಯನನ್ನು ಅವನಿಗಿಂತಲೂ ಹಿರಿಯನಾದ ಮಾವ ಪ್ರಾರ್ಥಿಸುತ್ತಿರುವ ಪ್ರಸಂಗವಿದು. ಆದರೆ ಪ್ರಾರ್ಥನೆ ತನಗಾಗಿ ಅಲ್ಲ, ತನ್ನ ಮಗಳಿಗಾಗಿ. ಅಳಿಯನಿಗೆ ಅನೇಕ ಉಡುಗೆ-ತೊಡಿಗೆಗಳನ್ನೂ, ಆಳು-ಕಾಳುಗಳನ್ನೂ, ಆನೆ, ಕುದುರೆ, ವಾಹನಗಳನ್ನೂ ಮತ್ತು ಇತರ ಅನೇಕ ಬೆಲೆ ಬಾಳುವ ಸಾರವತ್ತಾದ ವಸ್ತು-ಒಡವೆಗಳನ್ನು ಕೊಟ್ಟಿದ್ದಾನೆ. ಯಾವುದರಲ್ಲೂ ಎಳ್ಳನಿತೂ ಕಡಿಮೆ ಮಾಡಿಲ್ಲ. ನಯ, ವಿನಯ, ಭಯ, ಭಕ್ತಿ ಸಂಪನ್ನನಾದ ಒಳ್ಳೆಯ ಅಳಿಯ ದೊರಕಿರುವನೆಂಬ ತುಂಬು ನಂಬಿಕೆ ಇದೆ. ಆದರೆ ಒಬ್ಬ ಮಗಳ ತಂದೆಯಾಗಿ ಹೇಗೆ ನಡೆದುಕೊಳ್ಳಬೇಕೆಂಬುದು ಆತನಿಗೆ ಗೊತ್ತು. ಅದು ವರೆಗೂ ತಮ್ಮ ಮನೆಯಲ್ಲಿ, ತೌರುಮನೆಯಲ್ಲಿ ಶ್ರೀಮತಿಯನ್ನು ಯಾವುದಕ್ಕೂ ಕೊರತೆಯಾಗದಂತೆ ಅಕ್ಕರೆಯಿಂದ ಸಾಕಿ ಬೆಳೆಸಿದ್ದಾರೆ. ಹೀಗೆ ಆನಂದದ ಬಳ್ಳಿಯಾಗಿ, ಆನಂದದ ಅಂಕುರವಾಗಿ ಬೆಳೆಸಿದ ಮಗಳನ್ನು ಮತ್ತೊಬ್ಬರ ಮನೆಯ ಮಂಗಳಮೂರ್ತಿಯಾಗಿ ಬೆಳಗಲು ಕಳುಹಿಸಿಕೊಡುತ್ತಿದ್ದಾರೆ. ಇನ್ನು ಆಕೆ ಪೂರ್ಣವಾಗಿ ಹೆರವರ ಸೊತ್ತು; ಅಳಿಯನ ಆಸ್ತಿ. ಮಗಳನ್ನು ಗಂಡನ ಮನೆಗೆ ಕಳುಹಿಸಿಕೊಡುವುದು ಹೆತ್ತು ಹೊತ್ತು ಸಾಕಿ ಸಲಹಿ ಆಡಿ ನೋಡಿ ಮುದ್ದಾಡಿ ಬೆಳೆಸಿದ ತಂದೆ-ತಾಯಿಗಳಿಗೆ ತುಂಬ ಕಷ್ಟ. ಕಳುಹಿಸಿಕೊಡಲು ಆರರು, ಬಿಡಲೂ ಆರರು. ಆ ಮಗಳಿಗೂ ಅಷ್ಟೆ; ಅವಳು ಹೋಗಲೂ ಆರಳು, ಇರಲೂ ಆರಳು ಅಂಥ ಇಕ್ಕಟ್ಟಿನ ಪ್ರಸಂಗವದು. ಅವರೆಲ್ಲ ಒಟ್ಟಿಗೆ ಇದ್ದಾಗ ಎಷ್ಟೆಷ್ಟು ಆಳವಾಗಿ ಮನೆಯಲ್ಲಿ ತಂದೆ-ತಾಯಿ-ಮಗಳಿಗೆ ಮಮತೆ ಬೆಳೆದು ಬೇರು ಬಿಟ್ಟಿತ್ತೋ ಈಗ ಅದು ಅಗಲಿಕೆಯಿಂದಾಗಿ ಅಷ್ಟಷ್ಟೂ ಶೋಕವಾಗಿ ದುಃಖವಾಗಿ ಪರಿಣಮಿಸಿದೆ.

ಇನ್ನು ಮುಂದೆ ಅಳಿಯನೇ ತಮ್ಮ ಮಗಳಾದ ಶ್ರೀಮತಿಯ ಭವಿಷ್ಯ, ಸರ್ವಸ್ವ. ಅವಳ ಸುಖ, ಇಲ್ಲವೆ ದುಃಖ ಅವನ ಕೈಯಲ್ಲಿದೆ. ಆತ ಅವಳ ಭರ್ತಾರನೂ ಹೌದು, ಕರ್ತಾರನೂ ಹೌದು. ಗುರಿ ದಾರಿ ಮಾರ್ಗದರ್ಶಕ ಎಲ್ಲ ಆತನೇ. ಅವಳ ಬಾಳು ಅವನ ಇಚ್ಛೆ ಆದುದರಿಂದ ಇದನ್ನೆಲ್ಲಾ ಅರಿತ ವಜ್ರದಂತ ವಜ್ರಜಂಘನನ್ನು ಕುರಿತು ವಿನಯಪೂರ್ವಕ ನಾಲ್ಕು ಮಾತುಗಳನ್ನು ಹೇಳಿದ್ದಾನೆ— ಆಡಿಲ್ಲ, ಬೇಡಿದ್ದಾನೆ. ಆ ನುಡಿಗಳಲ್ಲಿ ಧಾರ್ಷ್ಟ್ಯದ ಅಧಿಕಾರದ ದರ್ಪದ ಧ್ವನಿಯಿಲ್ಲ; ದೈನ್ಯದ ಯಾಚನೆಯ ಆತ್ಮೀಯತೆಯಿದೆ. ತನ್ನ ಮಗಳು ತಪ್ಪಾಗಿ ನಡೆದುಕೊಳ್ಳುವುದಿಲ್ಲವೆಂಬುದು ತಿಳಿದಿದೆ. ಆದರೂ ಒಂದು ವೇಳೆ ತಪ್ಪಾಗಿ ನಡೆದರೆ ? ಏನು ಮಾಡುವುದು ಎಂದು ಯೋಚಿಸುತ್ತಾನೆ. ಅಳಿಯ ಕ್ಷಮಾಗುಣನೆಂದು ತಿಳಿದಿದೆ. ಆದರೂ ಮಗಳನ್ನು ಮನ್ನಿಸಲು ಕೋರುತ್ತಾನೆ. ಹೀಗಾಗಿ ಇದೊಂದು ದೂರ ದೃಷ್ಟಿಯ ವಿವೇಕ ಸಂಪನ್ನನ ಮಾತುಗಳಾಗಿವೆ.

ಅಳಿಯನೊಡನೆ ಮಾತನಾಡುವಾಗ ತಾನು ಒಬ್ಬನೇ ಹೋಗುತ್ತಾನೆ. ಅನಂತರ ತನ್ನ ಮಗಳಿಗೆ ಬುದ್ಧಿವಾದ ಹೇಳುವಾಗ ಹೆಂಡತಿಯಾದ ಲಕ್ಷ್ಮೀಮತಿ ಮಹಾದೇವಿಯನ್ನೂ ಕರೆದುಕೊಂಡು ಶ್ರೀಮತಿಯ ಹತ್ತಿರ ಬರುತ್ತಾನೆ. ಅಂದರೆ ಮಗಳಿಗೆ ಬುದ್ಧಿವಾದ ಹೇಳುವಾಗ ಹೆಣ್ಣುಮಕ್ಕಳ ಮನಸ್ಸನ್ನೂ ರೀತಿ-ನೀತಿಗಳನ್ನೂ ಅರಿತ ಹೆಂಗಸೇ ಇರಬೇಕೆಂಬ ದರ್ಶನ ಧ್ವನಿ ಇಲ್ಲಿ ಹೊಮ್ಮಿ

ತ್ತದೆ. ಪುರುಷ ಸ್ತ್ರೀಯ ಬಗ್ಗೆ ಹೇಗೆ ನಡೆದುಕೊಳ್ಳಬೇಕು, ಹೇಗೆ ನಡೆದುಕೊಳ್ಳಬಾರದು ಎಂಬುದು ಅವನಿಗೆ ಚೆನ್ನಾಗಿ ಗೊತ್ತು. ಆದುದರಿಂದ ಅಳಿಯನೊಡನೆ ಮಾತನಾಡುವಾಗ ತಾನೊಬ್ಬನೇ ಸಾಕೆಂದು ಹೋಗಿದ್ದ. ಈಗ ಹಾಗಲ್ಲ. ತನ್ನ ಮಡದಿಯ ನೆರವೂ ಬೇಕು. ಆತ್ಮೀಯಳಾದ ಆತ್ಮಜೆ ಶ್ರೀಮತಿಯ ಮುಖವನ್ನು ಪ್ರೀತಿ ತುಂಬಿದ ನೋಟದಿಂದ ನೋಡುತ್ತಾ ತಂದೆ-ತಾಯಿಗಳು ಹೀಗೆ ಹೇಳುತ್ತಾರೆ:

ಮನಮಿರೆದಂಜಿ ಬೆಚ್ಚಿ ಬೆಸಕಯ್ ನಿಜನಲ್ಲ ಭನೇನನೆಂದೊಡಂ
ಕಿನಿಸದಿರೋ ದಿದಗ್ರಮಹಿಷೀಪದದಲ್ಲಿ ಪಪಸ್ಥೆಯಾಗು ನಂ |
ದನರನಗಣ್ಯ ಪುಣ್ಯಧನರಂ ಪಡೆಯೆಂದನುರ್ದಪ್ಪಿಕೊಂಡು ತ
ತ್ತನುಜೆಯುಗಲ್ಕೆಯೊಳ್ ನೆಗಪಿದರ್ ಭಸಮಲ್ಲದ ಬಾಷ್ಪವಾರಿಯಂ ||

"ಎಲೈ ಮಗಳೆ. ನೀನು ನಿನ್ನ ನಲ್ಲನ ಮನಸ್ಸು ಚೆನ್ನಾಗಿ ತಿಳಿದು ಅದರಂತೆ ತಗ್ಗಿ ಬಗ್ಗಿ ಬಾಳು ; ಭಯ-ಭಕ್ತಿಗಳಿಂದ ಅವನ ಅಪ್ಪಣೆ ಪಾಲಿಸು; ನಿನ್ನ ಒಡೆಯನಾದ ಆತ ಏನೇ ಅಂದರೂ ಸಹಿಸು, ಸಂತೋಷಿಸು, ಕೋಪಿಸದಿರು, ಸಿಡುಕದಿರು, ದುಡುಕದಿರು. ಅವನ ಪಟ್ಟದ ರಾಣಿಯ ಪದವಿಯಲ್ಲಿ ಪ್ರತಿಷ್ಠಿತಳಾಗು. ಅಗಣ್ಯವಾದ ಪುಣ್ಯಧನರಾದ ಮಕ್ಕಳನ್ನು ಪಡೆ ಎಂಬುದಾಗಿ ತಿಳಿಸಿ ಅವಳನ್ನು ಅಕ್ಕರೆಯ ಆಧಿಕ್ಯದಿಂದ ಆಲಿಂಗಿಸಿಕೊಂಡರು. ತಮ್ಮ ಮುದ್ದು ಮಗಳ ಅಗಲಿಕೆಯಲ್ಲಿ ಒಂದೇ ಸಮನೆ ಹತೋಟಿ ಮೀರಿ ಸುರಿವ ಕಣ್ಣೀರನ್ನು ಸುರಿಸಿದರು."

ಮಗಳು ತನ್ನ ತಂದೆ-ತಾಯಿ, ಬಂಧು ಬಳಗ ಸಖಿಯರನ್ನೆಲ್ಲ ತೊರೆದು ಪತಿಗೃಹಕ್ಕೆ ತೆರಳುವ ಸಂದರ್ಭದಲ್ಲಿ ಅವಳಿಗೆ ಹೇಳಬೇಕಾದ ಹಿತ ವಚನವನ್ನು ಹೇಳಿದ್ದಾರೆ. ಅದು ಅತಿಯಾಗದೆ ಹಿತವಾಗಿ, ಮಿತವಾಗಿ ಹದವಾಗಿದೆ. ಲೋಕದ ಎಲ್ಲ ತಂದೆ ತಾಯಿಗಳೂ ಹೀಗಿಯೇ ತಾನೆ !

ಕ್ರಿ.ಪೂ ಆರನೆಯ ಶತಮಾನದಲ್ಲಿ ಬಾಳಿದ ಅಂತಿಮ ತೀರ್ಥಂಕರನಾದ ಮಹಾವೀರನು ಕ್ಷತ್ರಿಯ ರಾಣಿಯಾದ ತ್ರಿಶಲಾ (ಪ್ರಿಯಕಾರಿಣಿ) ಎನ್ನುವವಳ ಮಗನಾಗಿ ಹುಟ್ಟಿದನು. ಪುರಾಣ ಕತೆಗಳ ಹೇಳಿಕೆಯ ಪ್ರಕಾರ ಮೊಟ್ಟಮೊದಲು ದೇವಾನಂದಾ ಎನ್ನುವ ಬ್ರಾಹ್ಮಣ ಸ್ತ್ರೀಯ ಗರ್ಭ ಕ್ಷತ್ರಿಯ ಸ್ತ್ರೀಯಾದ ತ್ರಿಶಲೆಯ ಗರ್ಭವನ್ನು ಪ್ರವೇಶಿಸಿತೆಂದು ತಿಳಿದುಬರುತ್ತದೆ. ದೇವಾನಂದಾ ಎಂಬಾಕೆಯೇ ಮಹಾವೀರನ ನಿಜವಾದ ತಾಯಿಯಾಗಿದ್ದು ಕ್ಷತ್ರಿಯ ರಾಜಕುಮಾರನನ್ನು ಮದುವೆಯಾಗಿ ಮುಂದೆ ಅವಳೇ ತ್ರಿಶಲಾ ಅಥವಾ ಪ್ರಿಯಕಾರಣಿ ಎನ್ನುವ ಹೆಸರನ್ನು ಪಡೆದಿರಬಹುದು.

ಮಹಾವೀರನ ಸಭೆಗೆ ಒಮ್ಮೆ ಈ ಬ್ರಾಹ್ಮಣ ಸ್ತ್ರೀಯಾದ ದೇವಾನಂದೆ ಬಂದಾಗ ಅವಳ ಮೊಲೆಗಳಿಂದ ಹಾಲು ಹೊನಲಾಗಿ ಹರಿಯಿತೆಂದೂ. ಆಗ ಶಿಷ್ಯರು ಇದೇನೆಂದು ಪ್ರಶ್ನಿಸಲು ಮಹಾವೀರನು ಆಕೆ ತನ್ನ ತಾಯಿ ಎಂದು ತಿಳಿಸಿದನೆಂದೂ ಮತ್ತು ದೇವಾನಂದೆ ಸಂಸಾರದಿಂದ ವಿಮುಕ್ತಳಾಗಬೇಕೆಂದು ತನ್ನ ಬಯಕೆಯನ್ನು ತಿಳಿಸಿ ಮಹಾವೀರ ಸ್ವಾಮಿಯ ಅಪ್ಪಣೆಯ ಮೇರೆಗೆ ಅಜ್ಜಿಕೆ (ಕಂತಿ)ಯಾದಳೆಂದೂ ಶ್ವೇತಾಂಬರ ಧಾರ್ಮಿಕ ಗ್ರಂಥವಾದ ಭಗವತೀ ಸೂತ್ರದ ಹೇಳಿಕೆಯಾಗಿದೆ. ಇದರಿಂದ ಅನ್ಯ ಮತದ ಸ್ತ್ರೀಯರು ಬಹಳ ಹಿಂದಿನಿಂದಲೂ ಜೈನಮತವನ್ನು ಸ್ವಇಚ್ಛೆಯಿಂದ ಸ್ವೀಕರಿಸುತ್ತಿದ್ದರೆಂದು ಗೊತ್ತಾಗುತ್ತದೆ.

ಹಿಂದೆಯೇ ತಿಳಿಸಿದಂತೆ ಜಿನಜನನಿಯರಲ್ಲಿ ಮೊದಲನೆಯ ಸ್ಥಾನವನ್ನು ಪಡೆದ ಆದಿದೇವನ ತಾಯಿಯಾದ ಮರುದೇವಿ ಜೈನರಲ್ಲಿ ಬಹಳ ಪ್ರಸಿದ್ಧಳಾಗಿದ್ದಾಳೆ. ಋಷಭನಾಥನು ಕೇವಲಜ್ಞಾನ ಪಡೆದ ಸುದ್ದಿ ಮರುದೇವಿ ಮತ್ತು ಭರತನಿಗೆ ತಿಳಿಯಲು ತತ್‌ಕ್ಷಣವೇ ತೀರ್ಥಂಕರನ ತಾಯಿಯಾದ ಮರುದೇವಿ ತನ್ನ ಮೊಮ್ಮಗನಾದ ಭರತನೊಡಗೂಡಿ ಅಂಬಾರಿಯಲ್ಲಿ ಕುಳಿತು ರಾಜಪರಿವಾರದೊಡನೆ ಹೊರಟಳು. ದೇವತೆಗಳಿಂದ ನಿರ್ಮಿತವಾದ ಸಮವಸರಣ ಮಂಟಪದಲ್ಲಿ ಹೊರಟು, ದಿವ್ಯಧ್ವನಿಗೈಯುತ್ತಿದ್ದ ತನ್ನ ಮಗನನ್ನು ಸಂದರ್ಶಿಸಿದಳು. ತೀರ್ಥಂಕರನ ವೈಭವವನ್ನು ನೋಡಿದ ಮರುದೇವಿ ಒಡನೆಯೇ ಧ್ಯಾನನಿರತಳಾಗಿ ಕೇವಲಜ್ಞಾನವನ್ನು ಸಂಪಾದಿಸಿದಳು ಮತ್ತು ಆ ಕಾಲದಲ್ಲಿ ಮೋಕ್ಷವನ್ನು ಸಂಪಾದಿಸಿದವರಲ್ಲಿ ಮರುದೇವಿ ಎರಡನೆಯವಳಾದಳು.

ಬ್ರಾಹ್ಮಿ ಮತ್ತು ಸುಂದರಿ ಎಂಬುವರು ಋಷಭನಾಥನ ಇಬ್ಬರು ಹೆಣ್ಣುಮಕ್ಕಳು. ಆದಿದೇವನು ಸಮಸ್ತ ಜ್ಞಾನದ ಹದಿನೆಂಟು ಅಕ್ಷರಗಳನ್ನು ಬ್ರಾಹ್ಮಿಗೂ, ಗಣಿತ ಶಾಸ್ತ್ರವನ್ನು ಸುಂದರಿಗೂ ಉಪದೇಶಿಸಿದನು. ಈ ಬ್ರಾಹ್ಮಿಯಿಂದಲೇ ಬೆಳೆದು ಬಂದ ಭಾರತದ ಅತ್ಯಂತ ಪ್ರಾಚೀನ ಲಿಪಿಗೆ 'ಬ್ರಾಹ್ಮಿ' ಲಿಪಿ ಎಂಬ ಹೆಸರು ಬಂದಿತು ಬ್ರಾಹ್ಮಿಯ ಸಹೋದರನಾದ ಬಾಹುಬಲಿ ದೇವನು ತಪಸ್ಸಿಗೆ ನಿಂತು ಬಹುಕಾಲವಾದರೂ ಕೇವಲ ಜ್ಞಾನಪ್ರಾಪ್ತಿಯಾಗಲಿಲ್ಲ. ಕಾರಣ, ಅವನಲ್ಲಿದ್ದ 'ಅಹಂ' ಇನ್ನೂ ನಾಶವಾಗಿರಲಿಲ್ಲ. ಆಗ ಅವನ ಸೋದರಿಯರಾದ ಬ್ರಾಹ್ಮಿ ಮತ್ತು ಸುಂದರಿಯ ರಿಬ್ಬರೂ ಅವನನ್ನು ಕಂಡು ಬುದ್ಧಿವಂತಿಕೆಯಿಂದ ಆನೆಯ ಹಿಂಭಾಗದಿಂದ ಇಳಿಯುವಂತೆ ಬಾಹುಬಲಿಗೆ ಹೇಳಿದರು. ಹಾಗೆ ಮಾಡಿದ ಮೇಲೆ ಅವನ ಅಹಂಕಾರ ಲುಪ್ತವಾಗಿ, ಬಾಹುಬಲಿ ಕೂಡಲೇ ಪೂರ್ಣಜ್ಞಾನ ಪಡೆದುಕೊಂಡನೆಂದು ಕೆಲವು ಗ್ರಂಥಗಳಲ್ಲಿ ಹೇಳಿದೆ. ಈ ನಿದರ್ಶನದಿಂದ ತಮ್ಮ ಒಡಹುಟ್ಟಿದವನ ಅಭ್ಯುದಯ ಹಾಗೂ ಶ್ರೇಯಸ್ಸು, ಪ್ರೇಯಸ್ಸುಗಳಲ್ಲಿ ಜೈನ ಸ್ತ್ರೀಯರು ವಹಿಸುತ್ತಿದ್ದ ಆಸಕ್ತಿ, ತಳೆಯುತ್ತಿದ್ದ ಉದಾತ್ತ ನಿಲುವು ಮೇಲ್ಪಟ್ಟದ್ದೆಂದು ತಿಳಿಯುತ್ತದೆ.

ಶ್ವೇತಾಂಬರ ಜೈನ ಗ್ರಂಥಗಳ ಪ್ರಕಾರ ಹತ್ತೊಂಬತ್ತನೆಯ ತೀರ್ಥಂಕರನಾದ ಮಲ್ಲಿನಾಥ 'ಮಲ್ಲಿ' ಎಂಬ ಹೆಸರಿನ ಒಬ್ಬ ರಾಜಕುಮಾರಿಯಾಗಿದ್ದನು. ಆಕೆ ಮಿಥಿಲಾನಗರವನ್ನು ಆಳುತ್ತಿದ್ದ ಕುಂಭರಾಜನ ಮಗಳಾಗಿದ್ದಳು. ಮಲ್ಲಿ ಅತ್ಯಂತ ರೂಪವತಿಯೂ, ಬುದ್ಧಿವಂತೆಯೂ ಆಗಿದ್ದಳು ಅವಳ ಸೌಂದರ್ಯದ ಕೀರ್ತಿ ಎಲ್ಲೆಲ್ಲಿಯೂ ಹರಡಿ, ಕೋಸಲ, ಅಂಗ, ಕಾಶಿ, ಕುಣಾಲ, ಕುರು ಮತ್ತು ಪಾಂಚಾಲ ದೇಶದ ರಾಜರುಗಳಿಗೂ ತಿಳಿಯಿತು. ಅವರು ಆಕರ್ಷಿತರಾಗಿ ಅವಳನ್ನು ವಿವಾಹವಾಗಲು ಬಯಸಿದರು. ಆದರೆ ಆಕೆಯ ತಂದೆಯಾದ ಕುಂಭರಾಜನು ಅದಕ್ಕೆ ಸಮ್ಮತಿಸಲಿಲ್ಲ. ಆದರಿಂದ ಕುಪಿತರಾದ ಆ ರಾಜರು ಮಿಥಿಲೆಯನ್ನು ಮುತ್ತಿಗೆ ಹಾಕಿ ಯುದ್ಧ ಮಾಡತೊಡಗಿದರು. ಯುದ್ಧದಲ್ಲಿ ಕುಂಭರಾಜನಿಗೆ ಸೋಲು ಆಗುವಂತೆ ಕಾಣತೊಡಗಿತು. ಆಗ ಅವನ ಮಗಳಾದ ಮಲ್ಲಿ ಎಲ್ಲ ರಾಜರನ್ನೂ ತನ್ನಲ್ಲಿಗೆ ಬರಮಾಡುವಂತೆ ತನ್ನ ತಂದೆಗೆ ತಿಳಿಸಿದಳು.

ಅದರಂತೆ ಆ ರಾಜಕುಮಾರರೆಲ್ಲ ಅರಮನೆಯ ಮಹಾಮಂದಿರವನ್ನು ಪ್ರವೇಶಿಸತೊಡಗಿದರು. ಆ ಮಂದಿರದಲ್ಲಿದ್ದ ಮಲ್ಲಿಯ ಒಂದು ಸುಂದರವಾದ ಬಂಗಾರದ ಪ್ರತಿಮೆಯನ್ನು ಕಂಡು ಅದೊಂದು ಸಜೀವ ಮೂರ್ತಿಯೆಂದೇ ಅವರೆಲ್ಲ ಭ್ರಮಿಸಿದರು. ಆದರೆ ಸ್ವಲ್ಪ ಹೊತ್ತಿನಲ್ಲಿಯೇ ಅವರ ಭ್ರಮೆ ನಿರಸನವಾಗುವಂತೆ ಪಕ್ಕದ ಬಾಗಿಲಿನಿಂದ ವಿಗ್ರಹಕ್ಕಿಂತಲೂ ಸುಂದರಳಾದ ಮಲ್ಲಿ ಪ್ರವೇಶಿಸಿ, ಅವರು ಮೊದಲು ನೋಡಿದ್ದು ತನ್ನಂತಿರುವ ಬಂಗಾರದ ಪ್ರತಿಮೆ ಎಂದು ತಿಳಿಸಿದಳು. ಅನಂತರ ಆ ಪ್ರತಿಮೆಯ ಮೇಲಿದ್ದ ಮುಚ್ಚಳವನ್ನು ತೆಗೆದಾಗ, ಅಲ್ಲಿ ತಾವರೆಯಾಕಾರದ ಭರಣಿಯಲ್ಲಿ ಕೆಟ್ಟ ವಾಸನೆಯು ಪುಡಿ ಕಂಡು ಬಂದಿತು

ಆ ಸುಂದರವಾದ ವಿಗ್ರಹದ ಒಳಭಾಗ ಬಹಳ ಆಳವಾಗಿದ್ದು ಅದರಲ್ಲಿ ಕೆಲವು ದಿವಸಗಳ ಹಿಂದೆ ಉತ್ತಮವಾದ ತಿಂಡಿ, ತಿನಸುಗಳನ್ನಿಟ್ಟಿದ್ದು. ಅದೆಲ್ಲ ಈಗ ಕೊಳೆತು ಹಾಳಾಗಿದ್ದಿತು. ಮಲ್ಲಿ ಆ ರಾಜಕುಮಾರರಿಗೆ ಆ ವಿಗ್ರಹದ ಉದಾಹರಣೆಯನ್ನೇ ನಿರ್ದೇಶಿಸಿ ಸೌಂದರ್ಯದಿಂದ ಕೂಡಿದ ಈ ಹೆಣ್ಣು ದೇಹದೊಳಗಡೆಯೂ ಇಂಥದೇ ವಸ್ತುಗಳಿದ್ದು ಕಾಲಕ್ರಮೇಣ ಈ ಸೌಂದರ್ಯವೂ ಹಾಳಾಗಿ ಜುಗುಪ್ಸೆಯನ್ನು ತರುವದೆಂದು ತಿಳಿಸಿದಳು ಅದರಿಂದಾಗಿ ಈ ಲೌಕಿಕ ವಿಷಯದಿಂದ ಬಿಡುಗಡೆ ಹೊಂದಿ ಅಜ್ಜಿಕೆ (ಕಂತಿ ಯಾಗುವ ತನ್ನ ಅಪೇಕ್ಷೆಯನ್ನು ತಿಳಿಸಿದಳು. ಇದರಿಂದ ಆ ದೊರೆಗಳು ಬಹುವಾಗಿ ಪಶ್ಚಾತ್ತಾಪ ಪಡುವುದರ ಮೂಲಕ, ಮತ್ತು ಧ್ಯಾನದಿಂದ ನಿಜವಾದ ಆನಂದ ಉಂಟಾಗುವುದೆಂದು ತಿಳಿದರು. ಕೂಡಲೇ ತಮ್ಮ ತಮ್ಮ ಮಕ್ಕಳಿಗೆ ರಾಜ್ಯವನ್ನೆಲ್ಲಾ ಒಪ್ಪಿಸಿ ದೀಕ್ಷೆ ಪಡೆದು ಮುನಿಗಳಾದರು. ದಿಗಂಬರ ಪಂಥದವರ ಅಭಿಪ್ರಾಯದಂತೆ ಈ ವಿವರಣೆ ಅಗ್ರಾಹ್ಯವಾಗಿದೆ. ಆದರೂ ಕೇವಲ ಸಾಹಿತ್ಯ ದೃಷ್ಟಿಯಿಂದನ್ನೇ ಈ ದೃಷ್ಟಾಂತವನ್ನು ಸ್ವೀಕರಿಸಿದ್ದೇ ಆದರೆ ಜೈನ ಮಹಿಳೆಯ ಸಂಯಮಪೂರ್ಣವಾದ ಸ್ಥಿರ ಚಿತ್ರವನ್ನು ಈ ಕಥಾನಕ ಚಿತ್ರಿಸುತ್ತದೆ ಎನ್ನಬಹುದು.

ಸ್ತ್ರೀಯರಿಗೆ ಪರಿಶುದ್ಧ ಚಾರಿತ್ರ್ಯ, ಪತಿಶ್ರದ್ಧೆ ಪ್ರಮುಖವಾದುದು. ಬಹಳ ಹಿಂದೆ ಮದುವೆ ಸಂಪ್ರದಾಯ ಇನ್ನೂ ಬಳಕೆಗೆ ಬರದೆ ಇದ್ದಾಗ ಹೆಣ್ಣನ್ನು

ಕೇವಲ ಬಾಯಿ ಮಾತಿನ ಮೂಲಕ ಒಪ್ಪಿಸಿಕೊಡು ತ್ತಿದ್ದ ಕಾಲದಿಂದಲೂ ಭಾರತದ ಸ್ತ್ರೀಯರಿಗೆ ಶೀಲ ಸಂರಕ್ಷಣೆ ಮುಖ್ಯ ಆದರ್ಶವಾಗಿತ್ತು. ಅನಂತರ ವಿವಾಹ ಪದ್ಧತಿ ರೂಢಿಗೆ ಬಂದ ಮೇಲೆಯೂ ಈ ಆದರ್ಶ ಮುಂದುವರಿಯಿತು. ಇದಕ್ಕೆ ಜೈನ ಮಹಿಳೆಯಾದ ರಾಜಮತಿಯ ಜೀವನ ಒಂದು ಉತ್ತಮ ನಿದರ್ಶನ ರಾಜಮತಿ ಇಪ್ಪತ್ತೆರಡನೆಯ ತೀರ್ಥಂಕರನಾದ ನೇಮಿನಾಥನ ಹೆಂಡತಿ. ನೇಮಿನಾಥ ತೀರ್ಥಂಕರನು ಮದುವೆಯ ಮೆರವಣಿಗೆ ವಿವಾಹ ಮಂಟಪದ ಕಡೆಗೆ ಬರುತ್ತಿದ್ದಾಗ ಸ್ವಲ್ಪ ದೂರದಲ್ಲಿ ಕೆಲವು ಪ್ರಾಣಿಗಳನ್ನು ಒಂದೆಡೆಯಲ್ಲಿ ಕೂಡಿ ಹಾಕಿದ್ದುದನ್ನು ಕಂಡನು. ಅದೇ ನೆಂದು ನೇಮಿನಾಥ ವಿಚಾರಿಸಲಾಗಿ ಆ ಪ್ರಾಣಿಗಳ ಮಾಂಸದಿಂದ ಬೀಗರಔತಣವಾಗುತ್ತದೆಂದು ತಿಳಿಯಿತು. ತನ್ನಿಂದಾಗಿ ಇಷ್ಟು ಪ್ರಾಣಿಗಳ ಸಂಹಾರ ಆಗುವುದನ್ನು ತಿಳಿದ ಕೂಡಲೇ ನೇಮಿನಾಥ ಇಹಲೋಕ ಸುಖದ ಆಸೆಯನ್ನು ತೊರೆದು ಯತಿಯಾದನು.

ರಾಜಮತಿ ಯತಿಯಾದ ತನ್ನ ಪತಿಯನ್ನು ಹಿಂಬಾ ಲಿಸಿ, ಸನ್ಯಾಸ ಧರ್ಮವನ್ನು ತಾನೂ ಸ್ವೀಕರಿಸಿದಳು. ನೇಮಿನಾಥ ಅವನ ಸೋದರ ರತ್ನನೇಮಿ, ರಾಜಮತಿ ಇವರು ತಪಸ್ಸಿನಲ್ಲಿ ತೊಡಗಿರುವಾಗ ರತ್ನನೇಮಿಗೆ ಆತ್ಮ ನಿಗ್ರಹ ಸಾಲದೆ, ಅತ್ತಿಗೆ ರಾಜಮತಿಯಲ್ಲಿ ಆಸಕ್ತನಾಗು ವನು. ಆಗ ಅವಳು ಅನ್ಯರ ಎಂಜಲನ್ನು ತಿನ್ನುವ ಬುದ್ಧಿಯನ್ನು ನಿಂದಿಸಿ ಅವನನ್ನು ತಿದ್ದುವಳು. ಜೈನ ಧಾರ್ಮಿಕ ಗ್ರಂಥವಾದ ಉತ್ತರಾಧ್ಯಯನ ಸೂತ್ರದಲ್ಲಿ ರಾಜಮತಿ-ರತ್ನನೇಮಿ ಪ್ರಸಂಗವು ಒಂದು ಸುಂದರ ಜಾನಪದ ಗೀತೆಯೆನಿಸಿದೆ. ಇದು ರಾಜಮತಿಯ ಪಾತಿ ವ್ರತ್ಯದ ಪೆಂಪನ್ನೂ ಪರಿಶುದ್ಧ ಶೀಲದ ಹಿರಿಮೆಯನ್ನೂ ತೋರಿಸುತ್ತದೆ. ಈ ಪ್ರಸಂಗದಲ್ಲಿ ರಾಜಮತಿ ಆದರ್ಶ ಜೈನ ಮಹಿಳೆಯರ ಪ್ರತೀಕವಾಗಿ ಪರಿಶೋಭಿಸಿದ್ದಾಳೆ.

ಜೈನ ಸ್ತ್ರೀಯ ಅಕಳಂಕವಾದ ಪತಿಭಕ್ತಿ ಹಾಗೂ ಪತಿನಿಷ್ಠೆಯನ್ನು ಸಾರುವ ಪ್ರಕರಣ ಒಂದನ್ನು ಮುಂದೆ ಕೊಟ್ಟಿದೆ. ಕ್ರಿ. ಶ. ಎರಡನೆಯ ಶತಮಾನದ 'ಶಿಲಪ್ಪದಿಗಾರಂ' ಎಂಬ ತಮಿಳು ಕಾವ್ಯದಲ್ಲಿ ಸ್ತ್ರೀಯರ ಪಾತಿವ್ರತ್ಯದ ಹಿರಿಯ ಉದಾಹರಣೆಯಾಗಿ ಕೆಲವು ಕತೆ ಗಳನ್ನು ಕೊಡಲಾಗಿದೆ. ಅವುಗಳಲ್ಲಿ ದಕ್ಷಿಣದ ಸ್ತ್ರೀಯರ ಕತೆಗಳಲ್ಲಿ ಕನ್ನಗಿಯ ಕತೆ ಬರುತ್ತದೆ. ಇಂದಿಗೂ ಆಕೆ ಯನ್ನು ತಮಿಳರು ಪತಿವ್ರತಾ ದೇವಿಯೆಂದು ಪೂಜಿ ಸುತ್ತಾರೆ. ಸಿಲೋನಿನಲ್ಲಿ 'ಪತ್ತಿನಿದೇವಿ' ಎಂಬ ಹೆಸರಿ ನಿಂದ ಇವಳನ್ನು ಪೂಜಿಸುತ್ತಾರೆ. ಕನ್ನಗಿಯ ಪತಿಯ ಹೆಸರು ಕೋವಲನ್. ಕೋವಲನ್ ತನ್ನ ಮಡದಿ ಯನ್ನು ಮರೆತು, ಆಸ್ಥಾನ ನರ್ತಕಿಯಾದ ಮಾಧವಿ ಯಲ್ಲಿ ಮನಸೋತು, ಅವಳಿಗಾಗಿ ತನ್ನ 'ಸಂಪತ್ತೆಲ್ಲ ವನ್ನೂ ಹಾಳುಮಾಡಿದನು. ಕಡೆಗೆ ಅವನು ಆ ಮೋಹಕೂಪದಿಂದ ಮೇಲೆದ್ದು, ತನ್ನ ತಪ್ಪಿಗಾಗಿ ಪಶ್ಚಾತ್ತಾಪ ಪಟ್ಟು, ಕೈಹಿಡಿದ ಹೆಂಡತಿಯಾದ ಕನ್ನಗಿ ಯೊಡನೆ ಪುಹಾರ್ ಪಟ್ಟಣವನ್ನು ಬಿಟ್ಟು ಮಧುರೆಗೆ ಬರುತ್ತಾನೆ.

ಆದರೆ ಮಧುರೆಯ ರಾಜನಾದ ಪಾಂಡ್ಯನ ಪಟ್ಟ ಮಹಿಷಿಯ ಬೆಲೆ ಬಾಳುವ ಕಾಲಂದುಗೆ ಕಳವಾಗಿದ್ದು, ಆ ಕಳ್ಳತನದ ಆಪಾದನೆಗೆ ಕೋವಲನು ಗುರಿಯಾಗಿ ಮರಣ ದಂಡನೆ ಶಿಕ್ಷೆಗೆ ಒಳಗಾಗುತ್ತಾನೆ. ಆಗ ಅವನ ಧರ್ಮಪತ್ನಿಯಾದ ಕನ್ನಗಿಯು ತನ್ನ ಗಂಡನನ್ನು ನೋಡಿ ದಾರುಣವಾದ ದುಃಖವನ್ನು ಸಹಿಸಲಾಗದೆ ತನ್ನ ಎಡಗಡೆಯ ಎದೆಯನ್ನು ಕಿತ್ತು ಬೀದಿಯ ಮಧ್ಯ ದಲ್ಲಿ ಎಸೆದು ಶಪಿಸಿದಳು. ಶಾಪಗ್ರಸ್ತವಾದ ಮಧುರೆ ಸ್ವಲ್ಪ ದಿವಸಗಳಲ್ಲಿಯೇ ಹಾಳಾಗಿ ಹೋಯಿತು. ಕನ್ನಗಿ-ಕೋವಲರು ಸತ್ತು ಸ್ವರ್ಗದಲ್ಲಿ ಒಂದಾದರು. ಇದು ಶಿಲಪ್ಪದಿಗಾರಂ ಕತೆ. ಶತ-ಶತಮಾನಗಳಿಂದಲೂ ತಮಿಳು ನಾಡಿನಲ್ಲಿ ಕನ್ನಗಿಯನ್ನು ಅವಳ ಪಾತಿವ್ರತ್ಯಕ್ಕಾಗಿ ದೇವರ ಅವತಾರವೆಂದು ಪರಿಗಣಿಸಿ ಪೂಜಿಸುತ್ತಿದ್ದಾರೆ.

ಜೈನಧರ್ಮದ ಪ್ರಕಾರ ಮಹಾವೀರ ತೀರ್ಥಂಕರನ ಸಮಕಾಲೀನಳಾದ ಆರ್ಯ ಚಂದನ ಎಂಬಾಕೆ ಮಹಾ ವೀರನ ಮೊಟ್ಟಮೊದಲನೆಯ ಸ್ತ್ರೀ ಅನುಯಾಯಿಯಾಗಿ ದ್ದಾಳೆ. ಕೌಶಾಂಬಿಯ ದೊರೆ ಶತಾನೀಕನ ತಂಗಿ ಯಾದ ಜಯಂತಿ ಮಹಾವೀರನ ಉಪನ್ಯಾಸವನ್ನು ಕೇಳುತ್ತಿದ್ದು ಆಧ್ಯಾತ್ಮಿಕ ಹಾಗೂ ಭೌತಿಕ ವಿಷಯ ಗಳನ್ನು ಚರ್ಚಿಸಿ, ತನ್ನ ರಾಜಭೋಗವನ್ನು ತ್ಯಜಿಸಿ ಸನ್ಯಾಸಿಯಾದಳು. ಆಗ ಅವಳ ಅಣ್ಣ ಶತಾನೀಕನ

ಪತ್ನಿಯಾದ ಮೃಗವತಿಯೂ ದೀಕ್ಷೆ ತಳೆದಳು. ಮೃಗವತಿ ದೀಕ್ಷೆ ತಳೆದ ಹಿನ್ನಲೆ ಬಹಳ ಸ್ವಾರಸ್ಯ ವಾಗಿದೆ.

ಶೀಲಸಂಪನ್ನೆಯೂ ರಾಜತಂತ್ರ ನಿಪುಣಳೂ ವೀರ ಮಹಿಳೆಯೂ ಆದ ಮೃಗವತಿ ತುಂಬಾ ಹೆಸರುವಾಸಿ ಯಾಗಿದ್ದಳು. ಉಜ್ಜಯಿನಿಯ ದೊರೆಯಾದ ಪ್ರತ್ಯೋತನು ಇವಳನ್ನು ಅಪಹರಿಸಲು ಕೌಶಾಂಬಿಗೆ ಮುತ್ತಿಗೆ ಹಾಕಿದನು. ಯುದ್ಧ ನಡೆಯುತ್ತಿದ್ದಾಗ ಮೃಗವತಿಯ ಪತಿ ಶತಾನೀಕ ಖಾಯಿಲೆ ಯಿಂದಾಗಿ ಮರಣ ಹೊಂದಿದನು. ಆದರೆ ರಾಜತಂತ್ರ ದಲ್ಲಿ ಚತುರಳಾದ ಮೃಗವತಿಯು ದೂರದೃಷ್ಟಿಯಿಂದ, ರಾಜ್ಯದ ದೊರೆ ಅನಾರೋಗ್ಯದಿಂದ ಇರುವನೆಂದು ಮಾತ್ರ ಸುದ್ದಿ ಹಬ್ಬಿಸಿ, ತಾನೇ ಸೈನ್ಯದ ಮುಂದಾಳಾಗಿ ನಿಂತು, ಪ್ರತ್ಯೋತನನ್ನು ಗಡಿಯಿಂದ ಆಚೆಗೆ ಓಡಿಸಿದ ತರುವಾಯ ರಾಜ ಸತ್ತ ಸುದ್ದಿಯನ್ನು ಜನತೆಗೆ ತಿಳಿಸಿ ದಳು. ಆದರೆ ಆ ವೇಳೆಗೆ ಸೈನಿಕರಿಗೆ ಬಹಳ ಆಯಾಸ ವಾಗಿದ್ದುದರಿಂದ ತಮ್ಮ ಮೇಲೆ ನುಗ್ಗಿ ಬರುತ್ತಿದ್ದ ಪ್ರತ್ಯೋತನ ಸೈನ್ಯವನ್ನು ತಡೆಯಲಾಗಲಿಲ್ಲ. ಆಗಲೂ ಮೃಗವತಿ ತುಂಬ ಕುಶಲತೆಯಿಂದ ತನ್ನ ರಾಜಧಾನಿಯ ಸುತ್ತ: ಬಲವಾದ ಕೋಟೆಯನ್ನು ಕಟ್ಟಿ, ತನ್ನ ಮಗನಿಗೆ ರಾಜ್ಯಪಟ್ಟವನ್ನು ಕಟ್ಟಿದರೆ, ಆಗ ತಾನು ಪ್ರತ್ಯೋತನ ಅಂತಃಪುರವನ್ನು ಪ್ರವೇಶಿಸುವುದಾಗಿ ಹೇಳಿ ಕಳುಹಿಸಿ ದಳು. ಆ ಒಪ್ಪಂದವಾದ ಮೇಲೆ ಅವಳು ಮಹಾವೀರನ ಸಭಾಮಂಟಪಕ್ಕೆ ಬಂದು. ಅಲ್ಲಿ ಕುಳಿತಿದ್ದ ಪ್ರತ್ಯೋತನ ಅಪ್ಪಣೆಯನ್ನು ಪಡೆದು ಸನ್ಯಾಸಿನಿಯಾದಳು. ಪ್ರತ್ಯೋತನೂ ಮಹಾವೀರ ಸ್ವಾಮಿಯ ಪ್ರಭಾವದಿಂದ ಪವಿತ್ರಾಂತಃಕರಣನಾಗಿ ತನ್ನ ಅಂತಃಪುರದ ಇನ್ನೂ ಹಲವು ಸ್ತ್ರೀಯರಿಗೆ ಮಹಾವೀರ ಸ್ವಾಮಿಯಿಂದ ದೀಕ್ಷೆ ಕೊಡಿಸಿದನು.

ಕನ್ನಡನಾಡಿನಲ್ಲೂ ಜಿನಶಾಸನ ದೇವತೆಗಳಂತೆ ಬಾಳಿದ ಸಾವಿಯಬ್ಬೆ ಮುಂತಾದ ಜೈನ ಸ್ತ್ರೀಯರ ಜೀವನವೂ ಮೃಗವತಿಯ ಜೀವನದಂತೆ ತುಂಬಾ ಉಪೇಕ್ಷಿತವಾಗಿದೆ. ಲೋಕವಿದ್ಯಾಧರನ ಮಡದಿಯಾದ ಸಾವಿಯಬ್ಬೆ ಪತಿಗೆ ಸಹಕರಿಸಿ, ಸಾಹಸದಿಂದ ರಣರಂಗ ದಲ್ಲಿ ಶತ್ರುಗಳೊಡನೆ ಹೋರಾಡಿ ವೀರಸ್ವರ್ಗವನ್ನು ಪಡೆದ ಸಂಗತಿಯನ್ನು ಕನ್ನಡ ನಾಡಿನ ಶಾಸನಗಳು ಹೆಮ್ಮೆಯಿಂದ ಸಾರಿವೆ:

ಶ್ರಾವಕ ಧರ್ಮದೊಳ್ ದೊರೆಯೆನಲ್ ಪೆರರಿಲ್ಲೆನೆ
ಸಂದ ರೇವತೀ
ಶ್ರಾವಕಿ ತಾನೆ ಸಜ್ಜನಿಕೆಯೊಳ್ ಜನಕಾತ್ಮಜೆ
ತಾನೆ ರೂಪಿನೊಳ್ ।
ದೇವಕಿ ತಾನೆ ಪೆಂಪಿನೊಳರುಂಧತಿ ತಾನೆ
ಜಿನೇಂದ್ರ ಭಕ್ತಿ ಸ-
ದ್ಭಾವದೆ ಸಾವಿಯಬ್ಬೆ ಜಿನಶಾಸನ ದೇವತೆ ತಾನೆ
ಕಾಣಿರೇ॥

ಹೀಗೆ ಜೈನ ಸಾಮಂತ ಮಹಿಳಾ ಶಾಸಿಕೆಯರಲ್ಲಿ ಬಂಗವಂಶದಲ್ಲಿ ಶಂಕರದೇವಿ (೧೩೬೪-೧೩೯೫) ಚೌಟರ ವಂಶದಲ್ಲಿ ಅಬ್ಬಕ್ಕದೇವಿ (೧೫೪೪-೧೫೮೬), ತಿರುಮಲಾ ದೇವಿ (೧೫೮೬-೧೬೦೬) ಮತ್ತು ಬೈಲಂಗಡಿ ಮೂಲರ ವಂಶದಲ್ಲಿ ಸೋಮಲಾದೇವಿ ಮೊದಲಾದ ಜೈನ ಮಹಿಳೆ ಯರು ತುಂಬ ಹೆಸರು ಪಡೆದವರು. ವಿದೇಶೀಯರಾದ ಪೋರ್ಚುಗೀಸರನ್ನು ಹೊಡೆದೋಡಿಸಲೆತ್ನಿಸಿದ ೧೬ನೆಯ ಶತಮಾನದ ರಾಣಿ ಅಬ್ಬಕ್ಕದೇವಿ ಚೌಟರ ಚಿಗುರು, ಜೈನ ದೊರೆಯ ಮಡದಿ ಎಂಬುದನ್ನು ನೆನೆಸಿಕೊಂಡರೆ ರೋಮಾಂಚನವಾಗುತ್ತದೆ.

ಶಿವಮೊಗ್ಗ ಜಿಲ್ಲೆಯ ಹೊಂಬುಚವೆಂಬ ಸುಪ್ರಸಿದ್ಧ ಜೈನ ಕ್ಷೇತ್ರವನ್ನು ಸ್ಥಾಪಿಸಿದ ಜಿನದತ್ತರಾಯನ ವಂಶದ ವರು ಹಿರಣ್ಯಗರ್ಭನೆಂಬವನ ಕಾಲದಲ್ಲಿ ಈಗಿನ ತೀರ್ಥ ಹಳ್ಳಿ ತಾಲ್ಲೂಕಿನ ಸಾಂತಳಿಗೆ ಎಂಬ ಪ್ರದೇಶವನ್ನು ವಶ ಪಡಿಸಿಕೊಂಡರು. ಅದರಿಂದ ಮುಂದೆ ಈ ವಂಶದ ದೊರೆಗಳಿಗೆ ಸಾಂತರವಂಶವೆಂದು ಹೆಸರಾಯಿತು. ಈ ಹೆಸರಾಂತ ವಂಶದಲ್ಲಿ ಚಾಕಲದೇವಿ, ಕಾಲಲಾದೇವಿ ಮುಂತಾದ ಹಲವು ಜನ ವೀರ ಮಹಿಳೆಯರು ರಾಜ್ಯ ಭಾರ ಮಾಡಿದರು. ಆದರೆ ಅವರು ಆಳಿದ್ದು ಕೇವಲ ಕಾಟಾಚಾರದ ರಾಜ್ಯಭಾರವಾಗಿರಲಿಲ್ಲ. ತುಂಬ ದಕ್ಷತೆ ಯಿದಲೇ ಈ ಜೈನ ಮಹಿಳೆಯರು ಆಳಿದುದಾಗಿ ಪ್ರತೀತಿ ಯಿದೆ. ಸಾಂತರ ವಂಶದ ಜೈನ ಸ್ತ್ರೀಯರು ರಾಜನೀತಿ ಯಲ್ಲಿ, ಸಾಹಿತ್ಯ ಸೇವೆಯಲ್ಲಿ ಸಾಕಷ್ಟು ಸುಪ್ರಸಿದ್ಧರು.

ಅವರಲ್ಲಿಯೂ ವಿಶೇಷವಾಗಿ ವಿಕ್ರಮ ಸಾಂತರನ ಮಗಳಾದ ಚಂಪಾದೇವಿ ಎಂಬಾಕೆ ಪರಮ ಪಂಡಿತೆಯೂ ಗಿದ್ದಳು. ಅವಳಿಗೆ 'ಶಾಸನದೇವತೆ' ಎಂಬ ಬಿರುದೂ ಬಂದಿತ್ತು. ದೋರಸಮುದ್ರದ ರಾಜಾಸ್ಥಾನದಲ್ಲಿ ಅಭಿನವ ಪಂಪನ ಸಮಕಾಲೀನಳಾದ ಜೈನ ಕವಯಿತ್ರಿ ಕಂತಿಯ ಹೆಸರಂತೂ ವಿಖ್ಯಾತವಾಗಿದೆ. ಇವಳ ವಿಚಾರ ಮತ್ತೆ ಮುಂದೆ ಬರುತ್ತದೆ.

ಜೈನಧರ್ಮದ ಮೇಲ್ಮೆ ಹಾಗೂ ರತ್ನತ್ರಯ ಇವುಗಳ ಸಾಧನೆಗಾಗಿ ತಮ್ಮ ಬಾಳನ್ನೇ ಮುಡಿಪಾಗಿ ಇಟ್ಟ ಅನೇಕ ಜನ ಕಂತಿಯರ, ಭಕ್ತೆಯರ, ಶ್ರಾವಕಿಯರ, ಪತಿವ್ರತೆಯರ ವಿಚಾರವನ್ನು ಹತ್ತಾರು ಶಾಸನಗಳೂ, ಸಾಹಿತ್ಯ ಕೃತಿಗಳೂ ಹೆಸರಿಸಿವೆ. ಹತ್ತನೆಯ ಶತಮಾನದ ಆರಂಭಕಾಲದ ಕನ್ನಡ ಗದ್ಯಗ್ರಂಥವಾದ ವಡ್ಡಾರಾಧನೆಯಲ್ಲಿ ಕಮಳಶ್ರೀ, ಬ್ರಹ್ಮಿಲೆ, ಗುಣಮತಿ, ಪದ್ಮಾವತಿ, ಸುವ್ರತಿ ಮೊದಲಾದ ಕಂತಿಯರ ಉಲ್ಲೇಖ ವಿದೆ. ಅದೇ ಶತಮಾನದ ಕಡೆಯಲ್ಲಿ ರಚಿತವಾದ ಚಾವುಂಡರಾಯ ಪುರಾಣದಲ್ಲಿ ಅನಂತಮತಿ,ಪ್ರಭಾವತಿ, ಸುದರ್ಶನ ಮೊದಲಾದ ಕಂತಿಯರ ಗುಣಗಾನವಿದೆ. ಶ್ರವಣಬೆಳಗೊಳದ ಶಾಸನದಲ್ಲಿ ಸಸಿಮತಿ ಗಂತಿಯರು ಮುಡಿಪಿದ ವಿವರ ಹೀಗೆ ವರ್ಣಿಸಿದೆ :

ನೆರೆದಾದ ವ್ರತ-ಶೀಲ-ನೋಂಪಿ ಗುಣದಿಂ
ಸ್ವಾಧ್ಯಾಯ ಸಂಪತ್ತಿನಿಂ
ಕರೆಯಿಲ್‌ನಲ್ ತಪಧರ್ಮದಾ ಸಸಿಮತಿಶ್ರೀ
ಗಂತಿಯರ್ ವಂದು ಮೇಲ್,
ಅರಿವಾಯುಷ್ಯಮನೆಂತು ನೋಡೆನಗೆ ತಾನಿಂ
ತೆಂದು ಕಳ್ವಪ್ಪಿನುಳ್
ತೊರದಾರಾಧನೆ ನೋಂತು ತೀರ್ಥಗಿರಿಮೇಲ್
ಸ್ವರ್ಗಾಲಯಕ್ಕೇರಿದಾರ್ ||

ಅಂದಿನ ಜೈನ ಸಮಾಜದ ಮೇಲೆ ಯತಿಗಳಷ್ಟೇ ಈ ಸನ್ಯಾಸಿನಿಯರೂ ಗಾಢವಾದ ಪ್ರಭಾವವನ್ನು ಬೀರಿದ್ದರು; ಸ್ತ್ರೀಯರಿಗೆ ಸ್ಫೂರ್ತಿದಾತೆಯರಾಗಿದ್ದರು. ಅವರ ವರ್ಚಸ್ವೀ ವ್ಯಕ್ತಿತ್ವವನ್ನು ಇಂದಿಗೂ ಕಾಣಬಹುದಾಗಿದೆ. ಜೈನ ಸ್ತ್ರೀಯರಲ್ಲಿ ವಿದ್ಯೆ, ತ್ಯಾಗ, ಬುದ್ಧಿವಂತಿಕೆ, ಪಾಂಡಿತ್ಯ, ಶೀಲಸಂವರ್ಧನೆ ಮೊದಲಾದ ಉದಾತ್ತ ಗುಣಗಳಿಂದ ಶೋಭಿತರಾದ ಎಷ್ಟೋ ಜನರ ವಿವರ ಸಿಗುತ್ತದೆ. ಸ್ಥೂಲಭದ್ರನ ಏಳು ಮಂದಿ ಸಹೋದರಿಯರಾದ ಯಕ್ಷ ಮೊದಲಾದವರು ಅದ್ಭುತ ಜ್ಞಾಪಕಶಕ್ತಿಯ ಕುರುಹಾಗಿದ್ದರು. ಕ್ರಿ.ಶ. ೧ನೆಯ ಮಾನದ ಆರ್ಯವ್ರಜನು ಆರು ವರುಷದ ಕಿಶೋರನಾಗಿರುವಾಗಲೇ ಜೈನ ಸನ್ಯಾಸಿನಿಯರ ಬಳಿ ವಿದ್ಯಾಭ್ಯಾಸ ಮಾಡಿದನು. ಕಂತಿಯರ ಅನುಗ್ರಹದಿಂದ ಚೆನ್ನಾಗಿ ವಿದ್ಯೆ ಕಲಿತು ಹಿರಿಯ ವಿದ್ವಾಂಸನಾದನು. ಆ ಸನ್ಯಾಸಿನಿಯರಲ್ಲೆಲ್ಲಾ ಯಾಕಿನಿ ಮಹತ್ತರಾ ಎಂಬವಳು ಮಹಾ ವಿದುಷಿ. ಹರಿಭದ್ರಸೂರಿ ಎಂಬ ಬ್ರಾಹ್ಮಣ ಪಂಡಿತನು—ತನ್ನನ್ನು ವಾದದಲ್ಲಿ ಯಾರು ಸೋಲಿಸುವರೋ ಮತ್ತು ಯಾರ ಪ್ರವಚನವನ್ನು ಅರ್ಥಮಾಡಿಕೊಂಡು ವಿವರಿಸಲು ತನಗೆ ಅಸಾಧ್ಯವಾಗುವುದೋ ಅಂಥವರನ್ನು ತನ್ನ ಗುರುವೆಂದು ಒಪ್ಪಿಕೊಳ್ಳುವುದಾಗಿ ತಿಳಿಸಿದನು. ಜೈನ ಕಂತಿಯಾದ ಯಾಕಿನಿ ಮಹತ್ತರಾ ಅವನನ್ನು ವಾದದಲ್ಲಿ ಸೋಲಿಸಿ ಜೈನಧರ್ಮಕ್ಕೆ ಪರಿವರ್ತಿಸಿದಳು. ಭಾರತೀಯ ಸಾಹಿತ್ಯಕ್ಕೂ ಜೈನಧರ್ಮಕ್ಕೂ ದೊರೆತಿರುವ ಹರಿಭದ್ರ ಸೂರಿಯ ಕಾಣಿಕೆಯ ಮೌಲ್ಯವನ್ನು ಅರ್ಥಮಾಡಿಕೊಂಡರೆ, ಅಂತಹ ಘನ ಪಂಡಿತನನ್ನೂ ಸೋಲಿಸಿದ ಯಾಕಿನಿಯ ಪಾಂಡಿತ್ಯದ ಘನತೆಯನ್ನೂ ಔನ್ನತ್ಯವನ್ನೂ ಅರ್ಥಮಾಡಿಕೊಳ್ಳಲು ಸಾಧ್ಯವಾಗುತ್ತದೆ. ಹರಿಭದ್ರ ಸೂರಿ ಸಂತೋಷದಿಂದ ಜೈನ ಧರ್ಮವನ್ನು ಸ್ವೀಕರಿಸಿದ್ದೇ ಅಲ್ಲದೆ ತನ್ನನ್ನು 'ಯಾಕಿನೀ ಮಹತ್ತರಾಸೂನು' ಎಂದು ಆತ ಕರೆದುಕೊಂಡಿದ್ದಾನೆ

ಹೀಗೆ ಜೈನಧರ್ಮದಲ್ಲಿ ವಿದ್ಯಾವಂತರೂ, ಬುದ್ಧಿವಂತರೂ ಆದ ಅನೇಕ ಜೈನ ಕಂತಿಯರಿದ್ದಾರೆ. ಕ್ರಿ.ಶ. ೯೦೬ರಲ್ಲಿ ಸರಸ್ವತೀ ಪ್ರತೀಕದಂತಿದ್ದ ಸಿದ್ಧರ್ಷಿಯು, 'ಉಪಮಿತ ಭವ ಪ್ರಪಂಚಕಥಾ' ಗ್ರಂಥವನ್ನು ಕುರಿತು ಉಪನ್ಯಾಸ ಮಾಡಿದಾಗ ಆ ಅಲಂಕಾರ ಗ್ರಂಥದ ಮೊಟ್ಟಮೊದಲ ಪ್ರತಿಯನ್ನು ಸಿದ್ಧಗೊಳಿಸಿದವಳು ಗುಣಸಾಧ್ವಿ ಎಂಬ ಜೈನ ಕಂತಿ. ಇದರಂತೆ ಕ್ರಿ.ಶ. ೧೧೧೮ರಲ್ಲಿ, ಸಿದ್ಧರಾಜ ಜಯಸಿಂಹನ ಕಾಲದಲ್ಲಿ, ಮಹಾನಂದ ಶ್ರೀ ಮಹತ್ತರಾ ಮತ್ತು ಗಣಿನಿ ವೀರಮತಿ ಎಂಬ ಇಬ್ಬರು ಕಂತಿಯರು ಜಿನಭದ್ರನ 'ವಿಶೇಷಾವಶ್ಯಕ ಭಾಷ್ಯಾ' ಎಂಬ ಗ್ರಂಥಕ್ಕೆ ವಿವರವಾದ ಟೀಕೆಯನ್ನು

ಬರೆಯಲು ಹೇಮಚಂದ್ರನಿಗೆ ಬಹುವಾಗಿ ಸಹಾಯ ಮಾಡಿದರು. ಕ್ರಿ ಶ. ೧೧೫೦ರಲ್ಲಿ ಗುಣಸಮೃದ್ಧಿ ಮಹತ್ತರಾ ಎಂಬ ಜೈನ ಕಂತಿ ಅಂಜನಸುಂದರೀ ಚರಿತ್ರವೆಂಬ ಪ್ರಾಕೃತ ಗ್ರಂಥವನ್ನು ರಚಿಸಿದಳು.

ಒಳ್ಳೆಯ ಮಕ್ಕಳ ತಾಯಿಯಾಗುವುದು, ನಿಷ್ಕಳಂಕವಾದ ಪ್ರೀತಿಯಿಂದ ತನ್ನ ಪತಿಯನ್ನು ಪ್ರೀತಿಸುವುದು ಎಲ್ಲ ಸ್ತ್ರೀಯರ ಬಯಕೆ. ತಾಯಿಯಾದವಳಿಗೆ ತನ್ನ ಮಗನನ್ನು ತ್ಯಾಗ ಮಾಡುವುದು ಸುಲಭವಲ್ಲ. ಆದರೆ ಜೈನ ಮಹಿಳೆಯರು ಎಂಥ ತ್ಯಾಗಕ್ಕೂ ಸಿದ್ಧ. ತನ್ನ ಮಗ ತನ್ನ ಎದುರಿನಲ್ಲಿ ಯತಿಯಾಗಲು ಸಮ್ಮತಿಸಿದ ಪ್ರಸಂಗವೊಂದು ಜೈನ ಪುರಾಣದಲ್ಲಿ ಬರುತ್ತದೆ. ಶ್ರೇಣಿಕ ಮಹಾರಾಜ ಮತ್ತು ಧಾರಿಣೀ ಮಹಾದೇವಿ ಇವರು ತಮ್ಮ ಮಗ ಮೇಘಕುಮಾರ ತಾನು ಮುನಿಯಾಗಲು ಇಚ್ಛೆ ಪಟ್ಟಾಗ ಅವನ ಮನಸ್ಸನ್ನು ಸಂಸಾರದತ್ತ ತಿರುಗಿಸಲು ಪಟ್ಟ ಪ್ರಯತ್ನವೆಲ್ಲಾ ವ್ಯರ್ಥವಾಯಿತು. ಆಗ ಅವನನ್ನು ಮಹಾವೀರ ಸ್ವಾಮಿಯ ಬಳಿಗೆ ಕರೆದು ತಂದು ಸಂನ್ಯಾಸಿಯ ಆದರ್ಶಕ್ಕೆ ನಿಷ್ಠೆಯಿಂದ ನಡೆದುಕೊಳ್ಳುವಂತೆ ಎಚ್ಚರಿಕೆ ಇತ್ತು ಅವನ ತಾಯಿ ಧಾರಿಣಿ ಮಗನ ಹೊಸ ಜೀವನಕ್ಕೆ ಶುಭಕೋರಿ ಆಶೀರ್ವದಿಸಿದಳು. ಶ್ರೇಣಿಕ ಮಹಾರಾಜನಿಗೆ (ಕ್ರಿ ಪೂ ೬೦೧ರಿಂದ ೫೫೨) ಬಿಂಬಸಾರನೆಂದೂ ಹೆಸರಿದೆ. ಇವನ ಇನ್ನೊಬ್ಬ ರಾಣಿಯಾದ ಚೇಳನೀದೇವಿ ಜೈನಪುರಾಣಗಳಲ್ಲಿ ಬಹು ಮಾನ್ಯಳಾಗಿದ್ದಾಳೆ. ಚೇಳನೀದೇವಿ ಮಹಾವೀರ ಸ್ವಾಮಿಯ ತಾಯಿಯ ತಂಗಿ. ಚೇಳನೀದೇವಿ ಹಲವು ದೃಷ್ಟಿಗಳಿಂದ ಜೈನ ಮಹಿಳೆಯರಿಗೆ ಸ್ಫೂರ್ತಿದಾತೆಯಾದ ಮಹಾಮಾತೆಯಾಗಿ ಪ್ರಸಿದ್ಧಿಯನ್ನು ಪಡೆದಿದ್ದಾಳೆ.

ಪಾಹಿನಿಯದು ಮಹಾತ್ಯಾಗ ಮಾಡಿದ ಉದಾತ್ತ ಪಾತ್ರ. ಜೈನಧರ್ಮದ ಗುರುವಾದ ಆಚಾರ್ಯ ಹೇಮಚಂದ್ರಾಚಾರ್ಯನನ್ನು ಪಾಹಿನಿ ಉದಾರವಾಗಿ ತ್ಯಾಗ ಮಾಡದಿದ್ದರೆ ಭಾರತಕ್ಕೆ ಅಂಥ ಒಬ್ಬ ವಿದ್ವಾಂಸ ತಪ್ಪಿ ಹೋಗುತ್ತಿದ್ದ. ಉತ್ತರ ಗುಜರಾತಿನ ಧಂಡೂಕ ಎಂಬ ನಗರದಲ್ಲಿದ್ದ ಜಾಜಿಗನೆಂಬ ಶ್ರೀಮಂತ ವರ್ತಕನ ಮಡದಿಯೇ ಪಾಹಿನಿ. ಅವಳು ಶಾಂತ ಸ್ವಭಾವದವಳಾಗಿದ್ದು, ಜೈನಧರ್ಮಕ್ಕಾಗಿ ಶ್ರಮಿಸುತ್ತಿದ್ದಳು. ಕ್ರಿ.ಶ. ೧೦೮೮ರಲ್ಲಿ ಅವಳಿಗೆ ಚಂಗದೇವನೆಂಬ ಒಬ್ಬ ಮಗ ಹುಟ್ಟಿದ. ಆ ಮಗು ಹುಟ್ಟುವುದಕ್ಕೆ ಮೊದಲು ಪಾಹಿನಿಗೆ ಕನಸಿನಲ್ಲಿ ತನ್ನ ಗುರುವಾದ ಆಚಾರ್ಯ ದೇವಚಂದ್ರನಿಗೆ ತಾನು ಚಿಂತಾಮಣಿ ರತ್ನವನ್ನು ಕೊಟ್ಟ ಹಾಗೆ ಅನುಭವವಾಗುತ್ತದೆ. ಒಮ್ಮೆ ಪಾಹಿನಿ ತನ್ನ ಐದು ವರ್ಷದ ಮಗ ಚಂಗದೇವನೊಡನೆ ಗುರು ದೇವಚಂದ್ರನಿಗೆ ಗೌರವ ಸಲ್ಲಿಸಲು ಹೋಗಿದ್ದಾಗ ಮಗು ನೇರವಾಗಿ ಹೋಗಿ ಆಚಾರ್ಯ ಪೀಠದಲ್ಲಿ ಕುಳಿತುಕೊಂಡಿತು. ಆಗ ಆಚಾರ್ಯರು ಪಾಹಿನಿಗೆ ಅವಳ ಕನಸಿನ ವಿಷಯವನ್ನು ನೆನಪಿಸಿ, ಅವಳ ಏಕೈಕ ಪುತ್ರನನ್ನು ಚೈತ್ಯಾಲಯಕ್ಕೆ ಒಪ್ಪಿಸಬೇಕೆಂದು ಕೇಳಿದರು.

ಆ ಸಂದರ್ಭದಲ್ಲಿ ಪಾಹಿನಿಯ ಜೊತೆಯಲ್ಲಿ ಅವಳ ಪತಿಯೂ ಇರಲಿಲ್ಲ. ಸ್ವಲ್ಪ ಹೊತ್ತು ಏನು ಮಾಡಬೇಕೆಂದು ತೋಚದೆ ಅವಳ ಮನಸ್ಸು ತೊಯ್ದಾಡಿತು. ಆದರೆ ಮರುಕ್ಷಣವೇ ಮಗನನ್ನು ತ್ಯಾಗ ಮಾಡಲು ತೀರ್ಮಾನಿಸಿದಳು. ತನ್ನ ಪತಿ ಬಂದರೆ ಮಗನ ಮೇಲಿನ ಮಮತೆಯಿಂದ ಈ ತ್ಯಾಗಕ್ಕೆ ಹಿಂತೆಗೆಯಬಹುದೆಂದು ಯೋಚಿಸಿ, ನಿಂತ ನಿಲುವಿನಲ್ಲೇ ತನ್ನ ಬಾಳಿನ ಅಮೂಲ್ಯ ಕಾಣಿಕೆಯನ್ನು ಗುರುಪೀಠಕ್ಕೆ ಸಮರ್ಪಿಸಿ ಹೋದಳು. ಪಾಹಿನಿ ಅಂದುಕೊಂಡಂತೆ ಅವಳ ಪತಿ ಜಾಜಿಗ ತನ್ನ ಮಗನನ್ನು ಮತ್ತೆ ಹಿಂದೆ ಪಡೆಯಲು ಪ್ರಾರಂಭದಲ್ಲಿ ಪ್ರಯತ್ನ ಪಟ್ಟನಾದರೂ ಕಡೆಗೆ ಮನಸ್ಸನ್ನು ಬದಲಾಯಿಸಿದನು. ಪಾಹಿನಿಯ ಮಗ ಈ ಚಂಗದೇವನೇ ಮುಂದೆ ಕಲಿಕಾಲ ಸರ್ವಜ್ಞನೆಂದು ಸುಪ್ರಸಿದ್ಧನಾದ ಆಚಾರ್ಯ ಹೇಮಚಂದ್ರ.

ಪಾಟನ್ ನಗರದ ಭೀಮದೇವನ ಮಂತ್ರಿಯಾದ ವಿಮಲನ ಪತ್ನಿಯೇ ಶ್ರೀದೇವಿ ಈ ಶ್ರೀದೇವಿಯ ತ್ಯಾಗವೂ ಹಿರಿದಾದುದು. ವಿಮಲನು ಮಹಾಶೂರನಾಗಿದ್ದು, ಚಾಲುಕ್ಯರ ಬಳಿ ವಂಶಪರಂಪರೆಯಾಗಿ ಬಂದ ಮಂತ್ರಿಪದವಿಯನ್ನು ಪಡೆದಿದ್ದನು. ಒಮ್ಮೆ ವಿಮಲನನ್ನು ಚಂದ್ರಾವತಿ ಪ್ರಾಂತಕ್ಕೆ ರಕ್ಷಣಾಧಿಕಾರಿಯನ್ನಾಗಿ ನೇಮಿಸಿದರು. ಅಲ್ಲಿಗೆ ಹತ್ತಿರದಲ್ಲೇ ಅಬೂ ಬೆಟ್ಟವಿದ್ದಿತು ಜಿನಧರ್ಮಾಸಕ್ತರಾದ ಈ ದಂಪತಿಗಳು ಚಂದ್ರಾವತಿನಗರದಲ್ಲಿ ಇರುವಾಗ ಜೈನ ಯತಿಯೊಬ್ಬನ ದರ್ಶನವಾಯಿತು. ಜಿನಮುನಿಯ ಪ್ರಭಾವದಿಂದ ವಿಮಲನು ಯುದ್ಧದಿಂದ ಉಂಟಾದ ಪಾಪವನ್ನು

ಕೆದುಕೊಳ್ಳಲು ಆಬೂಬೆಟ್ಟದ ಮೇಲೆ ಜಿನಾಲಯ
ನ್ನು ಕಟ್ಟಿಸಲು ಯತಿಯ ಆದೇಶದಂತೆ ನಿಶ್ಚಯಿಸಿ
ನು. ಮಕ್ಕಳಿಲ್ಲದ್ದರಿಂದ ಅಂಬಿಕಾದೇವಿಯನ್ನು—
ನಗೆ ಒಂದು ಗಂಡು ಮಗು ಹುಟ್ಟಬೇಕೆಂದೂ, ಜಿನಾ
ಯದ ಕಲಾಪೂರ್ಣ ರಚನೆಗೆ ಸಹಾಯವಾಗ
ಬೇಕೆಂದೂ ಪ್ರಾರ್ಥಿಸಿದರು. ದೇವಿ ಪ್ರಸನ್ನಳಾಗಿ—
ವರ ಪುಣ್ಯ ಎರಡು ವರಗಳನ್ನು ಕರುಣಿಸುವಷ್ಟು ಇಲ್ಲ
ಂದೂ, ಯಾವುದಾದರೂ ಒಂದು ವರವನ್ನು ಕೇಳಿ
ಕೊಳ್ಳಬೇಕೆಂದೂ ತಿಳಿಸುವಳು. ಆಗ ವಿಮಲನು ತನ್ನ
ಹೆಂಡತಿಯಾದ ಶ್ರೀದೇವಿಯ ಅಭಿಪ್ರಾಯವನ್ನು ಕೇಳಿ
ನು. ಅದಕ್ಕೆ ಆಕೆ ಮಗುವಿನಿಂದಲೂ ಶಾಶ್ವತವಾಗಿ
ಲ್ಲುವ, ಬಾಳನುದ್ದಕ್ಕೂ ಸಂತೋಷ ನೀಡಬಲ್ಲ, ಬಸ
ಯ ನಿರ್ಮಾಣವೇ ಶ್ರೇಷ್ಠವೆಂದು ತಿಳಿಸುವಳು
ಮಲನೂ ಅದರಂತೆ ಪ್ರಾರ್ಥಿಸುವನು. ದೇವತೆಯ
ರಬಲದಿಂದ ಮುಂದೆ ಬಸದಿಯ ನಿರ್ಮಾಣ ನಿರ್ವಿಘ್ನ
ಾಗಿ ನೆರವೇರಿತು. ಅಮೃತಶಿಲೆಯಿಂದ ನಿರ್ಮಿತ
ಾದ ಆ ಚೈತ್ಯಾಲಯ ಇಂದಿಗೂ ಜೈನ ಮಹಿಳೆಯಾದ
ರೀದೇವಿಯ ತ್ಯಾಗದ ಸಂಕೇತವಾಗಿ ನಿಂತಿದೆ.

ಬಸದಿ, ಕೆರೆ, ಕಟ್ಟೆ, ಕಲ್ಯಾಣಿಗಳನ್ನು ಕಟ್ಟಿ
ಸುವುದು, ಇಲ್ಲವೆ ಜೀರ್ಣೋದ್ಧಾರ ಮಾಡುವುದು, ಕವಿ
ಗಳಿಗೆ, ಆಶ್ರಯವಿತ್ತು ಮಹಾಕಾವ್ಯಗಳನ್ನು ಬರೆ
ಸುವುದು, ಇಲ್ಲವೆ ಪ್ರತಿ ಮಾಡಿಸುವುದು ಜೈನ ಸ್ತ್ರೀಯರ
ಅನುಕರಣೀಯವಾದ ಆದರ್ಶ ಗುಣವಾಗಿದೆ. ಜೈನ
ಧರ್ಮದಲ್ಲಿ, ಜೈನ ಸಂಸ್ಕೃತಿಯಲ್ಲಿ ಮತ್ತು ಕಲೆಯಲ್ಲಿ
ಜೈನ ಮಹಿಳೆಯರಿಗೆ ಬಹಳ ಹಿಂದಿನಿಂದಲೂ ತುಂಬಾ
ಆಸಕ್ತಿ ಇರುವುದು ಕಾಣುತ್ತದೆ. ಇಂಥವರ ಹಿರಿಮೆ
ಯನ್ನು ಶಿಲಾಶಾಸನಗಳೂ, ಓಲೆಗರಿ ಗ್ರಂಥಗಳೂ
ಮತ್ತು ಇತರ ಸಾಹಿತ್ಯ ಕೃತಿಗಳೂ ಮುಕ್ತಕಂಠದಿಂದ
ಹೊಗಳಿವೆ. ಜೈನ ಸ್ತ್ರೀರತ್ನಗಳಾದ ಶ್ರೀದೇವಿ ಮತ್ತು
ಅನುಪಮಾದೇವಿಯವರಿಂದ ಆಗಿನ ಕಾಲದ ಸಮಾಜದಲ್ಲಿ
ಸ್ತ್ರೀಯರ ಸ್ಥಾನ ಉನ್ನತಿ ಪಡೆಯಿತು.

ದಕ್ಷಿಣ ಭಾರತದಲ್ಲಿ, ಅದರಲ್ಲಿಯೂ ಕರ್ನಾಟಕದಲ್ಲಿ
ಜೈನಧರ್ಮಕ್ಕೆ ತುಂಬಾ ತ್ಯಾಗ ಮಾಡಿ ಅನೇಕ ಬಸದಿ
ಗಳನ್ನು ಕಟ್ಟಿಸಿದ, ಕಡೆಗೆ ಸಲ್ಲೇಖನ ವ್ರತವನ್ನು
ಸ್ವೀಕರಿಸಿದವರ ಅನೇಕ ಉಲ್ಲೇಖಗಳು ಉಪಲಬ್ಧ
ವಾಗಿವೆ. ತಿಪಟೂರಿನ ಶಾಸನದಲ್ಲಿ; ನಿಸದಿಗಲ್ಲಿನಲ್ಲಿ ಸತಿ
ಹರ್ಯಲೆ ಸಮಾಧಿವಿಧಿಯಿಂದ ಮುಡಿಪಿದ ಸನ್ನಿವೇಶ
ವನ್ನು ಸ್ವಾರಸ್ಯವಾಗಿ ವರ್ಣಿಸಲಾಗಿದೆ. ಅವಳ ಬರ
ವನ್ನು ಕೇಳಿ ಅಮರಾವತಿಪುರದ ದೇವಿ ಸಂಕುಲವು
ಸಮಿಪಿಸಿ ನೂಪುರವನ್ನೂ, ಮುತ್ತಿನ ಹಾರವನ್ನೂ,
ಕಟಕ, ಕೇಯೂರ, ವಜ್ರದುಂಗರ ಹಾಗೂ ಮಾಣಿಕ್ಯದ
ಓಲೆಯನ್ನು ತೊಡಿಸಿ ತಾವು ತಂದ ದೇವಲೋಕದ
ವಿಮಾನವನ್ನು ಹತ್ತುವಂತೆ ಅವರು ಹರ್ಯಲೆಯನ್ನು
ಪ್ರಾರ್ಥಿಸುತ್ತಾರೆ:

ಏರಿ ವಿಮಾನಮಂ ಒರೆ ಸುರಾಂಗನೆಯರ್ ನಳಿ
ತ್ತೋಳ ನುಣ್ಪುಗರ್ ।
ತೋರುವಿನಂ ಮಹೋತ್ಸವದೆ ಸೇಸೆಯನಿಕ್ಕೆ
ಸುರಾನಕಸ್ವನಂ ॥
ಮಾರೆ ಘನಾಘನಧ್ವನಿಯನೆತ್ತಿದ ಸತ್ತಿಗೆ ಚಂದ್ರ
ಬಿಂಬಮಂ ।
ಬೀರೆ ವಿಲಾಸದಿಂ ಪಿಡಿದು ಚಾಮರಮಿಕ್ಕೆ
ಸಮಂತು ಪೊಕ್ಕಳಾ ।
ಸೀರೆ ಮಹಾನುಭಾವೆ ಸತಿ ಹರ್ಯಲದೇವಿ
ಸುರೇಂದ್ರಲೋಕಮಂ॥

ಐದು ಸಾಲಿನ ಈ ವೃತ್ತ ಕನ್ನಡ ಸಾಹಿತ್ಯದಲ್ಲಿ ಒಂದು
ಅಪೂರ್ವ ವೃತ್ತವಾಗಿದೆ ಇದರಲ್ಲಿ ನಿರೂಪಿತಳಾಗಿರುವ
ಸತಿ ಹರ್ಯಲೆಯ ಜೀವನ ಒಂದು ಅಪೂರ್ವ ವೃತ್ತಾಂತ
ವಾಗಿದೆ.

ರಾಷ್ಟ್ರಕೂಟದ ದೊರೆ ಎರಡನೆಯ ಕೃಷ್ಣನ ಕಾಲ
ದಲ್ಲಿದ್ದ ಜಕ್ಕಿಯಬ್ಬೆ ಎಂಬ ಜೈನ ಮಹಿಳೆ ತನ್ನ ಪತಿಯ
ಮರಣಾನಂತರ ನಾಗರಖಂಡಕ್ಕೆ ಗೌಡಿತಿಯಾದಳು.
ಚೆಲುವೆಯೂ, ಧೀರೆಯೂ ಆದ ಜಕ್ಕಿಯಬ್ಬೆ ನಾಗರ
ಖಂಡದ ಆಡಳಿತವನ್ನು ಸುಸೂತ್ರವಾಗಿ ನಡೆಸಿದಳು.
ಕಡೆಗೆ ಅವಳು ಈ ಪ್ರಾಪಂಚಿಕ ಸುಖದಿಂದ ವಿಮುಖ
ಳಾಗಿ ಸಲ್ಲೇಖನ ವ್ರತವನ್ನು ಸ್ವೀಕರಿಸಿದಳು. ಇವ
ರಂತೆ ಶಾಂತಲಾದೇವಿ, ಅತ್ತಿಮಬ್ಬೆ, ಗುಂಡಮಬ್ಬೆ,
ಸಾವಿಯಬ್ಬೆ, ಜಾಗಲದೇವಿ, ಚಟ್ಟಲದೇವಿ, ಬಾಚಲ
ದೇವಿ, ಏಚಲೆ ಮೊದಲಾದ ಹತ್ತಾರು ಜನ ಶ್ರೇಷ್ಠ

ಗುಣಸಂಪನ್ನರೂ ಸತೀ ಸಾಧ್ವಿಯರೂ ಆದ ಜೈನ ಸ್ತ್ರೀರತ್ನಗಳ ಬಾಳಿನ ಮಹೋನ್ನತಿಯನ್ನು ಕನ್ನಡನಾಡಿನ ಎಲ್ಲ ಭಾಗಗಳ ಶಿಲಾಶಾಸನಗಳೂ ಆಚಂದ್ರಾರ್ಕಸ್ಥಾಯಿಯಾಗಿ ಸಾರಿ ಹೇಳುತ್ತಿವೆ. ಹತ್ತನೆಯ ಶತಮಾನದ ಪೂರ್ವಾರ್ಧದಲ್ಲಿದ್ದ ಚಾಲುಕ್ಯ ಚಕ್ರವರ್ತಿ ಎರಡನೆಯ ದಂಡನಾಯಕನಾದ ಮಲ್ಲಪಯ್ಯನಿಗೆ ಅತ್ತಿಮಬ್ಬೆ ಮತ್ತು ಗುಂಡಮಬ್ಬೆ ಎಂಬಿಬ್ಬರು ಹೆಣ್ಣುಮಕ್ಕಳಿದ್ದರು. ಮಲ್ಲಪಯ್ಯ ವಿದ್ಯಾವಿಶಾರದನಾಗಿದ್ದನು.

ಮಲ್ಲಪಯ್ಯ ತನ್ನ ಈ ಹೆಣ್ಣುಮಕ್ಕಳಿಬ್ಬರನ್ನೂ ಚಾಲುಕ್ಯರ ಸೇನಾಧಿಪತಿಯಾಗಿದ್ದ ನಾಗದೇವನಿಗೆ ಕೊಟ್ಟು ಮದುವೆ ಮಾಡಿದನು. ಹೀಗಿರುವಾಗ ಒಮ್ಮೆ ಕಾಳಗದಲ್ಲಿ ಹೋರಾಡುವಾಗ ನಾಗದೇವ ಮರಣ ಹೊಂದಿದನು. ಆಗ ಗುಂಡಮಬ್ಬೆ ತನ್ನ ಪತಿಯೊಡನೆ 'ಸತಿ' ಅಥವಾ ಸಹಗಮನವನ್ನು ಆಚರಿಸಿದಳು. ಜೈನ ಮಹಿಳೆ ಹೀಗೆ ಸಹಗಮನವನ್ನು ಆಚರಿಸುವುದು ಒಂದು ಅಪರೂಪ ಪ್ರಸಂಗವಾಗಿದೆ. ಏಕೆಂದರೆ ಇಂಥ ಇತರ ಪ್ರಸಂಗಗಳು ದುರ್ಲಭ. ಅತ್ತಿಮಬ್ಬೆ ತನ್ನ ಮಗ ಅಣ್ಣಿಗದೇವನನ್ನು ರಕ್ಷಿಸಲು ಸತಿ ಆಚರಿಸದೆ ಉಳಿದಳು. ಅತ್ತಿಮಬ್ಬೆಗೆ ಬಾಲ್ಯದಿಂದಲೂ ಇದ್ದ ಜೈನಧರ್ಮದ ಆಸಕ್ತಿ-ಶ್ರದ್ಧೆ ದ್ವಿಗುಣಗೊಂಡಿತು. ಮಹಾಕವಿ ಪೊನ್ನನಿಂದ ರಚಿತವಾಗಿದ್ದ ಶಾಂತಿಪುರಾಣ ಕಾವ್ಯದ ಸಾವಿರ ಓಲೆ ಪ್ರತಿಗಳನ್ನು ಮಾಡಿಸಿ ಅದರ ಜೊತೆಗೆ ತೀರ್ಥಂಕರರ ಸಾವಿರ ಪ್ರತಿಮೆಗಳನ್ನೂ, ಆ ಪ್ರತಿಮೆಗಳನ್ನಿಡಲು ಸಾವಿರ ಮಂಟಪಗಳನ್ನೂ, ಸಾವಿರ ಜಯಘಂಟೆಗಳನ್ನೂ ಬಂಗಾರದಲ್ಲಿ ಮಾಡಿಸಿ ದಾನ ಮಾಡಿದಳು. ಇದರಿಂದ ದಾನ ಚಿಂತಾಮಣಿ ಅತ್ತಿಮಬ್ಬೆ ಎಂಬ ಶಾಶ್ವತ ಕೀರ್ತಿಗೆ ಪಾತ್ರಳಾದಳು. ಇದಲ್ಲದೆ ಮಹಾಕವಿ ರನ್ನನಿಂದ ಅಜಿತಪುರಾಣವನ್ನೂ ಬರೆಸಿದಳು. ರನ್ನ ತನ್ನ ಈ ಕಾವ್ಯದಲ್ಲಿ ಅತ್ತಿಮಬ್ಬೆಯ ಚರಿತವನ್ನು ಕುರಿತು—

ಬಿಳಿಯರಳೆಯಂತೆ, ಗಂಗಾ
ಜಳದಂತೆಸೆವಜಿತ-ಸೇನಮುನಿಪತಿಯ ಗುಣಾ-।
ವಳಿಯಂತೆ, ನೆಗಳ್ದ ಕೌಮುದಿ
ಚಳದಂತೆ, ಪವಿತ್ರಮತ್ತಿಮಬ್ಬೆಯ ಚರಿತಂ ॥

ಎಂದು ಮುಕ್ತಕಂಠದಿಂದ ಕೊಂಡಾಡಿದ್ದಾನೆ. ಈ ಕೊಂಡಾಟ ಕೇವಲ ಕವಿಯ ಕೃತಜ್ಞತೆಯ ಕಾಣಿಕೆಯಷ್ಟೇ ಆಗಿರದೆ ಅತ್ತಿಮಬ್ಬೆಯ ಧವಳ ಕೀರ್ತಿಯ ಔನ್ನತ್ಯವನ್ನೂ ಸಾರುವ, ಅವಳ ಪರಮ ಪವಿತ್ರ ಶೀಲದ ಅಕಳಂಕತೆಯನ್ನು ಬಿತ್ತರಿಸುವ ಅನ್ಯಾದೃಶ ಜಯ ಘೋಷವಾಗಿದೆ. ಅತ್ತಿಮಬ್ಬೆಯಂತಹ ಇನ್ನೊಬ್ಬ ಮಹಿಳೆ, ಜೈನ ಮಹಿಳೆಯರ ಶ್ರೇಣಿಯಲ್ಲೇ ಏಕೆ, ಜಗತ್ತಿನ ಸ್ತ್ರೀಯರ ಸಾಲಿನಲ್ಲೇ ಅಗ್ರಮಾನ್ಯಳಾಗಿ ಅಲಂಕರಿಸುವಾಕೆ ದೊರೆಯುವುದಿಲ್ಲ.

ಪ್ರಸಿದ್ಧ ಸೇನಾಧಿಕಾರಿಯಾದ ಗಂಗರಾಜನ ಪತ್ನಿ ಅಕ್ಕಲೆ ವ್ಯಾಪಾರದಲ್ಲಿ ಸತ್ಯದಂತೆ, ಯುದ್ಧದಲ್ಲಿ ಜಯದೇವತೆಯಂತೆ ಇದ್ದಳು. ೧೧೧೮ ರಲ್ಲಿ ಶ್ರವಣಬೆಳಗೊಳದಲ್ಲಿ ಜಿನಾಲಯವನ್ನು ಕಟ್ಟಿಸಿ, ಅನ್ನ, ವಸತಿ, ಔಷಧಿ ಮತ್ತು ವಿದ್ಯಾದಾನಗಳನ್ನು ಮಾಡಿದಳು. ಹೊಯ್ಸಳ ವಿಷ್ಣುವರ್ಧನನ ಮಹಾರಾಣಿ ಶಾಂತಲಾದೇವಿ ಲಾವಣ್ಯವತಿಯೂ, ನೃತ್ಯಪ್ರವೀಣೆಯೂ, ಲಲಿತಕಲೋಪಾಸಕಿ ಆಗಿದ್ದಳು. ಕ್ರಿ.ಶ. ೧೧೨೩ರಲ್ಲಿ ಈಕೆ ಶ್ರವಣಬೆಳಗೊಳದಲ್ಲಿ ಒಂದು ಬಸದಿ ಕಟ್ಟಿಸಿ, ಒಂದು ಉದ್ಯಾನವನವನ್ನು ಮಾಡಿಸಿ, ಭಕ್ತ ಜನರ ನಿತ್ಯಪೂಜೆಗೋಸ್ಕರ ಒಂದು ಹಳ್ಳಿಯನ್ನೇ ದತ್ತಿಯಾಗಿ ಬಿಟ್ಟುಕೊಟ್ಟಳು. ಹತ್ತಾರು ಶಿಲಾಶಾಸನಗಳು ಈ ಜೈನ ಮಹಿಳೆಯಾದ ಶಾಂತಲಾದೇವಿಯು ಎಸಗಿದ ಜೈನಧರ್ಮದ ಪ್ರಚಾರ ಕಾರ್ಯವನ್ನು ಪ್ರಶಂಸಿಸಿವೆ.

ಇದರಂತೆ ಹೊಯ್ಸಳ ರಾಜಮನೆತನದ ಪ್ರಸಿದ್ಧ ದೊರೆಯಾದ ಬಲ್ಲಾಳನ ಆಸ್ಥಾನವನ್ನು ಬೆಳಗಿಸಿದ ಕೀರ್ತಿ ಕಂತಿಯದು. ಕನ್ನಡ ಸಾಹಿತ್ಯದಲ್ಲಿ ಕಂತಿ ಮೊಟ್ಟ ಮೊದಲನೆಯ ಕಬ್ಬಿಗಿತಿ. ಅಭಿನವ ಪಂಪನಾದ ನಾಗಚಂದ್ರನು ಈ ಬಲ್ಲಾಳನ ಆಸ್ಥಾನ ಕವಿಯಾಗಿದ್ದ ಕಂತಿಯ ಸಮಕಾಲೀನನು. ಕಂತಿ ಮತ್ತು ನಾಗಚಂದ್ರನಿಗೆ ಆಗಾಗ್ಗೆ ಕಾವ್ಯರಚನೆಯ ವಿಚಾರದಲ್ಲಿ ಸ್ಪರ್ಧೆ ನಡೆಯುತ್ತಿತ್ತು. ನಾಗಚಂದ್ರ ಮತ್ತು ಕಂತಿಯರು ಪರಸ್ಪರರ ಕಾವ್ಯಶಕ್ತಿಯ ಒರೆಗಲ್ಲಿನಂತಿದ್ದರು. ಕಂತಿ-ಹಂಪರ ಸಮಸ್ಯೆಗಳು ಕನ್ನಡ ಸಾಹಿತ್ಯದಲ್ಲಿ ಸ್ವಾರಸ್ಯವಾದ ಭಾಗವಾಗಿವೆ. ಕಂತಿ ಸಾಮಾನ್ಯ ಮನೆತನದಲ್ಲಿ ಹುಟ್ಟಿದರೂ ತನ್ನ ಪ್ರತಿಭೆಯ ಪ್ರಭಾವದಿಂದ ರಾಜಾ

ಸ್ಥಾನದ ಕವಿಗಳಲ್ಲಿ ತನ್ನ ಸ್ಥಾನವನ್ನು ಗಳಿಸಿಕೊಂಡಿದ್ದಳು. ಕಂತಿಯ ಕೀರ್ತಿ, ಪ್ರತಿಭೆ, ಪಾಂಡಿತ್ಯಗಳು ಎಷ್ಟಿತ್ತೆಂದರೆ ಅಭಿನವ ಪಂಪನಾದ ನಾಗಚಂದ್ರನಿಗೆ ಅವಳಿಂದ ಹೊಗಳಿಸಿಕೊಳ್ಳಬೇಕೆಂಬ ಇಚ್ಛೆ ಉಂಟಾಯಿತು. ಆದರೆ ಕಂತಿ, ಅವನಲ್ಲಿ ತುಂಬ ಗೌರವದ ಭಾವನೆ ಇದ್ದರೂ, ಅದನ್ನು ಹೊರಗೆ ಎಂದೂ ವ್ಯಕ್ತಪಡಿಸಲಿಲ್ಲ. ಅದರಿಂದ ನಾಗಚಂದ್ರ ಒಂದು ಉಪಾಯ ಹೂಡಿದನು. ಒಂದು ದಿನ ಬೆಳಗ್ಗೆ ತಾನು ಸತ್ತು ಹೋದಂತೆ ಸುದ್ದಿ ಹಬ್ಬಿಸಿ, ತಾನು ಮಲಗಿ ಬಿಟ್ಟನು. ನಗರದಲ್ಲೆಲ್ಲಾ ನಾಗಚಂದ್ರನ ಸಾವಿನ ಸುದ್ದಿ ಹಬ್ಬಿತು. ಇದನ್ನು ಕೇಳಿದ ಕಂತಿ ಕೂಡಲೇ 'ಕವಿಗಳಲ್ಲೆಲ್ಲಾ ನೀನೇ ರಾಜ' ಎಂದು ಬಗೆಬಗೆಯಾಗಿ ಹೊಗಳಿ ದುಃಖಪಟ್ಟಳು. ಅದನ್ನು ಆಲಿಸಿದ ನಾಗಚಂದ್ರ ಒಡನೆಯೇ ತನ್ನ ಬಹುದಿನದ ಬಯಕೆ ತೀರಿತೆಂದು ಎದ್ದು ಕುಳಿತ. ಅನೇಕ ವರ್ಷಗಳಾದ ಮೇಲೆ, ೧೫೬೦ರಲ್ಲಿ ಇದ್ದ ಬಾಹುಬಲಿಯೆಂಬ ಕನ್ನಡಕವಿ ಕಂತಿಯನ್ನು ಕುರಿತು 'ಅಭಿನವ ವಾಗ್ದೇವಿ'ಯೆಂದು ಕರೆದು, ಮುಕ್ತಕಂಠದಿಂದ ಹೊಗಳಿದ್ದಾನೆ. ಜಗತ್ತಿನ ಸಾಹಿತ್ಯದಲ್ಲೇ ಈ ತೆರನಾದ ಸರಸ ಸಾಹಿತ್ಯ ಅಪೂರ್ವ. ಜೈನ ಸ್ತ್ರೀಯಾದ ಕಂತಿಯ ಕವಿತಾ ಪ್ರೌಢಿಮೆಯನ್ನು ಸಾರುವ ಇಂಥದೇ ಸನ್ನಿವೇಶ, ಸಂಸ್ಕೃತದಲ್ಲಿ ದಂಡಿ ಮತ್ತು ವಿಜ್ಜಿಕೆಯರ ಪ್ರಸಂಗದಲ್ಲಿ ದೊರೆಯುತ್ತದೆ.

ಹೀಗೆ ಜೈನ ಮಹಿಳೆಯರು ದಾನಿಗಳಾಗಿ, ಅನನ್ಯ ಪತಿಭಕ್ತೆಯರಾಗಿ, ಕಂತಿ (ಅಜ್ಜಿಕೆ)ಯರಾಗಿ, ತ್ಯಾಗಿಗಳಾಗಿ, ಆದರ್ಶಮಾತೆಯರಾಗಿ, ಕಬ್ಬಿಗಿತಿಯರಾಗಿ, ಮತೋದ್ಧಾರಕರಾಗಿ, ಧರ್ಮದೇವತೆಯರಾಗಿ, ಜಂಗಮ ಜಿನಶಾಸನದಂತೆ ಶೋಭಿಸಿ, ಘನತೆ ಗೌರವಗಳಿಂದ ಲೋಕವಿಖ್ಯಾತರಾಗಿದ್ದಾರೆ. ಜೈನ ಮಹಿಳೆಯರ ಆದರ್ಶ ಗುಣಗಳ ಸಮೂಹದ ಸಾರವನ್ನು ನಮ್ಮ ಸಪ್ಪೆ ಮಾತುಗಳಲ್ಲಿ ಸ್ತುತಿಸಲೂ, ವಿವರಿಸಲೂ ಸಾಧ್ಯವಿಲ್ಲ. ಆದುದರಿಂದ ಅವರನ್ನು ಕನ್ನಡ ಕವಿಯೊಬ್ಬ ಹೇಗೆ ಹೊಗಳಿದ್ದಾನೆಂಬುದನ್ನು ಆಲಿಸೋಣ.

ಗುಣದೊಳ್ ರೂಪಿನೊಳ್ ಒಳ್ಪಿನೊಳ್ ಸೊಬಗಿ
ನೊಳ್ ಶೃಂಗಾರದೊಳ್ ಸೌಮ್ಯಲ
ಕ್ಷಣದೊಳ್ ವೈಮೆಯೊಳ್ ಓಜೆಯೊಳ್ ವಿಭವ
ದೊಳ್ ಶೀಲಂಗಳೊಳ್ ಭೃತ್ಯಪ್ರೋ ||
ಪಣದೊಳ್ ಭೋಗದೊಳಾರ್ಪಿನೊಳ್ ವಿಭುತೆ
ಯೊಳ್ ಕಾರುಣ್ಯದೊಳ್ ಪ್ರೋಲ್ಲಿಸ
ಜೈನೆಯಾರ್ ಗೆಲ್ಕೆ ಬೆಡಂಗಿಗೆಂದನುದಿನಂ ವಿದ್ವ
ಜ್ಜನಂ ಬಣ್ಣಿಕುಂ ||

ಹೌದು, ಈ ಅನಂತ ಗುಣಗಳಿಗೆ, ಗಣಿಯಂತೆ, ಆಗರವಾಗಿರುವ ಜೈನ ಮಹಿಳೆಯರನ್ನು ಅನುದಿನವೂ ವಿದ್ವಜ್ಜನರು ಬಣ್ಣಿಸುವುದರಲ್ಲಿ ಆಶ್ಚರ್ಯವೇನು ? ಈ ಗುಣಗಳು ಇಂದಿನ ಜೈನ ಸ್ತ್ರೀಯರಿಗೇ ಏಕೆ, ಎಲ್ಲರಿಗೂ ಆದರ್ಶವಾಗಿರಲಿ, ಸ್ಫೂರ್ತಿ ನೀಡುತ್ತಿರಲಿ.

---

ಜೈನಧರ್ಮಾವಲಂಬಿಗಳು ಭಾರತದಲ್ಲಿ ಒಂದು ವ್ಯವಸ್ಥಾಬದ್ಧ ಸಮಾಜದವರಾಗಿದ್ದಾರೆ. ಪ್ರಾಚೀನಕಾಲದಿಂದಲೂ ಆದರ್ಶವಾಗಿ ಬಾಳಿದ ಮಹಿಳಾಪ್ರಪಂಚದ ಹಲವಾರು ಸ್ತ್ರೀರತ್ನಗಳ ಸ್ಥೂಲನೋಟವೊಂದನ್ನು ಸಂಗ್ರಹವಾಗಿ ಅಭ್ಯಾಸಪೂರ್ಣವಾಗಿ ಪ್ರಸಿದ್ಧ ಲೇಖಿಕೆಯರಾದ ಶ್ರೀಮತಿ ಕಮಲಾ ಹಂಪನಾ ಎಂ.ಎ.ರವರು ಬರೆದು ನಮ್ಮ ವಾಚಕರಿಗೆ ಅರ್ಪಿಸಿ ಉಪಕಾರ ಮಾಡಿದ್ದಾರೆ.

ಸಂ.

# ರಮಣೀಯ ನಿಸರ್ಗ ಸೌಂದರ್ಯದ ಮಡಿಲಲ್ಲಿ ದಕ್ಷಿಣಕಾಶಿ ಶಿವಗಂಗೆ

ಕೆ. ಪಿ. ಶಿವಲಿಂಗಯ್ಯ

ಭಾರತ ತನ್ನ ಸಂಸ್ಕೃತಿಗೆ ಹೇಗೆ ಪ್ರಸಿದ್ಧವೊ, ಹಾಗೆಯೇ ಪವಿತ್ರ ಕ್ಷೇತ್ರಗಳಿಗೂ ಹೆಸರುವಾಸಿಯಾಗಿದೆ ಅಂತಹ ಸುಕ್ಷೇತ್ರಗಳಲ್ಲಿ ಶಿವಗಂಗೆ ಬಹಳ ಮುಖ್ಯವಾದುದು. ಅನಾದಿ ಕಾಲದಿಂದಲೂ ಶಾಸನ ಮತ್ತು ಪೌರಾಣಿಕ ಗ್ರಂಥಗಳಲ್ಲಿ ಈ ಕ್ಷೇತ್ರವನ್ನು "ದಕ್ಷಿಣಕಾಶಿ"ಯೆಂದು ಕರೆಯಲಾಗಿದೆ

ಬೆಂಗಳೂರು ಜಿಲ್ಲೆಯ ನೆಲಮಂಗಲ ತಾಲ್ಲೂಕಿಗೆ ಸೇರಿದ ಈ ಕ್ಷೇತ್ರ ಸೋಂಪುರ ಅಥವಾ ಡಾಬ್ಸ್‌ಪೇಟೆಯ ದಕ್ಷಿಣಕ್ಕೆ ಸುಮಾರು ಮೂರು ಮೈಲಿಗಳ ದೂರದಲ್ಲಿದೆ. ಸಮುದ್ರ ಮಟ್ಟದಿಂದ 4559 ಅಡಿಗಳ ಎತ್ತರದ ಬೆಟ್ಟವಿದೆ. ಈ ಬೆಟ್ಟವೇ ಕಕುದ್ಗಿರಿ ಬೆಟ್ಟ, ಶಿವಗಂಗಾ ಬೆಟ್ಟ ಇತ್ಯಾದಿ ಕರೆಯಿಸಿಕೊಳ್ಳುವ ದಕ್ಷಿಣಕಾಶಿಯೆಂಬ ಪ್ರಖ್ಯಾತಿ ಪಡೆದಿದೆ. ಈ ಬೆಟ್ಟದಲ್ಲಿರುವ ಅನೇಕ ದೇವಾಲಯಗಳು, ತೀರ್ಥಕುಂಡಗಳು ಇದರ ದಿವ್ಯ ಭವ್ಯ ಪ್ರಾಚೀನ ಐತಿಹಾಸಿಕ ಮೌಲ್ಯಗಳ ಬಗೆಗೆ ಅನೇಕ ವಿಷಯಗಳನ್ನು ತಮ್ಮ ನಿರವಾಣಿಯಿಂದಲೇ ಸಾರುತ್ತಿವೆ. ನೋಡುವ ಕಣ್ಣು, ಕೇಳುವ ಕಿವಿ ಮಾತ್ರಬೇಕು.

'ಕಕುದ್ಗಿರಿ' ಯೆಂಬುದಾಗಿ ಈ ಕ್ಷೇತ್ರ ಪುರಾಣಗಳಲ್ಲಿ ಹೆಸರು ಪಡೆದಿದೆ : ಪರಮೇಶ್ವರನ ಆಜ್ಞೆಯಂತೆ ಪಾರ್ವತೀ ದೇವಿಗೆ ಭೂಲೋಕವನ್ನು ತೋರಿಸಲು ಬಂದ ನಂದೀಶ್ವರನು ಈ ಬೆಟ್ಟವನ್ನು ತನ್ನ ಕತ್ತಿನ (ಕಕುತ್) ಮೇಲೆ ಹೊತ್ತು ಅನಂತಕಾಲ ತಪಸ್ಸನ್ನಾಚರಿಸಿದನೆಂದೂ, ಆ ಕಾರಣದಿಂದ ಈ ಪರ್ವತಕ್ಕೆ ಕಕುದ್ಗಿರಿಯೆಂಬ ಹೆಸರು ಬಂದಿತೆಂದೂ ಸ್ಥಳ ಪುರಾಣದಿಂದ ಗೊತ್ತಾಗುತ್ತದೆ.

ಈ ಕ್ಷೇತ್ರದಲ್ಲಿ ದೃಗ್ಗೋಚರವಾಗುತ್ತಿರುವ ಅವಶೇಷಗಳಿಂದ ಸುಮಾರು 2000 ವರ್ಷಗಳಷ್ಟು ಚರಿತ್ರೆ ಕಾಣಸಿಗುವುದೆಂದು ಸಂಶೋಧಕರು ಅಭಿಪ್ರಾಯಪಟ್ಟಿದ್ದಾರೆ.

ಶಿವಗಂಗೆಗೆ ಸುಮಾರು 6 ಮೈಲಿಗಳ ಈಶಾನ್ಯಕ್ಕಿರುವ 'ಮಣ್ಣೆ' ಗ್ರಾಮವು ಹಿಂದೆ *1 ಒಂದು ದೊಡ್ಡ ರಾಜಧಾನಿಯಾಗಿದ್ದು, 'ಮಾನ್ಯಪುರ—ಮಣಿಪುರ—ರತ್ನಪುರಿ' ಮುಂತಾದ ಹೆಸರುಗಳಿಂದ ಶೋಭಿಸುತ್ತಿದ್ದಿತು. ಅಲ್ಲಿ ಆಳಿದ ಅನೇಕ ಅರಸರು (ಸೋಮಶೇಖರ-ಚಿತ್ರಶೇಖರರು ಕೂಡ ಇಲ್ಲಿ ಆಳಿ ಈಗಲೂ ಅತ್ಯಂತ ಮನೋಹರವಾಗಿ ಕಂಗೊಳಿಸುವ ಸೋಮೇಶ್ವರ ದೇವಾಲಯವನ್ನು ಕಟ್ಟಿಸಿದರೆಂಬ ಒಂದು ಹೇಳಿಕೆಯುಂಟು) ಈ ಕ್ಷೇತ್ರದ ಅಧಿದೈವವಾದ ಗಂಗಾಧರೇಶ್ವರನ ಸೇವೆಮಾಡಿ ಧನ್ಯರಾದವರು.

ಕನ್ನಡನಾಡಿನ ಹೆಸರಾಂತ ರಾಜ-ಮನೆತನಗಳಾದ ಗಂಗ, ಹೊಯ್ಸಳ ರಾಜರೂ, ವಿಜಯನಗರದ ಅರಸರೂ ಯಲಹಂಕನಾಡ ಪ್ರಭುಗಳೂ ಶಿವಗಂಗಾ ಕ್ಷೇತ್ರದ ಅಭಿವೃದ್ಧಿಗಾಗಿ ಶ್ರಮಿಸಿದರು. ಅವರಲ್ಲೆಲ್ಲ ಮಾಗಡಿ ಕೆಂಪೇಗೌಡನು ಗಂಗಾಧರೇಶ್ವರ ಸ್ವಾಮಿಯ ಪರಮಭಕ್ತನೆನಿಸಿ, ಇಲ್ಲಿನ ದೇವಾಲಯಗಳನ್ನೂ ಮಠಗಳನ್ನೂ ಬಹುಮಟ್ಟಿಗೆ ಜೀರ್ಣೋದ್ಧಾರಮಾಡಿ ಖ್ಯಾತನಾಮನಾಗಿರುತ್ತಾನೆ.

ಶಿವಗಂಗೆ-ಬೆಟ್ಟದ ತುಂಬ ಅಸಂಖ್ಯಾಂತ ಗವಿಗಳುಂಟು. ಅವುಗಳಲ್ಲಿ ಕಾಲಧರ್ಮಕ್ಕನುಗುಣವಾಗಿ ಹಲವು ಮುಚ್ಚಿಹೋಗಿರುತ್ತವೆ. ಪ್ರಾರಂಭದಲ್ಲಿ ಅನೇಕಾನೇಕ (ಪ್ರಾಚೀನ) ಋಷಿಮುನಿಗಳೂ, ಅನಂತರದಲ್ಲಿ ಜೈನ ಹಾಗೂ ಬೌದ್ಧ ಸಾಧುಗಳೂ ಇಲ್ಲಿನ ಗುಹೆಗಳಲ್ಲಿ ತಪಸ್ಸು ಮಾಡಿದ ಸಂಭವವುಂಟು. ಇಲ್ಲಿರುವ ಗುಹೆಗಳೆಲ್ಲ ನಿಸರ್ಗದಿಂದಲೇ ನಿರ್ಮಿತವಾದವು. ಸ್ವತಃ ಕಲ್ಲುಮನೆಗಳಂತಿದ್ದ ಹುಟ್ಟು

* 1 Gangas of Talkad

ಬಂಡೆಗಳಿಗೆ ಬಾಗಿಲುಗಳನ್ನು ನಿರ್ಮಿಸಿ ಅವುಗಳ ಮೇಲೆ ತಕ್ಕ ಗೋಪುರಗಳನ್ನೇರಿಸಿರುವುದು ಕಂಡು ಬರುತ್ತದೆ.

ಗಂಗಾಧರೇಶ್ವರನ ಗುಡಿ, ಹೊನ್ನಾದೇವಿಯ ಗುಹೆ, ಮೇಲಣಗವಿ, ಕೆಳಗಣಗವಿ—ಇವು ಇಲ್ಲಿನ ಗವಿಗಳಲ್ಲಿ ಮುಖ್ಯವಾದವು.

ಬೆಟ್ಟದ ಉತ್ತರ ಭಾಗದಲ್ಲಿರುವ ಗಂಗಾಧರೇಶ್ವರ, ಹೊನ್ನಾದೇವಿ—ಗುಡಿಗಳೆರಡೂ ದ್ವಾರ-ಮಂಟಪಗಳನ್ನು ಜೋಡಿಸಿದ್ದರೂ ಪ್ರಥಮತಃ ಸಹಜವಾದ ಗವಿಗಳು. ಗಂಗಾಧರೇಶ್ವರನ ಗುಡಿ ಸ್ವಾಭಾವಿಕ ಕಲ್ಲು ಮನೆಯಾದ್ದರಿಂದ, ಕಂಬಗಳೇ ಬೇಕಿಲ್ಲ. ಆದರೂ ಮೂಲಸ್ವಾಮಿಯ ಎದುರು ಎರಡು ಹಿತ್ತಾಳೆ ಕಂಬಗಳಿವೆ. ಲಿಂಗವು ಪೂರ್ವಾಭಿಮುಖವಾಗಿದೆ. ಗವಿಯೊಳಗಡೆ ಗಣಪತಿ, ಹರಿಹರ ಮತ್ತು ಸುಬ್ರಹ್ಮಣ್ಯ ಮುಂತಾದ ಮೂರ್ತಿಗಳ ಬೇರೆ ಬೇರೆಯಾಗಿ ಪ್ರತಿಷ್ಠಿತವಾಗಿವೆ. ಇಲ್ಲಿರುವ ಪ್ರತಿಮೆಗಳಲ್ಲಿ ಒಂದು ಕೆಂಪೇಗೌಡನದು; ಇನ್ನೊಂದು ಊಳಿಗದ ಬಸವಯ್ಯನದು; ಮತ್ತೊಂದು ಕೆಂಪೇಗೌಡನ ಸಂಬಂಧಿಯದು. ಇವು ಕ್ರಿ. ಶ. 1608ರಲ್ಲಿ ರೂಪುಗೊಂಡವೆಂದು ತಿಳಿದು ಬಂದಿದೆ.

ಈ ದೇವಾಲಯದ ಮಹಾದ್ವಾರಕ್ಕೂ ಗವಿಯ ಭಾಗಕ್ಕೂ ಮಧ್ಯೆ ಇರುವ ಕಲ್ಯಾಣ ಮಂಟಪ ಒಂದು ಸುಂದರ ಚಿತ್ರಣ. ಇಲ್ಲಿನ ನಾಲ್ಕು ಕಂಬಗಳು ಹದಿನಾರು ಮುಖದವು. ನಂದಿ ಮಂಟಪದಲ್ಲಿಯೂ ಇದೇ ತೆರನ ನಾಲ್ಕು ಕಂಬಗಳಿವೆ. ಅವುಗಳ ಪೀಠದ ಮೇಲೆ ಕ್ರಿ. ಶ. 1196ರಲ್ಲಿ ರಚಿತವಾದವೆಂದು ತಿಳಿಸುವ ಶಾಸನಗಳಿವೆ. ಗರ್ಭಗೃಹದಲ್ಲಿನ ಲಿಂಗಮೂರ್ತಿ ಎಂಟು ಅಡಿಗಳ ಎತ್ತರದ್ದು. ಇದರ ಸೃಷ್ಟಿ (ನಿರ್ಮಿತಿ) ಯಾವಾಗ ಆಯಿತೆಂದು ಹೇಳುವುದು ಕಷ್ಟ.

ಗಂಗಾಧರೇಶ್ವರನ ಗುಡಿಯ ಉತ್ತರಕ್ಕಿರುವುದೇ ಹೊನ್ನಾದೇವಿಯ ಗುಹೆ. ಪೂರ್ವಾಭಿಮುಖವಾಗಿದೆ. ಐದಡಿಗಳಷ್ಟು ಎತ್ತರದ ಮೂರ್ತಿ. ಎಂಟು ಕೈಗಳಿವೆ. ಸ್ವರ್ಣಾಂಬಾ ಎನ್ನುವ ಸಂಸ್ಕೃತ ಪದದ ಕನ್ನಡ ಭಾಷಾಂತರವೇ ಹೊನ್ನಾದೇವಿ. *2 ದೇವಿಯ ಕಂಠಾಭರಣವು ಮುಮ್ಮಡಿ ಕೃಷ್ಣರಾಜ ಒಡೆಯರ ತಂದೆಯವರಾದ ಚಾಮರಾಜ ಒಡೆಯರ ಮಹಾರಾಣಿಯವರ ಲ್ಲೊಬ್ಬರಾದ ದೇವರಾಜಮ್ಮಣ್ಣಿಯವರು ಕೊಟ್ಟಿದ್ದೆಂದು ಅದರಲ್ಲಿನ ಬರಹದಿಂದ ತಿಳಿದು ಬರುತ್ತದೆ.

ಬೆಟ್ಟದ ಮೇಲೆ ಈಗಲೂ ಎಂಟು ತೀರ್ಥಗಳುಂಟು. (ಹಿಂದೆ ಅಸಂಖ್ಯ ತೀರ್ಥಗಳಿದ್ದು ಈಚೆಗೆ ಅನೇಕವು ಕಣ್ಮರೆಯಾಗಿರುವುದಾಗಿ ಸ್ಥಳಪುರಾಣದಿಂದ ತಿಳಿದು ಬರುತ್ತದೆ) ಆ ಪೈಕಿ ಹೊನ್ನಾದೇವಿ ಗುಡಿಯ ಪಶ್ಚಿಮಕ್ಕೆ 'ಪಾತಾಳಗಂಗೆ' ಎಂಬ ಹೆಸರಿನಿಂದ ಪ್ರಖ್ಯಾತವಾಗಿರುವ ಗುಹಾಂತರ ಸರೋವರ ಪ್ರಮುಖವಾದುದು. ಇದರ ಸಮೀಪದ ಬಂಡೆಯ ಮೇಲೆ ವೀರಭದ್ರ ಮೂರ್ತಿಯನ್ನು ಕೆತ್ತಲಾಗಿದೆ. ಈ ಪಾತಾಳಗಂಗೆಗೂ ಮಾಗಡಿ ತಾಲ್ಲೂಕು ಕುದೂರು ಗ್ರಾಮದ ಬಳಿಯಿರುವ ಅಂತರಗಂಗೆಗೂ ಸಂಪರ್ಕವಿದೆಯೆಂದೂ, ಒಮ್ಮೆ ಇಲ್ಲಿ ತೇಲಿಬಿಟ್ಟ ತೊಟ್ಟಿಲು ಮಾರನೆಯ ದಿನ ಅಲ್ಲಿ ಕಾಣಿಸಿಕೊಂಡಿತೆಂದೂ ವಯೋವೃದ್ಧರಾದ ಜನ ಹೇಳುತ್ತಾರೆ. ಈ ತೀರ್ಥದ ಪೂರ್ವಕ್ಕೆ ರಾಚೋಟಿ ಮಠವೆಂಬ ಲಿಂಗಾಯತ ಸಂಸ್ಥೆಯಿದೆ. ಈ ಮಠಕ್ಕೂ ಪಾತಾಳಗಂಗೆಗೂ ಮಧ್ಯೆ ಹಿಂದಣ ಗುರುಗಳ ಸಮಾಧಿ ಅಥವಾ ಗದ್ದುಗೆಗಳಿವೆ.

ಬೆಟ್ಟದ ಮಧ್ಯಭಾಗದ ಸುಮಾರಿನಲ್ಲಿ ಮೇಲಣ ಗವಿಮಠವೂ, ಹೊನ್ನಾದೇವಿಯ ಗುಡಿ ಹಿಂದೆ ಕೆಳಗಣ ಗವಿಮಠವೂ ಇವೆ.

ಮೇಲಿನದು ಬಾಳಹಳ್ಳಿ ರೇಣುಕಾಚಾರ್ಯರ ಮಠಕ್ಕೆ ಸೇರಿದ್ದು: ಪ್ರಖ್ಯಾತ ವೀರಶೈವ ಕವಿಯಾದ ಗುಬ್ಬಿ ಮಲ್ಲಣಾರ್ಯನು ಕ್ರಿ. ಶ. 1530 ರಲ್ಲಿ ರಚಿಸಿರುವ ತನ್ನ ವೀರಶೈವಾಮೃತ ಪುರಾಣವೆಂಬ ಗ್ರಂಥದಲ್ಲಿ ಈ ಮಠದ ಗುರುಪರಂಪರೆಯನ್ನು ಹೆಸರಿಸಿ, ತಾನೂ ಅವರುಗಳ ಪೈಕಿ ಶಾಂತಸಂಜೇಶ ಸ್ವಾಮಿಗಳ ಶಿಷ್ಯನೆಂದು ಹೇಳಿಕೊಂಡಿದ್ದಾನೆ. ರೇವಣ್ಣಸಿದ್ಧರ ಪುತ್ರನೂ ಶಿಷ್ಯನೂ ಆದ ರುದ್ರಮುನಿಸ್ವಾಮಿಯು ಕಲ್ಯಾಣ ಕ್ರಾಂತಿಯನಂತರ ಈ ಮಠ

* 2 ಹನ್ನೆರಡನೆಯ ಶತಮಾನದಲ್ಲಿ ಕಲ್ಯಾಣ ಪಟ್ಟಣವಲ್ಲ ಕ್ರಾಂತಿಯಾದ ಮೇಲೆ ಅಲ್ಲಿಂದ ಕೆಲವು ಮಂದಿ ಶರಣರು ಶಿವಗಂಗೆಗೆ ಬಂದು ಹೊನ್ನಮ್ಮನೆಂಬ ಶಿವಶರಣೆಯಿಂದ ಕಂಕಣ ಪಡೆದರೆಂದು ಚೆನ್ನಬಸವ ಪುರಾಣದಲ್ಲಿ ವಿರೂಪಾಕ್ಷ ಪಂಡಿತ ಹೇಳಿದ್ದಾನೆ.

ವನ್ನು ಸ್ಥಾಪಿಸಿ, ಇದನ್ನೇ ವೀರಶೈವ ಸಂಸ್ಕೃತಿ ಪ್ರಸಾರ ಕೇಂದ್ರವನ್ನಾಗಿ ಮಾಡಿಕೊಂಡು ಬಸವಣ್ಣನವರು ಪ್ರಾರಂಭಿಸಿದ ಕಾರ್ಯವನ್ನು ಮುಂದುವರಿಸಲು ಪ್ರಯತ್ನ ನಡೆಸಿದ್ದುಂಟು. ಬಹುಶಃ ಈತನ ಪ್ರಯತ್ನದಿಂದಲೇ ಈ ಪ್ರಾಂತದಲ್ಲಿ ಅಸಂಖ್ಯಾತ ವೀರಶೈವ ಮಠಗಳು ಹುಟ್ಟಿಕೊಂಡು ಸಾಧ್ಯವಾದಷ್ಟು ಆ ದಿಶೆಯಲ್ಲಿ ಕೆಲಸ ಮಾಡಲು ತೊಡಗಿದವು ಎಂದು ಊಹಿಸಲವಕಾಶವಿದೆ. ಒಂದೂವರೆ ಅಡಿ ಎತ್ತರದ ರುದ್ರಮುನಿಸ್ವಾಮಿಯ ಮೂರ್ತಿ ಇಲ್ಲಿದೆ. ಇದರ ಪಕ್ಕದಲ್ಲಿಯೇ 'ಒರಳುತೀರ್ಥ'ವಿದೆ. ಇದರಲ್ಲಿನ ಜಲ್ಲ ಕೈಗೆ ನಿಲುಕಿದವರೇ ಪುಣ್ಯವಂತರೆಂಬ ನಂಬುಗೆ ಇಂದಿಗೂ ಪ್ರಚಲಿತವಾಗಿದೆ. ಈ ಮಠದ ಹಿಂಭಾಗದಲ್ಲಿರುವುದೇ 'ಕುಂಭಾವತಿ'ತೀರ್ಥ. 'ಜಾಜಿ ದೊಣೆ'ಯೆಂಬೊಂದು ತೀರ್ಥವೂ ಈ ಮಠಕ್ಕೆ ಸಮೀಪದಲ್ಲಿದೆ. ಮೇಲಣಗವಿಮಠದ ಕೆಲವು ಪಾತ್ರೆಗಳ ಮೇಲೆ ಮುಮ್ಮಡಿ ಕೃಷ್ಣರಾಜ ಒಡೆಯರು ಕೊಟ್ಟದ್ದೆಂದು ಬರೆದ ಬರಹವಿದೆ.

ಕೆಳಗಣ ಗವಿ ಮಠವನ್ನು ಹೊನ್ನಮ್ಮ-ಗವಿಮಠವೆಂದು ಕರೆಯುವುದೇ ಹೆಚ್ಚಾಗಿ ರೂಢಿಯಲ್ಲಿದೆ. ಈ ಮಠದಲ್ಲಿ ನೋಡಬೇಕಾದ ಶಿಲ್ಪಸ್ತಂಭಗಳಿವೆ. ಇತ್ತೀಚಿಗೆ ಈ ಮಠದ ಸ್ವಾಮಿಗಳು ಜನತೆಯ ಸೌಕರ್ಯಕ್ಕಾಗಿ ಊರಿಗೆ ಸಮೀಪದಲ್ಲಿ ಮಠಕ್ಕೆ ಸೇರಿದ ಜಮೀನಿನಲ್ಲಿ ಹೊಸ ಮಠವೊಂದನ್ನು ಕಟ್ಟಿಸಿ, ಸಂಸ್ಕೃತ ಪಾಠಶಾಲೆ ಹಾಗೂ ಉಚಿತ ವಿದ್ಯಾರ್ಥಿನಿಲಯ (Free hostel) ಗಳನ್ನು ನಡೆಸುತ್ತಿದ್ದಾರೆ.

ಇದು ಪರ್ವತ (ಶ್ರೀಶೈಲ) ಮಠಕ್ಕೆ ಸೇರಿದ್ದು—*3 ಎಂಬುದಾಗಿ ಕೆಲವರ ಅಭಿಪ್ರಾಯ.

ಒಂದಾನೊಂದು ಕಾಲದಲ್ಲಿ ಶಿವಗಂಗಾ ಕ್ಷೇತ್ರವೊಂದರಲ್ಲಿಯೇ ಅರವತ್ತು ನಾಲ್ಕು ವೀರಶೈವ ಮಠಗಳಿದ್ದುದಕ್ಕೆ ನಿದರ್ಶನಗಳುಂಟು.

ಬೆಟ್ಟದ ಬುಡದಲ್ಲಿ ದ್ವಾರಕ್ಕೆದುರಾಗಿರುವ ಲಿಂಗತೀರ್ಥ ಅಥವಾ ಅಗಸ್ತ್ಯತೀರ್ಥ ಅಗಸ್ತ್ಯ ಮಹರ್ಷಿಗಳಿಂದ ನಿರ್ಮಿತವಾದದ್ದೆಂದು ಪ್ರತೀತಿಯಿದೆ.

ಇನ್ನೊಂದು ಕಲ್ಯಾಣತೀರ್ಥ ; ಇದನ್ನು ಕಪಾಲತೀರ್ಥವೆಂದೂ ಕರೆಯುತ್ತಾರೆ. ಇದರ ಮೆಟ್ಟಿಲು, ಜಗುಲಿ, ಶಿಲ್ಪಕೆಲಸ ಅತ್ಯಂತ ಮನೋಹರವಾಗಿವೆ.

ಅರ್ಧಬೆಟ್ಟದ ಸುಮಾರಿನಲ್ಲಿ 'ದೊಡ್ಡಬಸವ' ವಿಗ್ರಹ (12′ × 9′ × 10′)-ಹಾಗೂ ಕಲ್ಲು-ಬಾಗಿಲುಗಳನ್ನು ದಾಟಿ ಕೆಲವು ಗಜ ದೂರ ಹೋದರೆ ಬಾವಿಯಂತೆ ಕಾಣುವುದೇ 'ಕಣ್ವ'ತೀರ್ಥ. ಇದು ಕ್ರಿ. ಶ. 1652 ರಲ್ಲಿ ಶಿವಾಜಿಯ ತಂದೆ ಷಹಜಿಯಿಂದ ಕಟ್ಟಿಸಲ್ಪಟ್ಟಿತೆಂದು ಶಾಸನವಿರುತ್ತದೆ.

ಕೆಂಪೇಗೌಡನ ಹಜಾರವೆಂಬ ನೂರು ಅಂಕಣದ ಸಾಮಾನ್ಯ (ದರ್ಬಾರ್ ಹಾಲ್) ಆಸ್ಥಾನ ಮಂಟಪಕ್ಕೆ ಸಮೀಪದಲ್ಲಿ ಪೂರ್ವದ ಕಡೆಗೆ 'ಚಕ್ರತೀರ್ಥ'ವೆಂಬ ಸುಂದರ ಕೊಳವೊಂದಿದೆ. ಅನತಿದೂರದಲ್ಲಿ 'ಆನೆದೊಣೆ'ಯೆಂಬೊಂದು ಕೊಳವಿದೆ. ಚಕ್ರತೀರ್ಥದಿಂದ ಕೊಂಚ ದೂರ ಮೇಲೆ ಹೋದಲ್ಲಿ 'ಶಂಕರಾಚಾರ್ಯತೀರ್ಥ'ವಿದೆ. ಇದರಿಂದ ಆದಿ-ಶಂಕರರೂ ಇಲ್ಲಿ ತಪಸ್ಸನ್ನಾಚರಿಸಿದರೆಂಬುದು ವಿದಿತವಾಗುತ್ತದೆ.

ಬೆಟ್ಟದ ಉತ್ತರಕ್ಕಿರುವ ಇಳಿಜಾರಿನಲ್ಲಿ 'ಮೈತ್ರೇಯತೀರ್ಥ'ವೂ, ದಕ್ಷಿಣ ದಿಕ್ಕಿನ ಇಳಿಜಾರಿನಲ್ಲಿ 'ಮೌದ್ಗಲ್ಯತೀರ್ಥ'ವೂ ಪ್ರಕೃತಿ ಸಹಜವಾದ ಬಯಲಿನಲ್ಲಿ ಕಂಗೊಳಿಸುತ್ತಿವೆ. ಮೌದ್ಗಲ್ಯತೀರ್ಥದ ಬಳಿಯಲ್ಲಿಯೇ ಸುಮಾರು ಐದು ಅಡಿಗಳ ಎತ್ತರದ ಮುದ್ದುವೀರೇಶ್ವರ ಮೂರ್ತಿಯಿರುತ್ತದೆ. ಇದು ಪ್ರಸಿದ್ಧ ಮುನೇಶ್ವರ ಕ್ಷೇತ್ರವೆನಿಸಿದ (ಸುಮಾರು ಮೂರು ಮೈಲಿ ದಕ್ಷಿಣಕ್ಕಿರುವ) ಕಾಚಕಲ್ಲಪ್ಪನ ಬೆಟ್ಟಕ್ಕೆದುರಾಗಿದೆ. ಪಶ್ಚಿಮಕ್ಕೆ ಇರುವ ತಪ್ಪಲಿನ 'ಗಂಗಾತೀರ್ಥ'ವೂ, ಸಮೀಪದಲ್ಲಿಯೇ ಚಿಕ್ಕ ದೇವರಾಜ ಒಡೆಯರ ಸಾಮಂತನಾಗಿದ್ದ ದಾಸರಾಜಯ್ಯನೆಂಬುವನು ಕಟ್ಟಿಸಿದ ಕೊಳ-ಮಂಟಪಗಳೂ ಇವೆ.

ಶಿವಗಂಗೆಯು ಊರಿಗೆ ಸೇರಿದಂತೆಯೇ, ಅಂದರೆ ಬೆಟ್ಟ ಹತ್ತುವ ದ್ವಾರಕ್ಕೆ ಸಮೀಪದಲ್ಲಿ ಇರುವ ಶಾಂತೇಶ್ವರ ದೇವಾಲಯವು ಕ್ರಿ. ಶ. 1131 ರಲ್ಲಿ *4 ಈ ಕ್ಷೇತ್ರ

*3 ಶ್ರೀಶೈಲ ಪೀಠದರ್ಶನ-ಪುಟ ೨೮೬ Mysore Gazetteer-vol V page 226

*4 ಶ್ರವಣ ಬೆಳಗೊಳ ಶಾಸನ 53

ದಲ್ಲಿ ದೈವಾಧೀನಳಾದ ಹೊಯ್ಸಳ ವಿಷ್ಣುವರ್ಧನನ ಪಟ್ಟದ ರಾಣಿ ಶಾಂತಲಾದೇವಿಯ ಹೆಸರಿನಿಂದ ಕಟ್ಟಲ್ಪಟ್ಟಿದೆಯೆಂಬ ಹೇಳಿಕೆಯುಂಟು.

ಅದರಂತೆ ಕೆಳಗಡೆಯೇ ಇರುವ ರುದ್ರೇಶ್ವರ ದೇವಾಲಯದಲ್ಲಿ 6 ಅಡಿಗಳೆತ್ತರದ ವೀರಭದ್ರಸ್ವಾಮಿಯ ಸುಂದರ ವಿಗ್ರಹವಿದೆ. ಈ ದೇವಸ್ಥಾನದ ಉತ್ತರಕ್ಕೆ ಒಂದು ಒಳ್ಳೆಯ ಸರೋವರವೂ, ಪಾಳುಬಿದ್ದ 'ಮಹಂತನ ಮಠ'ವೆಂಬ ಲಿಂಗಾಯಿತ ಮಠವೂ ಇವೆ. ಇದರಲ್ಲಿನ ಕಂಬಗಳಲ್ಲಿ ಸೊಗಸಾದ ಚಿತ್ರಗೆಲಸದ ಕೆತ್ತನೆಯುಂಟು. ಅವುಗಳಲ್ಲಿ ಲಿಂಗೋಧ್ಭವ-ಶಿವಮೂರ್ತಿಯ ಮೇಲಗಡೆಗೆ ಬ್ರಹ್ಮನೂ, ಕೆಳಗಡೆಗೆ ವಿಷ್ಣುವೂ ಮಹಾದೇವನ ಶ್ರೀ ಮುಕುಟ-ಶ್ರೀಚರಣಗಳನ್ನು ಮುಟ್ಟುವ ಸ್ಪರ್ಧೆಯಿಂದ ಹೋಗುತ್ತಿರುವ ಚಿತ್ರಣ ಹೃದಯ ಸ್ಪರ್ಶಿಯಾಗಿದೆ.

ಶಿವಗಂಗೆ ಸ್ಮಾರ್ತಮಠ (ಶೃಂಗೇರಿ ಶಾಖಾಮಠ) ಬೆಟ್ಟದ ಕೆಳಗೆ ಅಂದರೆ ಉತ್ತರ ದಿಕ್ಕಿಗೆ ಒಂದೂವರೆ ಫರ್ಲಾಂಗು ದೂರದಲ್ಲಿ ನೂತನವಾಗಿ ಕಟ್ಟಲ್ಪಟ್ಟಿದೆ. ಇಲ್ಲಿರುವ ಶಾರದಾದೇವಿಯ ವಿಗ್ರಹ ಸ್ಫಟಿಕಶಿಲೆಯಿಂದ ಮಾಡಿದ್ದು. ಮನೋಹರವಾದ ಮೂರ್ತಿಯಿದು.

ಬೆಟ್ಟದ ಬುಡದಿಂದ ತುದಿಯವರೆಗೆ ಹತ್ತಿ ಹೋಗುವಾಗ ಮೆಟ್ಟಿಲು ಮಾರ್ಗದ ಇಕ್ಕೆಲಗಳಲ್ಲಿ ಸಿಕ್ಕುವ ಪ್ರೇಕ್ಷಣೀಯಾಂಶಗಳಲ್ಲಿ ಎಮ್ಮೆ ಬಸವ, ಗಾರೆ ಬಸವ, ಒನಕೆ ಕಿಂಡಿ, ಸದೆಕಲ್ ವೀರಭದ್ರ ಗಂಜಿ ವೀರಭದ್ರ, ಚಿಗಟನ ಗವಿ, ತೊಡೆನಡುಗು ಬಂಡೆ, ಕೋಡಗಲ್ಲು ಬಸವ—ಇವು ಮುಖ್ಯವಾದವು. ಹಿಂದೆ ಗಂಗಾಧರೇಶ್ವರ ದೇವಾಲಯದ ಅಡಿಗೆಮನೆಯಲ್ಲಿ ಅನ್ನಬಸಿಯುವಾಗ ಬರುತ್ತಿದ್ದ ಗಂಜಿ ಈ ವೀರಭದ್ರನನ್ನು ಕೆತ್ತಿರುವ ಬಂಡೆಯವರೆವಿಗೂ ಹರಿದು ಬರುತ್ತಿದ್ದುದರಿಂದ, ಇದಕ್ಕೆ ಆ ಹೆಸರು ಬಂದಿದೆಯೆಂದು ಶ್ರೀ॥ ಹಯವದನರಾಯರು ಬರೆದಿರುತ್ತಾರೆ. *5

ಅರ್ಧಬೆಟ್ಟ ಹತ್ತಿದ ಮೇಲೆ ಸಿಕ್ಕುವ ವಿಶಾಲವಾದ ಕಡಿದಾದ ಬಂಡೆಯ ಮೇಲೆ ಹೋದಾಗ ಎಂತಹವರಿಗೂ ತೊಡೆಗಳು ಅದುರಿದಂತೆ ಅನುಭವವಾಗುವುದರಿಂದ, ಈ ಬಂಡೆಗೆ ತೊಡೆನಡುಗು-ಬಂಡೆ ಎಂದೇ ಹೆಸರು ಬಂದಿದೆ.

ಅಲ್ಲಿಂದ ಮುಂದೆ ಕಂಬಿ ಹಿಡಿದು ಮೇಲೆ ಹತ್ತಿಹೋದಾಗ ಪರ್ವತಾಗ್ರವನ್ನು ಮುಟ್ಟುವಲ್ಲಿ ಎಡದ ತುದಿಯಲ್ಲಿ ಕಾಣಿಸುವುದೇ ಕೋಡಗಲ್ಲು ಬಸವ. ಕ್ರಿ. ಶ. 1388 ರಲ್ಲಿ ಇದನ್ನು ಕಡೆಯಲಾಗಿದೆ. ಆ ಶಿಲ್ಪಿ ಮಹಾನುಭಾವರು ಅಷ್ಟು ಇಕ್ಕಟ್ಟಾದ ಪ್ರದೇಶದಲ್ಲಿ ಅದು ಹೇಗೆ ಕೆತ್ತಿದರೋ, ಆ ಗಂಗಾಧರೇಶ್ವರನೇ ಬಲ್ಲ! ಇದರ ಸುತ್ತ ಈಚೆಗೆ ಕಂಬಿ ಹಾಕಿರುತ್ತಾರೆ. ಇದನ್ನು ಸುತ್ತಿದರೆ ಪುಣ್ಯ ಬರುತ್ತದೆ-ಎಂದು ಹೇಳುವ ಪರಿಪಾಠಿಯುಂಟು. ಇಲ್ಲಿಂದ ಶಾಂತಲಾದೇವಿ ಕೆಳಗೆ ಬಿದ್ದು ಪ್ರಾಣ ಬಿಟ್ಟಳೆಂದು ಕಥೆಯಿದೆ. *6 ಶಿವಗಂಗೆಯಲ್ಲಿ ಈಗಲೂ ಆಚರಿಸುತ್ತಿರುವ ಶಾಂತಮ್ಮನ ಹಬ್ಬವೆಂಬ ದಿನಾಚರಣೆಯು ಚಕ್ರವರ್ತಿನಿಯಾದ ಶಾಂತಲೆಯ ಪುಣ್ಯ ಸ್ಮರಣೆಯ ಸಂಕೇತವಾಗಿರಬಹುದು.

ಬೆಟ್ಟದ ಮೇಲ್ಭಾಗದಲ್ಲಿ ಇರುವ ತೀರ್ಥಕಂಬ ಹದಿನೈದು ಅಡಿಗಳಷ್ಟು ಎತ್ತರವಾಗಿದೆ. ಈ ಕಂಬದ ಎಂಟು ಮುಖ (ಮೂಲೆ) ಗಳ ಪೈಕಿ, ನಾಲ್ಕು ಮುಖಗಳಲ್ಲಿ ಹೊಯ್ಸಳ ನರಸಿಂಹನ ಕಾಲದ ಶಾಸನವಿದೆ. ಕಂಬದ ಉತ್ತರದ ಕಡೆ ಒಂದು ಸಣ್ಣ ಗುಳಿಯಿದೆ. ಮಕರ ಸಂಕ್ರಾಂತಿಯ ದಿನ ಬೆಳಗಿನ ಝಾವದಲ್ಲಿ ಸ್ವಲ್ಪ ನೀರು ಕಾಣಿಸಿಕೊಳ್ಳುತ್ತದೆ. ಅದನ್ನು ಗಂಗಾಧರೇಶ್ವರ ದೇವಾಲಯದ ಅರ್ಚಕರು ಮಡಿಯಿಂದ ತೆಗೆದುಕೊಂಡು ಬಂದು, ಅದರಲ್ಲಿ ಸ್ವಲ್ಪ ಭಾಗದಿಂದ ಸ್ವಾಮಿಗೆ ಅಭಿಷೇಕ ಮಾಡಿ ಉಳಿದುದನ್ನು ಮೈಸೂರು ಅರಮನೆಗೆ ರವಾನಿಸುವಪದ್ಧತಿ ಬಹಳಕಾಲದಿಂದಲೂ ರೂಢಿಯಲ್ಲಿದೆ.

ಶಿವಗಂಗೆಯ ಸುತ್ತ ಕಂಬಾಳು ಮರುಳ ಸಿದ್ಧೇಶ್ವರ ಸ್ವಾಮಿಯ ಮಠ, ಕಂಚುಗಲ್ ಬಂಡೆಮಠ, ಚಿಲುಮೆ ಮಠ, ತೋಪಿನ ಮಠ—ಎಂಬೀ ವೀರಶೈವ ಗುರು ಪರಂಪರಾ ಸಂಸ್ಥೆಗಳೂ ಮಹಿಮ ರಂಗನ ಗುಡ್ಡ, ರಾಮ

*5 Mysore Gazetteer—V see Sivaganga
*6 ಕೆ. ವಿ. ಅಯ್ಯರ್‌ರವರ 'ಶಾಂತಲಾ' ಕಾದಂಬರಿ.

ದೇವರ ಬೆಟ್ಟ, ರಸ ಸಿದ್ಧರ ಬೆಟ್ಟ ಮುಂತಾದ ಪುಣ್ಯ ಸ್ಥಳಗಳೂ ಇರುವುದು ಒಂದು ವೈಶಿಷ್ಟ್ಯವೆನ್ನಬಹುದು.

ಹದಿನೈದನೆಯ ಶತಮಾನದಲ್ಲಿ ವೀರಶೈವ ತತ್ತ್ವ ಪ್ರಸಾರ ಮಾಡಲು ಬಹಳವಾಗಿ ಶ್ರಮಿಸಿದ ಮಹಾ ಮಹಿಮಾ ಪುರುಷ ಶ್ರೀ ತೋಂಟದ ಸಿದ್ಧಲಿಂಗೇಶ್ವರರು ಶಿವಗಂಗೆಯಲ್ಲಿಯೂ ಸಂಚರಿಸಿ ಸತ್ತ ಮೊಲವನ್ನೂ ಬೇಡನನ್ನೂ ಬದುಕಿಸಿದ ಪ್ರಸಂಗ ವಿರಕ್ತ ತೋಂಟದಾರ್ಯ ವಿರಚಿತ ಶ್ರೀ ಸಿದ್ಧೇಶ್ವರ ಪುರಾಣದಲ್ಲಿ ಉಕ್ತವಾಗಿದೆ *7

ಹೀಗೆ ಪುರಾಣಕಾಲದಿಂದಲೂ ಒಂದೇ ಸಮನೆ ಆಕರ್ಷಕವಾದ ಜಾಗೃತಸ್ಥಾನವೆನಿಸಿ ಮೆರೆದು ಸಿದ್ಧ—ಸಾಧ್ಯರತಪೋಭೂಮಿಯಾಗಿ, ಜಾತಿ ಮತಗಳ ಅಂತರವಿಲ್ಲದೆ ಎಲ್ಲ ಜನರೂ ತನ್ನಲ್ಲಿಗೆ ಧಾವಿಸಿ ಅರ್ಚನಾದಿಗಳಿಂದ ಪುನೀತರಾಗಬೇಕೆನ್ನುವ ಪುಣ್ಯಕ್ಷೇತ್ರ—ಶಿವಗಂಗೆ. ಬಹುಮಟ್ಟಿಗೆ ಸಿದ್ಧಗಂಗೆ ಮತ್ತು ಶಿವಗಂಗೆ ಇವೆರಡನ್ನೂ ಒಟ್ಟಿಗೆ ವೀಕ್ಷಿಸಲು ಸಂಕಲ್ಪಿಸಿ ಬರುವ ಯಾತ್ರಿಕರೇ ಹೆಚ್ಚು, ಅಂದಮೇಲೆ ಈಯೆರಡು ತೀರ್ಥಕ್ಷೇತ್ರಗಳಿಗಿರುವ ಪರಸ್ಪರ ಸಂಬಂಧ ವಿದಿತವಾಗಬಹುದು.

---

*7 ಪರಮ ಪರಶಿವ ಪರಾತ್ಪರ ಮೂರ್ತಿ ಸಿದ್ಧಗುರು |
ವರನೊಲವಿನಿಂ ಕಕುದ್ಗಿರಿಗೆಯ್ದಿ ಶಶಕನಂಶ-|
ಬರನ ರಕ್ಷಿಸಿ ಲಿಂಗದಿಂದೆ ಕದನಂ ತೆರಳಿಸಿದಂ ನಾಗ ಶರಧಿಯಲ್ಲಿ || (ಸೂ-ಸಂಧಿ ೧೭)

---

ಸಲೆ ಕಣಾದಂ ಕುಂಭಸಂಭವಂ ಮುನಿಪತಿಕ—|
ಪಿಲನು ಮೌದ್ಗಲನು ಮುಂತಾದ ಋಷಿವರರೆಲ್ಲ |
ನೆಲಸಿ ತಪನಿಂದ ಭೀಷ್ಟಂಗಳಂ ಪಡೆದರಂತವರ ನಾಮಮೊಳೊಪ್ಪುವಾ||

ವಿಲಸಿತ ಮಹಾತೀರ್ಥಗಳ ಗುಪ್ತನದಿಗಳಂ |
ಬಿಲಗಳಂ ನೋಡುತಾ ಗಂಗಾಧರಂಗೆ ಕರ—|
ತಲದಿಂ ವಿಭೂತಿಯಂ ಧರಿಸಿ ಪೊನ್ನಾದೇವಿಗಂ ಭಸಿತವಿಟ್ಟನೊಲ್ದು ||
(ಸಿ||ಪು||೧೭:೬)

ಪರಿವೃತಿರಲೊಂದು ಕುಳಿಯೊಳು ಲುಬ್ಧಕಂಬೀಳ—|.
ಲೆರಡು ಚರಣಂ ಮುರಿಯಲಾತನಾಳ್ಕುತೆ ಯತೀ—|
ಶ್ವರನ ಮುಂದಿರ್ಪ ಮೊಲನಂ ಕಂಡು ಸಾಕ್ಷಾತ್ ಕಪರ್ದಿಯಲ್ಲದೆ
ಮಾಣನು ||

ಪರಿಕಿಸಲ್ ಸಾಮಾನ್ಯನಲ್ಲೆಂದು ನುತಿಸುತಿರೆ |
ಕರುಣದಿನವಂಗೆ ಚರಣಂಗುಡಲ್ಭಕ್ತಿಯಿಂ |
ಪರಿತಂದು ವಂದಿಸಿ ವಿಹಂಗ ಮೃಗಗಳ ಕೊಲ್ಲೆನೆಂದು ನೇಮಂದಾಳ್ದನು ||
(ಸಿ||ಪು|| ೧೭-೮)

ಭದ್ರಂ—ಶಿವಂ—ಮಂಗಳಂ

---



ಮೈಸೂರು ರಾಜ್ಯದ ಹಣಕಾಸಿನ ಸಚಿವರಾದ ಶ್ರೀ ರಾಮಕೃಷ್ಣ ಹೆಗಡೆಯವರು ಈ ಸಾಲಿನ ವ್ಯವಸಾಯ ಮತ್ತು ಕೈಗಾರಿಕಾ ವಸ್ತುಪ್ರದರ್ಶನವನ್ನು ಉದ್ಘಾಟಿಸುತ್ತಿರುವ ದೃಶ್ಯ

ವ್ಯವಸಾಯ ಮತ್ತು ಕೈಗಾರಿಕಾ ವಸ್ತುಪ್ರದರ್ಶನದ ಮುಕ್ತಾಯ ಸಮಾರಂಭದಲ್ಲಿ ಮೈಸೂರು ರಾಜ್ಯದ ಆರೋಗ್ಯ ಸಚಿವರಾದ ಶ್ರೀ ಕೆ. ಪುಟ್ಟಸ್ವಾಮಿಯವರು ಬಹುಮಾನ ವಿತರಣೆ ಮಾಡುತ್ತಿರುವ ಸಂದರ್ಭ

